'ದೀಪದ ಮಲ್ಲಿ' ಎಂಬ ನನ್ನ ಪದ್ಯದಲ್ಲಿ 'ಮೌನ'ದ ಮಾತು ಬರುತ್ತದೆ. ಆ ದೀಪದ ಮಲ್ಲಿ ನನ್ನ ಹತ್ತಿರಿರುವ ಒಂದು ಗೊಂಬೆ; ಶಿವಮೊಗ್ಗದಲ್ಲಿ ಒಬ್ಬರು ಅದನ್ನು ನನಗೆ ಕೊಟ್ಟರು. ಕೈಯಲ್ಲಿ ಒಂದು ಆರತಿ ಹಿಡಕೊಂಡು ನಿಂತುಬಿಟ್ಟಿದೆ ಆ 'ದೀಪದ ಮಲ್ಲಿ'ಯ ಗೊಂಬೆ! ಅದಕ್ಕೆ ನಾನು ಕೇಳಿಯೇ ಕೇಳುತ್ತೇನೆ: ''ಯಾರ ಸಲುವಾಗಿ ಈ ಪ್ರಣತಿಯನ್ನು ಹಿಡಿದು ನಿಂತುಬಿಟ್ಟಿದ್ದೀಯಾ? ಒಳಗೆ ಎಣ್ಣೆ ಇಲ್ಲ, ಬತ್ತಿ ಇಲ್ಲ, ದೀಪವಂತೂ ಇಲ್ಲವೇ ಇಲ್ಲ! ನಿನ್ನ ಮುಖದ ಮೇಲೆ ಈ ಸ್ಮಿತ ಇದೆಯಲ್ಲ! ಆ ಸ್ಮಿತದಲ್ಲಿ ಎಲ್ಲ ಇದೆ- ಆ ದೀಪ, ಆ ಸ್ನೇಹ, ಆ ಪ್ರಣತಿ, ಆ ವರ್ತಿಕಾ. ಈ ಆರತಿ ಯಾರಿಗೆ ಎತ್ತಿರುವೆ, ತಾಯಿ?'' ಹೀಗೆ ಕೇಳಿದರೆ, ಅದು ಕೊನೆಗೆ ಹೇಳುತ್ತದೆ: ''ನಾನು ಹ್ಯಾಂಗ ಸುಮ್ಮನಿದ್ದೇನೆ, ಹಾಗೆ ಸ್ವಲ್ಪ ಹೊತ್ತು ಸುಮ್ಮನಿರು.'' ಸುಮ್ಮನಿದ್ದಾಗ ಕಾಣುವಂಥಾದ್ದು- ಆ ಸ್ನೇಹ, ಆ ಪ್ರಣತಿ, ಆ ವರ್ತಿಕಾ, ಆ ದೀಪಶಿಖೆ!'



ಚಿತ್ರ: ಹಲ್ದಂಕರ್

- ದ. ರಾ. ಬೇಂದ್ರೆ

---

ಸಮಯದ ಸಡಗರವನ್ನು ಹೆಚ್ಚಿಸಲೆಂದೇ, ವಿವಿಧ ಸ್ಫೂರ್ತಿದಾಯಕ ಸಾಮಗ್ರಿ, ರೂಪ, ನೋಟಗಳಿಂದ ಈ ಸಂಚಿಕೆಯ ಪುಟಗಳನ್ನು ಬೆಳಗಿಸಿದ್ದೇವೆ.

''ದಾಂಪತ್ಯ ನಿಷ್ಠೆಯ ಪರಿಕಲ್ಪನೆ ಬದಲಾಗುತ್ತಿದೆಯೆ?''- ಕುರಿತ ವಿಚಾರ ಸಂಗಮ, ಶ್ರೇಷ್ಠ ಕಲಾಗುರು ಕೆ.ಬಿ.ಕುಲಕರ್ಣಿಯವರಿಂದ ''ಕಲಾವಿದ್ಯಾರ್ಥಿಗಳಿಗೆ ಕಿವಿಮಾತು'', ಮಕ್ಕಳ ಪ್ರತಿಭೆಗೆಂದೇ ಆರಂಭಿಸಲಾದ ''ಮೊಗ್ಗಿನ ಜಡೆ''- ಇವುಗಳ ಜತೆ ಎಂದಿನಂತೆ ಉತ್ಕೃಷ್ಟ ಸಾಹಿತ್ಯವನ್ನು ಕಲೆಹಾಕುವ ಯತ್ನ ಇಲ್ಲಿದೆ.

ಬೇಂದ್ರೆ, ಹೇಳಿದಂತೆ, ಆ ಸ್ನೇಹವನ್ನು, ಆ ಪ್ರಣತಿಯನ್ನು, ಆ ದೀಪಶಿಖೆಯನ್ನು, ಮೌನದಲ್ಲೇ ಕಾಣುವ ಪ್ರಯತ್ನ ನಮ್ಮದಾಗಲಿ. .

ಸಂಪಾದಕ

# ಭಾವ ಲೋಕ

## ಕತೆಗಳು



## ಶತಮಾನದ ಮೆಲುಕು



## ವಿಶ್ವ ಭಾರತಿ



## ಹೊಸ್ತಿಲಲ್ಲಿ ಕೂತ ಮನುಷ್ಯ





# ಭಾವನಾ

ಸಂಪುಟ -1 ಸಂಚಿಕೆ - 8
ನವೆಂಬರ್ 2000



ಪ್ರಕಾಶಕರು, ಮುದ್ರಕರು, ಮಾಲಿಕರು
ವಿಜಯ ಸಂಕೇಶ್ವರ
ಆನಂದ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್

ಸಂಪಾದಕ
ಜಯಂತ ಕಾಯ್ಕಿಣಿ

ಮುಖಪುಟ ಕಲಾಕೃತಿ : ಕೆ.ಬಿ. ಕುಲಕರ್ಣಿ

ಸಂಚಿಕೆಯ ಕಲಾವಿದರು: ಸೃಜನ್, ಇಕ್ಬಾಲ್ ಅಹ್ಮದ್, ಚಂದ್ರಕಾಂತ ಕುಸನೂರ್, ಪ.ಸ. ಕುಮಾರ್, ಗೀತಾ ಸಾಳುಂಕೆ, ಉಮೇಶ್, ದೇವದಾಸ್, ರಾಧಾಕೃಷ್ಣ ಬಂದಗದ್ದೆ ಪ್ರೀತಿ ಸಂಯುಕ್ತಾ, ಸುಮಂಗಲಾ ಬಾದರದಿನ್ನಿ, ಅಪಾರ, ಶಶಿಧರ್, ಶ್ರೀಪಾದ್

ಸಂಪಾದಕೀಯ ಕಾರ್ಯಾಲಯ
ನಂ. 32, 2ನೆಯ ಮುಖ್ಯರಸ್ತೆ, ವೈಯಾಳಿಕಾವಲ್
ಬೆಂಗಳೂರು - 560 003
ದೂರವಾಣಿ : 3365312, 3365313
ಫ್ಯಾಕ್ಸ್: 080-3340311

ಪ್ರಧಾನ ಕಛೇರಿ
ಗಿರಿರಾಜ ಅನೆಕ್ಸ್
ಸರ್ಕ್ಯೂಟ್ ಹೌಸ್ ರಸ್ತೆ, ಹುಬ್ಬಳ್ಳಿ
ದೂರವಾಣಿ: 0836-253656, 253657
ಫ್ಯಾಕ್ಸ್: 0836-253630



# ಮೊಗ್ಗಿನ ಜಡೆ



ಭಾವನಾ ಎಸ್. ಘಂಟಿ



## ಟ್ರಿನ್ ಟ್ರಿನ್

ಮುಂಜಾನೆಯಿಂದ
ಟ್ರನ್ ಟ್ರನ್ ಅಂತ
ಬಡಕೊಂಡ ಬಡಕೋತದ ಫೋನು
ಸಂಜೀತನ
ಅಪ್ಪಾ ಅಂತಿರತಾರ
ಫೋನು, ಫೋನು
ಅದ್ರೊಳಗ ನಾನಿರೋದೇ ಇಲ್ಲ
ಅದು ನನಗಾಗಿ
ಟ್ರನ್ ಟ್ರನ್ ಅನ್ನೋದೆ ಇಲ್ಲ.



## ಗಪ್ ಚುಪ್!

ಕಟ್ಟೆಯ ಮೇಲೆ ಪುಟ್ಟೆಯು ಕೂತು
ಅಮ್ಮನ ಕಾಯುವಳು
ಊಟದ ಡಬ್ಬಿ
ತೆಗೆಯದಾದಾಗ
ರಂಪಾ ಮಾಡುವಳು
ಆಯಾ ಬಂದು
ಡಬ್ಬಿಯ ತೆಗೆದು
ಮುತ್ತನು ಕೊಡುವಳು
ಪುಟ್ಟಿ ಗಬಗಬ ತಿಂದು
ನೀರನು ಕುಡಿದು
ಡಬ್ಬಿಯ ತೊಳೆಯುವಳು
ಪಂಚಮಿ ಉಂಡೆ
ಬಾಯೊಳಗಿಟ್ಟು
ಗಪ್ ಚುಪ್
ಎನ್ನುವಳು



## ನವಿಲೆ ನವಿಲೆ

ನವಿಲೆ ನವಿಲೆ ಬಣ್ಣದ ನವಿಲೆ
ನೀನೂ ನಾನೂ ಆಡೋಣ ಬಾ
ರೆಕ್ಕೆಯ ಬಿಚ್ಚಿ ಟೀವನು ಹಚ್ಚಿ
ಕುಣಿದು ಕುಪ್ಪಳಿಸಿ ನಲಿಯೋಣ ಬಾ
ಉಂಡಿಯ ಮಾಡುತ ಅಮ್ಮನು ಇರುವಳು
ಅಂಗಳವೇ ಖಾಲಿ
ಪಂಚಮಿ ಹಬ್ಬಕೆ ಪೂರ್ತಿ ಸೂಟಿ
ನಮ್ಮಯ ಆ ಸಾಲಿ
ಗೆಳೆಯರು ಇಲ್ಲ ಗೆಳತಿಯರೂ ಇಲ್ಲ
ನೀನಾದರೂ ಬಾರೆ.
ಹೊಡೆಯುವುದಿಲ್ಲ ಬಡಿಯುವುದಿಲ್ಲ
ದಮ್ಮಯ್ಯ ನೀ ಬಾರೆ.



ಹೂ ಚಿತ್ರಗಳು: ಬಾ ಸುಮಾ

## ತುಂಟರು

ಪಟ ಪಟ ಹಾರುತ್ತವೆ
ಪಾರಿವಾಳಗಳು

ಟಪ ಟಪ ಜಿಗಿಯುತ್ತವೆ
ಕಪ್ಪೆಗಳು

ಸರ ಸರಾ ಹೋಗುತ್ತವೆ
ಇರುವೆಯ ಮೇಳ
ಚಿಂವ್ ಚಿಂವ್ ಎಂದೋಡುತ್ತವೆ
ಇಲಿಗಳ ಮೇಳ
ಚಿಕ್ ಚಿಂವ್ ಚಿಂಕ್ ಚಿಂವ್ ಎಂದೋಡುತ್ತವೆ
ಅಳಿಲು

ಬರ್‌ಬರ್ ಜುರ್ ಜುರ್ ಜುರ್
ಎಂದಾಡುತ್ತವೆ ಬೋರಂಗಿಗಳು
ಇವರೇ ನನ್ನ ಗೆಳತಿಯರು
ಶಾಲೆಗೆ ನಾ ಹೋಗುವಾಗ
ಟಾಟಾ ಮಾಡುವ ತುಂಟರು!



## ಹೂವೆ ಹೂವೆ

ಹೂವೆ ಹೂವೆ
ಬಾರೆ ಹೂವೆ
ನಿನ್ನ ಬಿಟ್ಟು ನಾ ಎಲ್ಲಿರುವೆ
ನನ್ನ ಬಿಟ್ಟು ನೀ ಹೇಗಿರುವೆ?

## ನನಗೆ ಬಂದಷ್ಟೇ ಬರಿಯೋದು

ಆಟ ಆಡುತಿದ್ದರೆ ಅನ್ನೋದು
ಮನೆಗೆ ಹೋಗಲೇಬಾರದು
ಸಿಟ್ಟು ಮಾಡಿದ ಅಮ್ಮನ ಕೆಲಸ
ಮಾಡಲೇಬಾರದು
ಅಮ್ಮ ಅಂತಾಳೆ
ಪರೀಕ್ಷೆಯಲಿ ಪ್ರಶ್ನೆ ಬಿಡಲೇಬಾರದು
ಅಪ್ಪನ ಮುಂದೆ ನಾ ಹೇಳ್ತೀನಿ
ನನಗೆ ಬಂದಷ್ಟೇ ಬರಿಯೋದು!



ಚಿತ್ರ: ಕುಸುಮಾ

ಇದು ಮುದ್ದು ಮಕ್ಕಳ ಮುಕ್ತ ಪುಟ. ಮಕ್ಕಳೇ ಬರೆದ ಚಿತ್ರ, ಕಥೆ, ಚುಟುಕ, ಕವಿತೆಗಳಿಗೆ ಸ್ವಾಗತ.

# ಮಳೆಯಲ್ಲಿ ನೆನೆದ ಕಮಲಗಳು



ಫಡ್-ಫಡ್-ಫಡಾರ್! ಪ್ರಕಾಂಡವಾದ ಕಾಡು, ತೋಟಗಳ ಅಂಧಕಾರ ಕ್ಷಣ ಮಾತ್ರ ಆ ದಿಕ್ಕಿನಿಂದ ಈ ದಿಕ್ಕಿನವರೆಗೂ ಕರಗಿಹೋದಂತೆ, ಕಣ್ಣುರೆಪ್ಪೆ ಮುಚ್ಚುವ ಅವಧಿಯೊಳಗೆ ನಾಲ್ಕೂದಿಕ್ಕೂ ಬೆಳಗಾಗಿ ಪುನಃ ಮಾಯವಾಯಿತು. ಕತ್ತಲರಾಜ್ಯ ಪುನರುತ್ಥಾನವಾಯಿತು. ಗಿಡಮರಗಳೆಲ್ಲಾ ಸ್ವಾಧೀನ ತಪ್ಪಿದಂತೆ ಬಿರುಗಾಳಿಯ ಶರಣಾಗತರಾಗಿ ಪ್ರತಿಭಟನೆಯೇ ಇಲ್ಲದೆ ಅಲ್ಲಾಡುತ್ತಿದ್ದುವು. ಅಪೂ ದುರ್ಗಾಳನ್ನು ಅಪ್ಪಿ ಹಿಡಿದುಕೊಂಡು ಭಯದಿಂದ 'ಲೇ-ಅಕ್ಕಾ!'' ಎಂದತ್ತನು.

''ಭಯವೇಕೋ ಸುಮ್ಮನಿರು. ರಾಮರಾಮ ಜಪಮಾಡು.''

ಅಷ್ಟರಲ್ಲಿ ಮಳೆಯಿಂದ ಅವಳ ಕೂದಲು, ಬಟ್ಟೆ ಪೂರ್ತಿ ಒದ್ದೆಯಾಗಿ ಅವುಗಳಿಂದ ನೀರು 'ಟಪ್, ಟಪ್' ಎಂದು ತೊಟ್ಟಿಡಲು ಶುರುವಾಯಿತು. ಆಗ 'ಗುಮ್-ಗುಮ್-ಗುಮ್-ಮ್-ಮ್' ಎಂಬ ಅರ್ಧಮರ್ಧ ಗಂಭೀರ ಶಬ್ದ; ಯಾವುದೋ ಒಂದು ವಿಶಾಲವಾದ ಲೋಹದ ಸಲಾಕಿಯನ್ನು ಯಾರೋ ಆಕಾಶದ ಲೋಹದ ನೆಲದ ಮೇಲೆ ಈ ದಿಕ್ಕಿನಿಂದ ಆ ದಿಕ್ಕಿನವರೆಗೆ ಎಳೆದುಕೊಂಡು ತಿರುಗುತ್ತಿದ್ದಂತೆ.

ಅಪೂ ವಿಪರೀತ ಹೆದರಿಕೆಯ ಧ್ವನಿಯಲ್ಲಿ ''ಅಗೋ, ಅಕ್ಕಾ, ಮತ್ತೆ'' ಎಂದುಸುರಿದ.

''ಭಯವಿಲ್ಲವೋ, ಭಯವೇಕೆ? ಇನ್ನೂ ಹತ್ತಿರ ಬಾ. ಅಯ್ಯೊ, ನಿನ್ನ ತಲೆ ಪೂರ್ತಿ ನೆನೆದುಹೋಗಿ ನೀರಲ್ಲಿ ಮುಳುಗಿದ ಹಾಗೆ ಆಗಿದೆ.'' ನಾಲ್ಕೂ ಕಡೆ ಒಂದೇ ಸಮನೆ ಸುರಿಯುತ್ತಿದ್ದ ಮುಸಲಧಾರೆಯ ಜೋರೋೞ ಎಂಬ ಏಕತಾನ, ಮಧ್ಯೆ ಮಧ್ಯೆ ಗಾಳಿಯೊತ್ತಡದ ಸೋಂ-ಓ-ಓ, ಬೋಂ-ಓ-ಓ-ಓ ಶಬ್ದ, ಮರಗಿಡಗಳ ರೆಂಬೆಗಳು ಸ್ವಲ್ಪವೂ ಸಂಯಮವಿಲ್ಲದೆ ಸ್ವೇಚ್ಛೆಯಾಗಿ ಅಲ್ಲಾಡುವ ಶಬ್ದ, ಮೋಡಗಳ ಗರ್ಜನೆ; ಇವೆಲ್ಲವೂ ಸೇರಿ ಕಿವಿಯನ್ನು ಕಿವುಡು ಮಾಡುತ್ತಿವೆ.

ಒಂದೊಂದು ಸಲ ದುರ್ಗಾಳ ಮನಸ್ಸಿಗೆ ಕಾಡು ತೋಟಗಳೆಲ್ಲಾ ಬಿರುಗಾಳಿ ಮಳೆಗಳಿಗೆ ಸಿಕ್ಕಿ ಒಡೆದು ತಲೆಕೆಳಗಾಗಿ ಬಿದ್ದು ಹೋಗಿರುವಂತೆ ಅನ್ನಿಸುತ್ತಿತ್ತು.

ಒಡನೆಯೇ ಕಾಡಿನ ನೆತ್ತಿಯ ಮೇಲೆ ಮಳೆಯ ರಾಶಿ ಸುರಿದು, ಹರಿದು, ಒಡೆದು, ಹಾರಿಸುವ ರುದ್ರ ಪ್ರಕೃತಿಯ ಮರುಳುತನದ ಮಧ್ಯೆ ಸಿಕ್ಕಿಹಾಕಿಕೊಂಡು ಇಬ್ಬರು ಅಸಹಾಯ ಹುಡುಗ, ಹುಡುಗಿಯರ ಕಣ್ಣುಗಳು ಕೋರೈಸುವಂತೆ ತೀಕ್ಷ್ಣವಾದ ನೀಲಿಯ ಮಿಂಚು ಹೊಳೆದು ಲಾಸ್ಯವಾಡಿ ಹೋಯಿತು.

ಅಪೂ ಭಯದಿಂದ ನಡುಗುತ್ತಾ ಕಣ್ಣು ಮುಚ್ಚಿದ.

ದುರ್ಗಾ ಒಣಗಿದ ಕಂಠದಿಂದ ಮೇಲೆ ನೋಡುತ್ತಾ ''ಸಿಡಿಲು ಬೀಳುತ್ತೇನೋ ಕಣೋ. ಆ ಮರದ ಮೇಲೆ ನೋಡು, ಕಾಡು ಸೌತೇಕಾಯಿ ಅಲ್ಲಾಡುತ್ತಿದೆ'' ಎಂದಳು.

ಅದೇ ಲೋಹದ ಸಲಾಕಿಯನ್ನು ಯಾರೋ ಮತ್ತೆ ಆಕಾಶದ ಒಂದು ಕಡೆಯಿಂದ ಇನ್ನೊಂದು ಕಡೆಗೆ ಎಳೆದುಕೊಂಡು ಬರುವಂತಾಯಿತು.

ಛಳಿಯಿಂದ ಅಪೂವಿನ ಹಲ್ಲುಗಳು ಟಕ್, ಟಕ್ ಎಂದು ಬಡಿದುಕೊಳ್ಳುತ್ತಿದ್ದುವು. ದುರ್ಗಾ ಅವನನ್ನು ಇನ್ನೂ ಹತ್ತಿರಕ್ಕೆ ಎಳೆದುಕೊಂಡು



ಕಟ್ಟಕಡೆಯ ರಕ್ಷಣೆಯ ಭರವಸೆಯಿಂದ ಬೇಗ ಬೇಗ ಮಂತ್ರವನ್ನು ಪಠಿಸಲಾರಂಭಿಸಿದಳು- 'ಹಳ್ಳಕೊಳ್ಳ ತುಂಬಿಹೋಯ್ತು, ಹೊಲಗದ್ದೆ ಹಾಳಾಯ್ತು, ನಿಲ್ಲೋ-ನಿಲ್ಲೋ ಮಳೆರಾಯಾ,' ಭಯದಿಂದ ಅವಳ ಧ್ವನಿಯೂ ನಡುಗಲಾರಂಭಿಸಿತು.

ಸಂಜೆಯಾಗಲು ಬಹಳ ಹೊತ್ತೇನಿಲ್ಲ. ಮಳೆಯು ಸ್ವಲ್ಪವೇ ಸ್ವಲ್ಪ ಹೊತ್ತು ನಿಂತಹಾಗಿದೆ. ಸರ್ವಜಯಾ ಹೊರಬಾಗಿಲಲ್ಲಿ ನಿಂತಿದ್ದಾಳೆ. ದಾರಿಯಲ್ಲಿ ನಿಂತುಹೋಗಿದ್ದ ನೀರಿನ ಮೇಲೆ ಚಪ್,ಚಪ್-ಎಂದು ಕಾಲುಹಾಕುತ್ತಾ ರಾಜಕೃಷ್ಣ ಪಾಲಿತನ ಮಗಳು ಆಶಾಲತಾ ಕೊಳದ ಕಡೆ ಹೋಗುತ್ತಿದ್ದಾಳೆ. ಸರ್ವಜಯಾ ''ಏನೇ ಅಮ್ಮಾ-ದುರ್ಗಾ, ಅಪೂ ಇವರನ್ನೆಲ್ಲಾದರೂ ನೋಡಿದೆಯೇನೇ?'' ಎಂದು ಕೇಳಿದಳು.

''ಇಲ್ಲ ಅತ್ತೆ, ನಾನು ನೋಡಿಲ್ಲ'' ಎಂದು ಆಶಾಲತಾ ಸ್ವಲ್ಪ ನಕ್ಕು ''ಮಳೆ ದೇವತೆ ಏನಾದರೂ ಎತ್ತಿಕೊಂಡು ಹೋದಳೇನೋ ಅತ್ತೆ'' ಎಂದಳು.

ಸರ್ವಜಯಾ ಉದ್ವಿಗ್ನಚಿತ್ತಳಾಗಿ ಮನೆಯೊಳಗೆ ಹೋದಳು. ಏನು ಮಾಡುವುದೀಗ, ಎಂದು ಯೋಚಿಸುತ್ತಿರುವಷ್ಟರಲ್ಲಿ ಹಿತ್ತಿಲ ಬಾಗಿಲನ್ನು ಎಳೆದು ತೆಗೆದು, ತಲೆಯಿಂದ ಕಾಲವರೆಗೂ ಪೂರ್ತಿ ನೆನೆದುಹೋದ ದುರ್ಗಾ, ಕೈಯಲ್ಲಿ ಒಂದು ಬಲಿತ ತೆಂಗಿನಕಾಯನ್ನು ಹಿಡಿದು ಮುಂದೆ ಬಂದಳು. ಅವಳ ಹಿಂದೆಯೇ ಒಂದು ತೆಂಗಿನ ಗರಿಯನ್ನು ಎಳೆದುಕೊಂಡು ಬಂದ ಅಪೂ. ಸರ್ವಜಯಾ ಬೇಗ ಬೇಗ ಮಕ್ಕಳಿಬ್ಬರ ಹತ್ತಿರ ಹೋಗಿ ''ಎಲ್ಲಿ ಹೋಗಿದ್ದಿರಿ, ಪೀಡೆಗಳಾ? ಏನು ಬಂದದ್ದು ನಿಮಗೆ? ಏನು ಮೈಯುರಿಸುತ್ತೀರೋಮ್ಮ. ಮೈ ಕೈಯೆಲ್ಲಾ ನೆನೆಸಿಕೊಂಡು ಬಂದಿರುವುದು ನೋಡು. ನಾಳೆ ಏನಾದರೂ ಆದರೆ ಏನು ಗತಿ? ಮಳೆ ಬಂದಾಗ ಎಲ್ಲಿ ಹಾಳಾಗಿ ಹೋಗಿದ್ದಿರಿ?'' ಎಂದು ಅಪೂವನ್ನು ಹತ್ತಿರ ಎಳೆದುಕೊಂಡು ತಲೆಯಮೇಲೆ ಕೈಯಿಟ್ಟು ''ಛೀ, ಛೀ, ತಲೆಯೆಲ್ಲಾ ಪೂರ್ತಿ ನೆನೆದು ಹೋಗಿದೆ'' ಎಂದು, ತೆಂಗಿನ ಕಾಯಿಯ ಮೇಲೆ ದೃಷ್ಟಿ ಅಕಸ್ಮಾತ್ ಹೋಗಿ, ತಕ್ಷಣ ಎಲ್ಲಿಲ್ಲದ ಸಂತೋಷದಿಂದ ''ತೆಂಗಿನಕಾಯಿ ಎಲ್ಲಿ ಸಿಕ್ಕಿತೇ, ದುರ್ಗಾ?'' ಎಂದಳು.

ಅಪೂ, ಮತ್ತು ದುರ್ಗಾ ಮೆಲ್ಲಗೆ ''ಸುಮ್ಮನಿರಮ್ಮಾ, ಮೆತ್ತಗೆ ಮಾತಾಡು. ಮುಖೋಪಾಧ್ಯಾಯರ ಮನೆ ದೊಡ್ಡ ಅತ್ತಿಗೆ ತೋಟದಲ್ಲಿದಾಳೆ, ಈಗತಾನೇ ಬಂದಳು. ಅವರ ಮನೆ ತೋಟದ ಪಕ್ಕದಲ್ಲಿ ತಾನೇ ತೆಂಗಿನಮರ? ಅದರಡಿಯಲ್ಲಿ ಬಿದ್ದಿತ್ತು.

ಸರ್ವಜಯಾ, ''ಒಳ್ಳೇ ದೊಡ್ಡ, ಬಲಿತ ತೆಂಗಿನಕಾಯಿ. ಹೋಗಿ ಬಚ್ಚಲು ಮನೆಯಲ್ಲಿಡು. ನೀರು ಹಾಕಿ ತೊಳೆದು ಹೊಟ್ಟು ತೆಗೆಯೋಣ'' ಎಂದಳು.

ಅಪೂ ಹಠದ ಧ್ವನಿಯಲ್ಲಿ, ''ತೆಂಗಿನಕಾಯಿಲ್ಲ, ತೆಂಗಿನಕಾಯಿಲ್ಲ ಅಂತ ಹೇಳುತ್ತಾಯಿದ್ದೆಯಲ್ಲಮ್ಮ, ಈಗ ನೋಡು ತೆಂಗಿನಕಾಯಿ. ಈಗ ನೀನು ಕಾಯಿದೋಸೆ ಮಾಡಿಕೊಡಬೇಕು, ಊಂ. ನಾನು ಬಿಡೋದಿಲ್ಲ, ಎಂದಿಗೂ ಬಿಡೋದಿಲ್ಲ, ಮಾಡಿಕೊಡಲೇಬೇಕು ಊಂ'' ಎಂದ.

ಮಳೆಯಲ್ಲಿ ನೆನೆದು ಬಂದ ಮಕ್ಕಳಿಬ್ಬರ ಮುಖಗಳೂ ಮಳೆಯಲ್ಲಿ ನೆನೆದ ಕಮಲಗಳಂತೆ ಸುಂದರವಾಗಿ ತೋರಿದುವು ತಾಯಿಯ ಕಣ್ಣಿಗೆ. ಚಳಿಗೆ ಅವರ ತುಟಿಗಳು ನೀಲಿಯ ಬಣ್ಣವಾಗಿವೆ. ತಲೆಯ ಕೂದಲು ನೆನೆದು ಕಿವಿಯ ಜೊತೆಗೆ ಅಂಟಿಕೊಂಡಿದೆ.

ಸರ್ವಜಯಾ, ''ಬನ್ನಿ ಎಲ್ಲಾ ಮೊದಲು ಬಟ್ಟೆ ಬಿಚ್ಚಿಹಾಕಿ. ಕಾಲಿಗೆ ನೀರು ಹಾಕಿಕೊಂಡು ಜಗುಲಿಯ ಮೇಲೆ ಕೂತುಕೊಳ್ಳಿ ಇಬ್ಬರೂ'' ಎಂದಳು.

(ಅಹೋಬಲ ಶಂಕರ ಅನುವಾದಿಸಿರುವ ಬಂಗಾಲಿಯ ಶ್ರೇಷ್ಠ ಕಾದಂಬರಿಕಾರ ಬಿಭೂತಿ ಭೂಷಣ ಬಂದ್ಯೋಪಾಧ್ಯಾಯರ '**ಪಥೇರ್ ಪಾಂಚಾಲಿ**'ಯ ಕನ್ನಡಾನುವಾದ '**ಮಹಾಯಾತ್ರಿಕ**'ದಿಂದ.)



ವಿವೇಕ ಶಾನಭಾಗ

# ಅಂಚು

ಸೃಜನ್

ಈ ವರ್ಷದ ಸ್ಕೂಲ್ ಗ್ಯಾದರಿಂಗ್ ದಿವಸದವರೆಗೂ ಸುಬ್ಬರಾಯಪ್ಪ ಆತ್ಮ ವಿಮರ್ಶೆಯ ಗೋಜಿಗೆ ಹೋದವರಲ್ಲ. ತನ್ನನ್ನು ಎದುರಿಸುವ ಎದೆ ಯಾರಿಗೂ ಇಲ್ಲ ಎಂಬ ಧಿಮಾಕಿನಿಂದ, ತನ್ನ ತಾರುಣ್ಯ ಮತ್ತು ಹುಮ್ಮಸ್ಸು ಸತತ ಎಂಬ ಹುಂಬತನದಲ್ಲೇ ಅವರೆಗೂ ನಡಕೊಳ್ಳುತ್ತಿದ್ದರು. ಅವರು ಪಿ.ಟಿ. ಮಾಸ್ತರು. ಜೊತೆಗೆ ಲೈಬ್ರೇರಿಯನ್ ಕೂಡ. ಅವರಿವರು ದಾನ ಮಾಡಿದ ಪುಸ್ತಕಗಳನ್ನು ತುಂಬಿಕೊಂಡ ಸ್ಕೂಲ್ ಲೈಬ್ರರಿಯೆಂದು ಕರೆಸಿಕೊಳ್ಳುವ ಮೂರು ಕಪಾಟುಗಳ ಮೇಲ್ವಿಚಾರಕರು. ಯಾವಾಗಲೊಮ್ಮೆ ಪಿ.ಟಿ. ಟ್ರೇನಿಂಗ್‌ಗೆಂದು ಧಾರವಾಡಕ್ಕೆ ಹೋಗಿಬಂದ ಹೊಸತರಲ್ಲಿ



ಮಕ್ಕಳಿಗೆ ಹೊಸ ಆಟಗಳನ್ನೂ, ಹೊಸ ವ್ಯಾಯಾಮಗಳನ್ನೂ ಕಲಿಸಲು ಪ್ರಯತ್ನಿಸುವರು. ಶಾಲೆ ಮುಗಿದ ನಂತರ ಆಡಲಿರುವ ತಮ್ಮದೇ ಆಟಗಳಲ್ಲಿ ಮನಸ್ಸು ನೆಟ್ಟ ಹುಡುಗರು, ಮಾಸ್ತರ ಹೆದರಿಕೆಗೆ ಆಟ ಆಡಿದ ನಟನೆ ಮಾಡುತ್ತಿದ್ದರು.

ಶನಿವಾರ ಬೆಳಿಗ್ಗೆ ವಿದ್ಯಾರ್ಥಿಗಳ ಸಾಮೂಹಿಕ ಕವಾಯತು ನೋಡಲು ಆ ರಸ್ತೆಯಲ್ಲಿ ಹಾದುಹೋಗುವವರು ಶಾಲೆಯ ಬಯಲ ಅಂಚಿಗೆ ನಿಲ್ಲುತ್ತಿದ್ದರು. ಮೀನುಪೇಟೆಗೆ ಹೋಗುವ ದಾರಿ ಅದಾಗಿದ್ದರಿಂದ ತುಸು ಮೊದಲೇ ಹೊರಟವರು ಮೀನು ಬುಟ್ಟಿಗಳು ಬರುವವರೆಗೂ ಅಲ್ಲಿ ನಿಲ್ಲುವರು. ಈ ಪ್ರೇಕ್ಷಕರಿಂದಾಗಿ ಅದಕ್ಕೊಂದು ಬಗೆಯ ಪ್ರದರ್ಶನದ ಗತ್ತು ಬಂದಿತ್ತು. ಆ ದಿನ ಸುಬ್ಬರಾಯಪ್ಪನವರಿಗೆ ಬಹಳ ಕೆಲಸ - ಅವರು ಬಾಯಲ್ಲೊಂದು ಸೀಟಿ ಇಟ್ಟುಕೊಂಡು, ಕೈಯಲ್ಲೊಂದು ತೆಳುವಾದ ಛಡಿ ಹಿಡಿದುಕೊಂಡು ಅತ್ತಿಂದಿತ್ತ ಓಡಾಡುವರು. ಅವರು ಸೀಟಿ ಊದಿದ ಕ್ರಮದಲ್ಲೇ ಅವರ ಸಿಟ್ಟಿನ ಭರ ಗೊತ್ತಾಗುತ್ತಿತ್ತು. ದೈಹಿಕ ಶಿಕ್ಷಣವೆಂದರೆ ಕ್ಷಮೆಯಿರದ ಕಠಿಣವಾದ ಶಿಸ್ತು ಎಂದು ಭಾವಿಸಿದ ಅವರಿಂದ ಮಕ್ಕಳಿಗೆ ಧಾರಾಳವಾಗಿ ಬೈಗಳೂ, ಆಗಾಗ ಛಡೀಯೇಟುಗಳೂ ಸಿಗುತ್ತಿದ್ದವು. ಶಾಲೆಯಲ್ಲಿ ಶಿಕ್ಷೆ ಕೊಡುವುದು ತಮ್ಮ ಮಕ್ಕಳನ್ನು ಅವರು ಗಮನಿಸುತ್ತಿದ್ದಾರೆಂಬುದಕ್ಕೆ ಸಾಕ್ಷಿಯೆಂದು ಭಾವಿಸಿದ ಪಾಲಕರು, ಅದರಿಂದ ತಲೆಕೆಡಿಸಿಕೊಳ್ಳುತ್ತಿರಲಿಲ್ಲವಾದ್ದರಿಂದ ಸುಬ್ಬರಾಯಪ್ಪ ನಿರಾತಂಕವಾಗಿದ್ದರು. ಆಗಾಗ ತುಸು ಗೊಣಗುತ್ತ ಬರುವವರಿಗೆ, 'ಛಡಿ ಲಾಗೇ ಛಮ್ ಛಮ್, ವಿದ್ಯಾ ಆಯೇ ಘಮ್ ಘಮ್' ಎಂಬ ಗಾದೆಯನ್ನು ಹೇಳಿ, ತಮ್ಮ ಮಕ್ಕಳು ಸಾಕಷ್ಟು ಹೊಡೆತ ತಿನ್ನದೇ ಇದ್ದ ಬಗ್ಗೆ ಪಾಪಪ್ರಜ್ಞೆಯನ್ನು ಕೂಡ ಹುಟ್ಟಿಸುವರು.

ಶನಿವಾರದ ಡ್ರಿಲ್‌ಗೆಂದು ಸುಬ್ಬರಾಯಪ್ಪ ಒಳ್ಳೆಯ ಬಟ್ಟೆಯನ್ನು ಮೀಸಲಿಡುತ್ತಿದ್ದರು. ಅರ್ಧ ತೋಳಿನ ಬುಶ್ ಶರ್ಟಿನಿಂದಾಗಿ ಅವರ ತೋಳಿನ ಸ್ನಾಯುಗಳು ಉಬ್ಬಿ ಕಾಣುವವು. ಮಿರಿಮಿರಿ ಮಿಂಚುವ ಕಪ್ಪು ಬಣ್ಣದ ಸೊಂಟದ ಬೆಲ್ಟಿನ ಸ್ಟೀಲಿನ ಬಕಲ್ ಆಗೀಗ ಬಿಸಿಲಲ್ಲಿ ಫಳ್ಳೆನ್ನುವುದು. ಆವತ್ತು ಅವರು ಕಪ್ಪು ಶೂ ಹಾಕಿಕೊಳ್ಳುತ್ತಿದ್ದರು. ಬಿಸಿಲು ಹೆಚ್ಚಾಗಿರುವ ದಿನಗಳಲ್ಲಿ ಅವರು ಕಪ್ಪು ಕನ್ನಡಕ ಕೂಡ ಹಾಕಿಕೊಂಡದ್ದುಂಟು. ಎಣ್ಣೆ ಹಾಕಿ, ಹಿಂದಕ್ಕೆ ಎಳೆದು ಬಾಚಿಕೊಂಡ ಅವರ ಕೂದಲು ಅಲ್ಲಲ್ಲಿ ನರೆಯತೊಡಗಿದ್ದು ಇನ್ನೂ ಅವರ ಗಮನಕ್ಕೆ ಬಂದಿಲ್ಲ ಅನಿಸುವುದು. ಲೇಝಿಮ್ ನಾದದೊಡನೆ ಕವಾಯತು ಮುಂದುವರಿಯುತ್ತ ಹೋದಂತೆ, ಅವರ ಅಂಗಿಯ ಬೆನ್ನು ಮತ್ತು ಎದೆಯ ಭಾಗ ಒದ್ದೆಯಾಗುವುದು. ಗಡ್ಡ ಮೀಸೆಗಳನ್ನು ಸ್ವಚ್ಛ ಹೆರೆದು ನುಣುಪಾಗಿರುವ, ತುಸು ಮೊಡವೆ ಕಲೆಗಳ ಅವರ ಬೆಳ್ಳಗಿನ ಮುಖದಲ್ಲಿ ಬೆವರು ಒಡೆಯುವುದು ಸ್ಪಷ್ಟವಾಗಿ ಕಾಣಿಸುವುದು. ಇತ್ತೀಚೆಗೆ, ಅವರ ಏದುಸಿರಿನಲ್ಲಿ ಮೊದಲು ವ್ಯಕ್ತವಾಗುತ್ತಿದ್ದ ಆರೋಗ್ಯದ ಬದಲು ತುಸು

ಆಯಾಸ ಸೇರಿಕೊಂಡಂತೆನಿಸುವುದು. ಇದೆಲ್ಲದರ ನಡುವೆಯೂ ಅವರು ಒಂದೆರಡು ಪೋಲಿ ಮಾತು, ಒಂದೆರಡು ಪೋಲಿ ಸನ್ನೆಗಳನ್ನು ಮಾಡುವರು. ಇಂಥವಕ್ಕೆ ನಗುವ ಸಹೋದ್ಯೋಗಿಗಳಿದ್ದರು. ಹೆಡ್‌ಮಾಸ್ತರರು ಕಂಡೂ ಕಾಣದಂತಿರುವರು. ಬೇರೆಯವರು ಮಾಡಿದ್ದರೆ ಹಲ್ಕಟ್ ಕೆಲಸಗಳೆಂದು ಸ್ಪಷ್ಟವಾಗಿ ಅನಿಸುವಂಥವು ಸುಬ್ಬರಾಯಪ್ಪ ಮಾಡಿದಾಗ ತಾಳಿಕೊಳ್ಳಬಲ್ಲ ಸಂಗತಿಗಳಂತೆ ತೋರುತ್ತಿದ್ದವು.

ಮೆಟ್ಟುವ ಚಪ್ಪಲಿಯಿಂದ ತಲೆಬಾಚುವ ರೀತಿಯವರೆಗೆ ಸುಬ್ಬರಾಯಪ್ಪನವರ ರಸಿಕತೆ ಮತ್ತು ಸ್ವಂತಿಕೆ ವ್ಯಕ್ತವಾಗುತ್ತಿತ್ತು. ಎಷ್ಟು ಅಡಗಿಕೊಳ್ಳಲು ನೋಡಿದರೂ ಉಳಿದ ಮಾಸ್ತರರ ವ್ಯಕ್ತಿತ್ವದಲ್ಲೇ ಸೇರಿಹೋಗಿರುವ ಕೃಪಣತೆ ಅವರಲ್ಲಿ ಹುಡುಕಿದರೂ ಕಾಣುವಂತಿರಲಿಲ್ಲ. ಶರ್ಟುಗಳನ್ನು ಹುಬ್ಬಳ್ಳಿಯ ಎಸ್‌ಕ್ವಾಯರ್ ಟೇಲರ್‌ನಿಂದ ಹೊಲಿಸಿಕೊಳ್ಳುತ್ತಿದ್ದರು. ಯಾರೋ ಮದುವೆಗೆ ಕೊಟ್ಟದ್ದನ್ನು, ತಮಗೆ ಇಷ್ಟವಾಗದಿದ್ದರೆ ಹೊಲಿಸಿಕೊಳ್ಳುವವರಲ್ಲ. ಬರುವ ಅಷ್ಟೇ ಹಣದಲ್ಲಿ, ಯಾವುದನ್ನೋ ಹಿಡಿದು, ಎಲ್ಲೋ ಉಳಿಸಿ, ತಮ್ಮದೇ ಮಟ್ಟ ಕಾಪಾಡಿಕೊಳ್ಳುತ್ತಿದ್ದರು. ಅವರು ಖಾದಿಯ ಅಂಗಿ ಹಾಕಿಕೊಂಡರೂ, ಅದು ಹೊಲಿಗೆಯ ಹೊಸತನದಿಂದ ಎಲ್ಲಿಲ್ಲದ ಕಳೆ ಕೊಡುವಂತಿರುತ್ತಿತ್ತು.

ಯಾವ ಹೆಂಗಸು ಎದುರು ಹಾದರೂ ಅವರ ಕಣ್ಣು ಕ್ಷಣಾರ್ಧದಲ್ಲಿ ಅವಳನ್ನು ಅಳೆಯುತ್ತಿತ್ತು. ಅವಕಾಶ ಸಿಕ್ಕಿದಾಗಲೆಲ್ಲ ಬೆಳೆದು ನಿಂತ ಸ್ಕೂಲಿನ ಪೋರಿಯರ ಹಿಂಭಾಗಕ್ಕೆ ಕೈ ಸರಾಗವಾಗಿ ಹೋಗುತ್ತಿತ್ತು. ಸುಬ್ಬರಾಯಪ್ಪ ಯಾರಿಗೂ ಯಾವ ವಿವರಣೆಯನ್ನೂ ಕೊಟ್ಟವರಲ್ಲ. ತಮ್ಮ ಕೆಲಸ ತಾವು ನಡೆಸಿಕೊಂಡು ಹೋಗುವುದಕ್ಕೆ ಯಾವುದೂ ಅಡ್ಡಿ ಎಂದು ಭಾವಿಸಿದವರಲ್ಲ. ಹುಡುಗಿಯರು ಒಂಬತ್ತು-ಹತ್ತನೇ ಕ್ಲಾಸು ತಲುಪುವಷ್ಟರಲ್ಲಿ ಸುಬ್ಬರಾಯಪ್ಪನವರ ಕೈಗೆ ಸಿಗದೇ ಓಡಾಡುವುದರಲ್ಲಿ ಪಳಗಿರುತ್ತಿದ್ದರು. ಲೈಬ್ರರಿಯ ಪುಸ್ತಕದ ಕಾರಣಕ್ಕೋ, ಮುಂದೆ ಬರಲಿರುವ ಸ್ಪೋರ್ಟ್ಸ್ ಮೇಳದ ತಯಾರಿಗೆಂದೋ ಹುಡುಗಿಯರನ್ನು ಕರೆಸಿದಾಗ, ಅವರ ಜೊತೆ ಸರಳವಾಗಿ, ಯಾವ ಅನುಮಾನಕ್ಕೆಡೆ ಇಲ್ಲದಂತೆ ಮಾತಾಡುವರು. ಯಾವ ಕೆಲಸಗಳನ್ನೂ ಉದ್ದೇಶಪೂರ್ವಕ ಫಾಜೀಲತನ ಎಂದು ಕರೆಯಲಾಗದ ಹಾಗೆ ಮಾಡುವುದರಿಂದ, ಹುಡುಗಿಯರಿಗೂ ತುಸು ಗಲಿಬಿಲಿಯಾಗುವುದು. ಅವರು ಮಾತಾಡಿಸುವ ರೀತಿ, ಅವರು ಕೇಳುವ ಪ್ರಶ್ನೆಗಳು, ಅವರು ಹೊಗಳುವ ರೀತಿ ಹುಡುಗಿಯರಿಗೂ ಬಹಳ ಹಿತವಾಗೇ ಇರುತ್ತಿತ್ತು. ಅವರು ಮೈಮುಟ್ಟಿ ಮಾತಾಡಿಸಿದಾಗಲೂ ಅಂಥ ತಪ್ಪೇನೂ ಕಾಣಸುತ್ತಿರಲಿಲ್ಲ. ಆದರೆ ನಂತರ, ಸುಬ್ಬರಾಯಪ್ಪನವರ ಅಪಖ್ಯಾತಿಯ ಬಗ್ಗೆ ಯೋಚಿಸಿ ತಲೆಕೆಡಿಸಿಕೊಳ್ಳುತ್ತಿದ್ದರು. ಅವರ ಬಗ್ಗೆ ತಾವು ತಿಳಕೊಂಡಿದ್ದೇ ತಪ್ಪೇನೋ ಎಂದು ಕೆಲವು ಸಲ ಅನಿಸುವಂತಾಗುತ್ತಿತ್ತು.

ಸುಬ್ಬರಾಯಪ್ಪನವರ ಬಗ್ಗೆ ತುಂಬ ಆಸಕ್ತಿಯಿಂದ ಪತ್ತೇದಾರಿಕೆ ಮಾಡುವವರು ಒಂಬತ್ತು ಮತ್ತು ಹತ್ತನೇ ಕ್ಲಾಸಿನ ಮಕ್ಕಳು. ಆಗ ತಾನೇ ತೆರೆದುಕೊಳ್ಳುತ್ತಿರುವ ಅವರ ಲೈಂಗಿಕ ಜಗತ್ತಲ್ಲಿ, ಎಲ್ಲವನ್ನೂ ಬೇಕಾದಾಗ ಪಡೆಯಬಲ್ಲ ಭ್ರಮೆ ಹುಟ್ಟಿಸುವ ಮತ್ತು ಬಹಳ ಶೋಕಿದಾರನಂತೆ ತೋರುವ ಸುಬ್ಬರಾಯಪ್ಪನವರು ಹೀರೋ ಆಗಿದ್ದರು. ಅವರ ವ್ಯಕ್ತಿತ್ವ ಹುಟ್ಟಿಸುವ ಕುತೂಹಲ, ತಾವೂ ತಲುಪುಬಲ್ಲ ಸ್ವಾತಂತ್ರ್ಯದ ಸಾಧ್ಯತೆಗಳು ಅವರಿಗೆ ಸುಬ್ಬರಾಯಪ್ಪನವರ ಬಗ್ಗೆ ಅಪಾರ ಆಕರ್ಷಣೆ ಮತ್ತು ಕುತೂಹಲ ಹುಟ್ಟಿಸುವವು. ಅವರ ಸಾಹಸಗಳನ್ನು ಭೇದಿಸಲು, ಯಾವಾಗ, ಎಲ್ಲಿಂದ, ಎಲ್ಲಿಗೆ ಹೋಗುತ್ತಾರೆ ಎಂದು ಕಂಡುಹಿಡಿಯಲು ಒಂದು ಪತ್ತೇದಾರ ದಳವೇ ರಚನೆಯಾಯಿತು. ಅದರ ಮುಖ್ಯಸ್ಥ ಸಮೀರ ನೆಂಬ ಹುಡುಗ. ಅವನು ಇಲ್ಲಿ, ಅಜ್ಜನ

ಮನೆಯಲ್ಲಿ ಬೆಳೆಯುತ್ತಿದ್ದರಿಂದ ಅವನ ಕೈಯಲ್ಲಿ ತುಸು ದುಡ್ಡು ಓಡಾಡುತ್ತಿತ್ತು. ಆದರೆ ಅನೇಕ ದಿನಗಳ ಪ್ರಯತ್ನದಲ್ಲಿ ಈ ತಂಡ ಯಶಸ್ವಿಯಾಗದೇ ಇದ್ದುದರಿಂದ ಮತ್ತು ಸರಿಯಾದ ಯಾವ ಪುರಾವೆಯೂ ಸಿಗದೇ ಇದ್ದಿದ್ದರಿಂದ ಭಾರೀ ನಿರಾಸೆಯಾಯಿತು. ಅದನ್ನು ಮುಚ್ಚುವ ಸಲುವಾಗಿ ಒಬ್ಬೊಬ್ಬರೇ ಒಂದೊಂದು ಕತೆ ಹುಟ್ಟಿಸತೊಡಗಿದರು. ಕೊನೆಯ ಪಿರಿಯಡ್‌ನಲ್ಲಿ ಆಟಕ್ಕೆ ಬಿಟ್ಟಾಗಲೋ, ಮಧ್ಯಾಹ್ನದ ಊಟದ ಬಿಡುವಿನಲ್ಲೋ ಈ ಪಂಗಡದ ಸಭೆ ಸೇರುತ್ತಿತ್ತು. ಈ ಮಕ್ಕಳ ಊಹೆಯಲ್ಲೇ, ಜೇಜಾಬಾಯಿಯವರಿಗೂ ಸುಬ್ಬರಾಯಪ್ಪನವರಿಗೂ ಸಂಬಂಧ ಬೆಳೆಯಿತು. ನಿನ್ನೆ ಸಂಜೆ ಏಳು ಗಂಟೆಯ ಹೊತ್ತಿಗೆ, ಪೇಟೆಯಿಂದ ಸುಬ್ಬರಾಯಪ್ಪನವರು ಜೇಜಾಬಾಯಿಯ ಮನೆಗೆ ಹೋದರು; ಅಲ್ಲಿ ಒಂಬತ್ತು ಗಂಟೆಯವರೆಗೂ ಇದ್ದರು ಎಂದೆಲ್ಲ ಕಲ್ಪಿಸಿ ಹೇಳತೊಡಗಿದರು. ಒಬ್ಬರನ್ನು ಮೀರಿಸುವಂತೆ ಒಬ್ಬರು ಕತೆ ಕಟ್ಟತೊಡಗಿದರು. ಅವರ ಕಲ್ಪನೆ, ಸ್ಪರ್ಧೆಯ ಹುಮ್ಮಸ್ಸು ಪಡೆಯತೊಡಗಿದೊಡನೆ ಸುಬ್ಬರಾಯಪ್ಪನವರು ಜೇಜಾಬಾಯಿಯ ಜೊತೆ ಕಾರವಾರಕ್ಕೆ ಸಿನೇಮಾಕ್ಕೆ ಹೋಗುವುದೂ, ಅವರ ಜೊತೆ ಅಲ್ಲೇ ರೂಮು ಮಾಡಿಕೊಂಡಿರುವುದೂ ಆಯಿತು. ಅತ್ತು, ಮೂಗು ಕೆಂಪು ಮಾಡಿಕೊಂಡು ಸ್ಟಾಫ್‌ರೂಮಿನಿಂದ ಆಚೆ ಬರುವ ಹುಡುಗಿಯರು ಅವರ ಕಲ್ಪನೆಗೆ ಗ್ರಾಸವಾದರು. ನಿಜದಲ್ಲಿ, ಸುಬ್ಬರಾಯಪ್ಪನವರು ಯಾವತ್ತೂ ಹುಡುಗಿಯರನ್ನು ನಗಿಸುವವರೇ ಹೊರತು ಅಳಿಸುವವರಲ್ಲ. ಅವರಿಗೆ ಸ್ತ್ರೀ ಸಂಕುಲದ ಬಗ್ಗೆ ಇರುವ ಅಪರಿಮಿತ ಆಸಕ್ತಿ ಮತ್ತು ಪ್ರೇಮ ಹುಡುಗರಿಗೆ ಗೊತ್ತಾಗುವ ಬಗೆಯಿರಲಿಲ್ಲ. ಅವರು ಸುಬ್ಬರಾಯಪ್ಪನವರನ್ನು ನೋಡುವುದು, ತಮ್ಮ ಅವಕಾಶಗಳನ್ನು ಕಸಿದುಕೊಳ್ಳುವ ಸಾಧ್ಯತೆಯಿರುವ ಮನುಷ್ಯನೆಂದೇ ಹೊರತು ಬೇರೇನಲ್ಲ. ಹುಂಬತನದಲ್ಲಿ ಕೆಲವೊಮ್ಮೆ, 'ಅಂವ ಆಗ್ತಾನೆ, ನಾ ಯಾಕೆ ಆಗೂದಿಲ್ಲ' ಎಂದು ಹುಡುಗಿಯರ ಬೆಂಚುಗಳಲ್ಲಿ ಅನಾಮಿಕ ಚೀಟಿ ಇಡುವ ಮಟ್ಟಕ್ಕೂ ಈ ಅಸಹನೆ ಬೆಳೆಯಿತು.

ಜೇಜಾಬಾಯಿ ಅದೇ ಶಾಲೆಯಲ್ಲಿ ಸಂಗೀತ ಕಲಿಸುತ್ತಿದ್ದರು. ಸದಾ ಗಂಭೀರವಾಗಿರುವ ಅವರ ಮುಖದಲ್ಲಿ ದುರಂತ ನಾಯಕಿಯ ಛಾಯೆಯಿತ್ತು. ರೂಪವತಿಯಾದ ಹೆಣ್ಣು ಮದುವೆಯಾಗದೇ ಉಳಿದದ್ದೇ, ಅದರ ಬಗ್ಗೆ ನಾನಾ ಕತೆಗಳು ಹುಟ್ಟಿಕೊಳ್ಳುವಂತೆ ಈ ಊರಿನಲ್ಲೂ ಆಯಿತು. ಅವರ ಗುಂಗುರು ಜಡೆ, ತುಸು ಭಾರವಾಗಿರುವಂತೆ ಅನಿಸುವ ಕಣ್ಣು, ಅವರ ನಡಿಗೆಯಲ್ಲೇ ಇರುವ ಏನೋ ನಿರಾಸಕ್ತಿ, ವ್ಯಕ್ತಿತ್ವದ ವಿಚಿತ್ರ ಗಾಂಭೀರ್ಯದಿಂದ ಅವರು ಯಾರಿಗೂ ನಿಲುಕದಂತಿರುವ ರೀತಿ-ಇದೆಲ್ಲವೂ ಅವರ ಜೀವನದಲ್ಲಿ ಘಟಿಸಿರಬಹುದಾದ ದುರಂತದ ಕುರುಹುಗಳೋ ಎಂಬಂತೆ ಅವರ ಬಗ್ಗೆ ಕತೆಗಳು ಹುಟ್ಟಿಕೊಂಡವು. ಈ ಊರಿಗೆ ಬರುವ ಮುಂಚೆ ಆಗಿರಬಹುದಾದ ಅವರ ಮಾಜಿ ಜೀವನದ ಪ್ರೇಮಭಂಗದ ಕುರಿತು ಕಲ್ಪನೆಗಳು ಸರಾಗ ಹರಿದವು. ಶಾಲೆಯಿಂದ ಅಷ್ಟೇನೂ ದೂರವಿರದ ಅವರ ಮನೆಗೆ ಹೋಗುವಾಗ ಬಿಸಿಲಿಗೆ ಕೊಡೆ ಹಿಡಿದು ನಡೆಯುವರು. ಇಡೀ ಊರಿನಲ್ಲಿ ಬಿಸಿಲಿಗೆ ಕೊಡೆ ಹಿಡಿಯುವವರು ಅವರೊಬ್ಬರೇ. ಈ ನಿತ್ಯದ ದೃಶ್ಯದಲ್ಲೇ, ಅವರು ಎಲ್ಲರಿಂದ ಬೇರ್ಪಟ್ಟ,



ಹಾಗೆಂದು ಗುರುತಿಸಿಕೊಳ್ಳಲು ಅಳುಕದ ವ್ಯಕ್ತಿಯೆಂಬುದು ಗೊತ್ತಾಗುತ್ತಿತ್ತು. ಅವರ ಅಲಂಕಾರದ ಸರಳತೆಯಲ್ಲೇ ಆಕರ್ಷಣೆಯಿತ್ತು. ಅವರ ಮೋರೆಯ ಮೇಲೆ ಇದೆಯೆಂದು ಅನ್ನಿಸುವ ವಿಷಾದಕ್ಕೆ ಏನು ಕಾರಣವೋ ಯಾರಿಗೂ ಗೊತ್ತಿರಲಿಲ್ಲ.

ತಮ್ಮ ಮತ್ತು ಜೀಜಾಬಾಯಿಯ ಕುರಿತ ಊಹಾಪೋಹಗಳು ಸುಬ್ಬರಾಯಪ್ಪನವರನ್ನು ತಲುಪಿದ್ದವು. ಬೆಳೆಯುವ ಹುಡುಗರ ಅತಿರಂಜಿತ ಕಲ್ಪನಾ ಜಗತ್ತಿನ ಅರಿವಿದ್ದ ಅವರು ಅದನ್ನು ಲಕ್ಷಿಸುವ ಗೋಜಿಗೆ ಹೋಗಲಿಲ್ಲ. ಯಾವತ್ತೂ ಸುಬ್ಬರಾಯಪ್ಪನವರು ಶಾಲೆಯ ಸಹೋದ್ಯೋಗಿಗಳ ಜೊತೆ ಮರ್ಯಾದೆ ಮೀರಿದವರಲ್ಲ. ಅವರ ಕಲಾಪಗಳೇನಿದ್ದರೂ ಹೊರಗೇ. ಶಾಲೆಯ ಗೇಟಿನ ಆಚೆ ನಿಂತು ಸಿಗರೇಟು ಸೇದುತ್ತಿದ್ದರು. ಶಾಲೆಯ ಮಾಸ್ತರೊಬ್ಬರು ಹೀಗೆ, ಗೇಟಿನಲ್ಲಿ ನಿಂತು, ರಸ್ತೆಯಲ್ಲಿ ಓಡಾಡುವವರ ಕಣ್ಣಿಗೆ ಬೀಳುವಂತೆ ಸೇದುವುದು ಹೆಡ್‌ಮಾಸ್ತರರಿಗೆ ಕಷ್ಟದ ವಿಷಯವಾದರೂ, ಅದನ್ನು ಅವರಿಗೆ ನೇರವಾಗಿ ಹೇಳಲಾರದವರಾಗಿದ್ದರು. ನೈತಿಕ ಪ್ರಶ್ನೆಗಳನ್ನು ಸುಬ್ಬರಾಯಪ್ಪನವರ ಎದುರು ಎತ್ತಲು ಅವರಿಗೆ ಯಾಕೋ ಭಯವಾಗುತ್ತಿತ್ತು. ಎಲ್ಲ ಕಟ್ಟಳೆಗಳಿಗೂ ತಾವು ಅತೀತರೆಂಬಂತೆ, ಸುಬ್ಬರಾಯಪ್ಪನವರು, ಮಿಲಿಟರಿ ವಿಷ್ಣುವಿನ ಮಾಂಸಾಹಾರಿ ಹೋಟೇಲಿನಲ್ಲಿ ಕೂತು ಕುಡಿದು, ತಿನ್ನುವರು. ಘಟಿಸಿದ, ಘಟಿಸದ ತಮ್ಮ ಸಾಹಸದ ಕತೆಗಳನ್ನು ಹೇಳುವಾಗ ಘಾಜೀಲ ಮಾತಾಡುವರು. ಇದನ್ನೆಲ್ಲ ಪ್ರತಿಸತ್ಯ ಮಾಡದೇ ಇದ್ದರೂ, ಇದೆಲ್ಲದರ ಮೂಲಕ ಯಾವ ಮಿತಿಗಳನ್ನಾದರೂ ತಾವು ದಾಟಬಲ್ಲವರು ಎಂಬುದನ್ನು ಜಗತ್ತಿಗೆ ಸಾರಿಹೇಳುತ್ತಿರುವಂತೆ ಅನಿಸುತ್ತಿತ್ತು. ಎಂದೂ ಸುಬ್ಬರಾಯಪ್ಪ, ತನಗಿದ್ದ ಈ ಅಪಖ್ಯಾತಿಯನ್ನು ತೊಡೆಯುವ ಕೆಲಸಕ್ಕೆ ಕೈ ಹಾಕಲಿಲ್ಲ. ಇಂಥ ಒಂದು ವ್ಯಕ್ತಿತ್ವದ ಮೂಲಕ ಜಗತ್ತಿಗೆ ತೋರಿಸಿಕೊಳ್ಳುವುದರಿಂದ ತನಗೆ ಬಂದ ಸ್ವಾತಂತ್ರ್ಯ ಎಂಥದು ಅನ್ನುವುದನ್ನು ಅವರು ಬಲ್ಲವರಂತಿದ್ದರು. ವಿಲಾಸಿಯ ಪ್ರಾಮಾಣಿಕತೆ ತಟ್ಟುವಷ್ಟು ಬೇಗ, ಸಂಯಮಿಯ ವ್ರತ ನಿಜ ಅನಿಸುವುದಿಲ್ಲ ಎಂದು ಅವರಿಗೆ ಅನುಭವಕ್ಕೆ ಬಂದಿತ್ತು. ಅವರ ಬಳಿ ಬಂದು ತಮ್ಮ ಸಂಸಾರದ ಬಗ್ಗೆ, ಮತ್ತೆ ಯಾರಲ್ಲಿಯೂ ಹೇಳಿಕೊಳ್ಳಲಾಗದ ಸಂಗತಿಗಳನ್ನು ಹೇಳಿಕೊಂಡ ಮಂದಿಗೆ ಲೆಕ್ಕವಿಲ್ಲ. ಅವರನ್ನು ನಂಬಬಹುದು ಎಂಬ ಯಾವುದೋ ವಿಶ್ವಾಸ, ಗುಟ್ಟುಗಳನ್ನು ಕಾಪಾಡಲು ಸಮರ್ಥನೆಂಬ ಯಾವುದೋ ಭರವಸೆ ಅವರ ಬಗ್ಗೆ ಇತ್ತು. ಸೂಕ್ಷ್ಮ, ಸಂಕೀರ್ಣ ನೈತಿಕ ಪ್ರಶ್ನೆಗಳನ್ನು ಅವರ ಬಳಿ ಹಂಚಿಕೊಳ್ಳುತ್ತಿದ್ದರು.



ಸ್ಕೂಲ್ ಗ್ಯಾದರಿಂಗ್ ದಿನ, ಅತಿಥಿಗಳ ಭಾಷಣ ಮುಗಿದು, ಎಲ್ಲರೂ ಎದುರುನೋಡುತ್ತಿದ್ದ ಮನರಂಜನಾ ಕಾರ್ಯಕ್ರಮ ಶುರುವಾಗಿತ್ತು. ಇತರ ಶಿಕ್ಷಕರ ಜೊತೆ ಸುಬ್ಬರಾಯಪ್ಪನವರೂ, ರಂಗಸ್ಥಳದ ಆಚೀಚೆ ಓಡಾಡಿಕೊಂಡು, ಪಾತ್ರವಹಿಸುವವರಲ್ಲದೇ ಬೇರಾರೂ ಅತ್ತ ಬರದಂತೆ ನೋಡಿಕೊಳ್ಳುತ್ತಿದ್ದರು. ದೀಪ ಆರಿ, ಮತ್ತೆ ನಿಧಾನ ಹೊತ್ತಿಕೊಂಡು ನಾಟಕ ಶುರುವಾಯಿತು. ಸುಬ್ಬರಾಯಪ್ಪನವರು ಸೈಡ್ ವಿಂಗಿನ ಅರೆಗತ್ತಲಲ್ಲಿ ನಿಂತಿದ್ದರು. ಮೇಕಪ್ ಮಾಡಿಕೊಂಡ ನಟನಟಿಯರು, ಮುಂದಿನ ಸೀನಿಗೆ ಕಾಯುತ್ತ ಅಲ್ಲಿ ನಿಂತಿದ್ದರು. ಎಲ್ಲರ ಹಿಂದೆ ಸುಬ್ಬರಾಯಪ್ಪ. ಅವರ ಮುಂದೆ ಸವಿತಾ ಎಂಬ ಹುಡುಗಿ, ನಾಟಕದ ಮುಂದಿನ ಯಾವುದೋ ದೃಶ್ಯದಲ್ಲಿ ಪ್ರವೇಶಿಸಲು ಸಜ್ಜಾಗಿ ನಿಂತಿದ್ದಳು. ಮಾಸ್ತರರು, ಅಭ್ಯಾಸಬಲದಿಂದೆಂಬಂತೆ, ಅವಳ ಹಿಂಭಾಗವನ್ನು ತಟ್ಟಿ, ''ಸರಿಯಾಗಿ ಮಾಡೆ... ಮಾತ್ ಮರೀಬೇಡಾ...'' ಎಂದು ಹೇಳಿದರು. ''ಶಾಲೆ ಹೆಸರು ಮುಂದೆ ತರಬೇಕು... ಶಾಲೆ

ಹೆಸರು'' ಎಂದು ಹೇಳುತ್ತ ಸವರಿದರು. ಅವಳು ತನ್ನ ಕೈಯಿಂದ ಅವರ ಕೈಯನ್ನು ಹಿಡಿದಳು. ಅದನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೆಂದು ಗೊತ್ತಾಗುವುದರೊಳಗೆ, ಅವರ ಕೈಬೆರಳುಗಳನ್ನು ಗಟ್ಟಿಯಾಗಿ ಹಿಡಿದು ತಿರುಚಿದಳು. ನೋವಿನಿಂದ ಪ್ರಾಣ ಹೋದಂತಾಯಿತು. ಅಯ್ ಎಂದು ನರಳಿ, ಬಿಡಿಸಿಕೊಳ್ಳಲು ಹೆಣಗಿದರೆ ಅವಳ ಹಿಡಿತ ಉಡದಂತಿತ್ತು.

ಅವಳು ಬೆರಳುಗಳನ್ನು ವಿರುದ್ಧ ದಿಕ್ಕಿಗೆ ತಿರುಚುವುದನ್ನು ಬಿಡಲಿಲ್ಲ. ಮಾಸ್ತರರು ಬೆರಳುಗಳು ಮಡಚಿಕೊಳ್ಳುತ್ತಿದ್ದಂತೆ, ಅವುಗಳ ಜೊತೆ ಬಗ್ಗಿದರು. ಬಗ್ಗುತ್ತ, 'ಏ, ಹಾಹಾ, ಏನೇ, ಎಂತಾಕೇ ಮಾರಾಯಿತಿ' ಎಂದೆಲ್ಲ ಕೆಳದನಿಯಲ್ಲಿ ನರಳುತ್ತ, ಹಲ್ಲುಕಚ್ಚಿ ನೋವು ಸಹಿಸಿಕೊಂಡು ಅವಳತ್ತ ನೋಡಿದರು. ಅವಳ ಕಣ್ಣುಗಳು ಎಲ್ಲೋ ನೆಟ್ಟ ಹಾಗೆ ಅವರಿಗೆ ಅನಿಸಿತು. ಇವರ ಹಾಹಾಕಾರಕ್ಕೆ ಅವಳು ಪ್ರತಿಕ್ರಿಯಿಸಲಿಲ್ಲ. ಮೇಕಪ್ ಮಾಡಿದ ಅವಳ ಮುಖ ಅವರಿಗೆ ವಿಚಿತ್ರವಾಗಿ ಕಾಣಿಸಿತು. ಲಿಪ್‌ಸ್ಟಿಕ್ ಹಚ್ಚಿದ ತುಟಿಗಳು ಕೆಂಡ ಇಟ್ಟಂತಿದ್ದವು. ಅವರು ಮಂಡಿಯೂರುವವರೆಗೂ ಸವಿತಾ ಬಿಡಲಿಲ್ಲ. ನಂತರ ಒಂದೂ ಮಾತಾಡದೇ ಅವರನ್ನು ತುಸು ತಳ್ಳಿದಳು. ಮತ್ತು ಏನೂ ಆಗಿಲ್ಲವೆಂಬಂತೆ ರಂಗ ಮಂಚದತ್ತ ಮುಖಮಾಡಿಕೊಂಡು ನಿಂತಳು. ಎಲ್ಲವೂ ಕ್ಷಣಾರ್ಧದಲ್ಲಿ ಜರುಗಿ ಹೋಯಿತು. ನಾಟಕ ನೋಡುತ್ತ, ತಮ್ಮ ಸರದಿಗಾಗಿ ಅಲ್ಲಿ ಕಾಯುತ್ತಿದ್ದ ಯಾರಿಗೂ, ಈ ಯಾವುದೂ ಲಕ್ಷ್ಯಕ್ಕೆ ಬರಲಿಲ್ಲ.

ಸುಬ್ಬರಾಯಪ್ಪನವರಿಗೆ ನೋವಿನಿಂದ ಮತ್ತು ಅವಮಾನದಿಂದ ಜೀವ ಹೋದಂತಾಯಿತು. ತಮ್ಮ ವ್ಯಕ್ತಿತ್ವದ ಒಂದು ಪೊಳ್ಳುತನ ಬಯಲಿಗೆ ಬಂದಂತೆನಿಸಿತು. ಯಾವ ಕಾಮ ಪ್ರಚೋದನೆಯೂ ಇಲ್ಲದೇ ಇದ್ದರೂ, ಬರೀ ಅಭ್ಯಾಸ ಬಲದಿಂದ ತಾನು ಹುಡುಗಿಯರ ಹಿಂಭಾಗಕ್ಕೆ ಕೈ ಕಳಿಸುತ್ತೇನಲ್ಲ ಅನಿಸಿತು. ಸುಬ್ಬರಾಯಪ್ಪ ತಮ್ಮ ಮನಸ್ಸಿನ ಆಳಕ್ಕೆ ಹೋಗಿ ಕೆದಕತೊಡಗಿದರು. ಯಾವತ್ತೂ, ಶಾಲೆಯ ಯಾವ ಹುಡುಗಿಯನ್ನೂ, ನಿಜವಾಗಿಯೂ ಬಯಸಿರಲಿಲ್ಲ ಎಂದು ಖಾತ್ರಿಯಾಗತೊಡಗಿತು. ಎಲ್ಲ ತೋರುಗಾಣಿಕೆ. ರಸಿಕ ವ್ಯಕ್ತಿತ್ವದ ಸುತ್ತ ಕಟ್ಟಿಕೊಂಡ ಪೊಳ್ಳು ಗೋಡೆ. ಈ ಘಟನೆಯ ನಂತರದ ದಿನಗಳಲ್ಲಿ ನಡೆದ ಅವರ ಆತ್ಮವಿಮರ್ಶೆಯ ಸಾರಾಂಶವೆಂದರೆ-ವ್ಯಕ್ತಿತ್ವದಲ್ಲಿ ಒಂದು ಫಾಜೀಲ ಎಳೆ ಇಲ್ಲದಿದ್ದರೆ ಜೀವನದ ಸತ್ಯಗಳು ಕಾಣಿಸುವುದಿಲ್ಲ. ತಾವು ಕಟ್ಟಿಕೊಂಡ ವ್ಯಕ್ತಿತ್ವದ ಹಿಂದೆ ಇಂಥದೊಂದು ಬಯಕೆ ಇದ್ದಿರಬಹುದು. ಒಳ್ಳೆಯ ಗಂಡ, ಒಳ್ಳೆಯ ಅಪ್ಪ, ಒಳ್ಳೆಯ ವ್ಯಕ್ತಿ ಆಗತೊಡಗಿದೊಡನೆ ಸತ್ಯವನ್ನು ಕಣ್ಣಿಟ್ಟು ನೋಡುವ ಮತ್ತು ಅದನ್ನು ಧೈರ್ಯ



ವಾಗಿ ಹೇಳುವ ಸಾಧ್ಯತೆ ಕಡಿಮೆಯಾಗುತ್ತ ಹೋಗುತ್ತದೆ. ಸಂಸಾರದ ಪಾತ್ರಧಾರಣೆಯನ್ನು ಮೀರುವುದಕ್ಕೆ, ನಿಜದ ಹತ್ತಿರ ಸರಿಯುವುದಕ್ಕೆ ಇಂಥ ಒಂದು ಡೊಂಕು ಬೇಕು. ಇದಕ್ಕೆ ಹುಡುಗಿಯರ ಕುಂಡೆ ಸವರಬೇಕಾಗಿರಲಿಲ್ಲ ಅನ್ನುವುದು ನಿಜ. ಇನ್ನು ಅದರ ಅಗತ್ಯವಿಲ್ಲ. ಈ ಘಟನೆಯನ್ನೇ ಚಿಂತಿಸುತ್ತ, ಇದು ತನ್ನ ಒಳಗನ್ನು ಕೊರೆಯುವ ಮುಂದೆ ಇದನ್ನೆಲ್ಲ ಮರೆತುಬಿಡಬೇಕು. ಇತ್ಯಾದಿ ಇತ್ಯಾದಿ.



ಮಳೆಗಾಲದ ಮಧ್ಯದಲ್ಲಿ, ಜೇಜಾಬಾಯಿ, ಕೆಲಸಕ್ಕೆ ರಾಜೀನಾಮೆ ಇತ್ತು, ಊರು ಬಿಟ್ಟು ಹೊರಟರು. ಯಾರಿಗೂ ಅದರ ಸರಿಯಾದ ಕಾರಣಗಳು ಗೊತ್ತಿರಲಿಲ್ಲ. 'ಇಲ್ಲಿಂದ ಊರಿಗೆ ಹೋಗುತ್ತೇನೆ' ಎಂದು ಹೇಳಿದ್ದನ್ನು, ಮದುವೆಯಾಗಲು ಹೊರಟಿದ್ದಾರೆ ಎಂದೂ ಕೆಲವರು ಅರ್ಥೈಸಿದ್ದರು. ಅವರು ಹೊರಡುವ ಹಿಂದಿನ ದಿನ ಧಾರಾಕಾರ ಮಳೆ. ಮಧ್ಯಾಹ್ನದಿಂದಲೇ ಶುರುವಾದ ಮಳೆ ನಿಂತಿರಲಿಲ್ಲ. ಬಿರುಸಾದ ಗಾಳಿ. ಶಾಲೆಯಲ್ಲಿ ಜೇಜಾಬಾಯಿಯವರ ಬೀಳ್ಕೊಡುಗೆ ಸಮಾರಂಭ ಮುಗಿಸಿ ಬಂದ ಸುಬ್ಬರಾಯಪ್ಪನವರು, ಆ ಸಂಜೆ ಎಲ್ಲೂ ಹೋಗದೇ ಮನೆಯಲ್ಲೇ ಇದ್ದರು. ಸುಮಾರು ಎಂಟು ಗಂಟೆಯ ಹೊತ್ತಿಗೆ, ಜೇಜಾಬಾಯಿಯ ನೆರೆಮನೆಯ ಹುಡುಗ ಸುಬ್ಬರಾಯಪ್ಪನವರ ಮನೆಗೆ ಬಂದು, ಬಾಯಿಯವರು ಬರಲಿಕ್ಕೆ ಹೇಳಿದ್ದಾರೆ ಅಂದ. ಯಾಕೆ, ಏನು ಎಂದು ಮಾಸ್ತರರು ಕೇಳಿದ ಪ್ರಶ್ನೆಗೆ ಉತ್ತರ ಅವನಿಗೂ ಗೊತ್ತಿರಲಿಲ್ಲ. ಏನೋ ಅನಾಹುತ ಆಗಿರಬಹುದೆಂದು, ತನ್ನನ್ನು ಸಹಾಯಕ್ಕೆ ಕರೆದಿರಬಹುದೆಂದು ಸುಬ್ಬರಾಯಪ್ಪ ಭಾವಿಸಿದರು. ಆ ಮಳೆಯಲ್ಲಿ, ಕೊಡೆ ಹಿಡಿದು ಜೇಜಾಬಾಯಿಯ ಮನೆ ತಲುಪುವ ವೇಳೆಗೆ ಅವರು ಅರ್ಧ ಒದ್ದೆಯಾಗಿದ್ದರು. ಅವರು ಮನೆ ಬಾಗಿಲು ಬಡಿಯುವ ವೇಳೆಗೆ ಸರಿಯಾಗಿ ಕರೆಂಟು ಹೋಯಿತು. ಯಾರು ಯಾರು ಎಂದು ಕೇಳಿ, ಈಗ ಬಂದೆ, ಈಗ ಬಂದೆ ಎನ್ನುತ್ತ ಜೇಜಾಬಾಯಿ, ಮೇಣದ ಬತ್ತಿ ಹಚ್ಚಿ ಬಾಗಿಲು ತೆಗೆದರು. ಬಾಗಿಲು ತೆಗೆಯುತ್ತಿರುವಂತೆಯೇ ಒಳನುಗ್ಗಿದ ಗಾಳಿ, ಅರೆಕ್ಷಣದಲ್ಲಿ ಜೇಜಾಬಾಯಿಯವರನ್ನು ಮುತ್ತಿ, ಸೀರೆಯನ್ನು ಅವರ ದೇಹಕ್ಕೆ ಒತ್ತಿ, ಸರ್‍ರನೆ ಮನೆಯೊಳಗೆ ಸುಳಿದು ಹೋದುದು, ಅಂಗೈ ಅಡ್ಡ ಹಿಡಿದಿದ್ದ ಅವರ ಕೈಯ ದೀಪದ ಜ್ವಾಲೆಯ ಕಳವಳದಲ್ಲೇ ಗೊತ್ತಾಯಿತು. ಹೊರಗಿನ ಆ ಮಳೆ, ಗಾಳಿ, ಕತ್ತಲು, ಮಿಂಚು, ಗುಡುಗು-ಎಲ್ಲವೂ ಸುಬ್ಬರಾಯಪ್ಪನವರನ್ನು, ಆದಷ್ಟು ಬೇಗ ಮನೆಯೊಳಗೆ ಹೋಗುವಂತೆ, ಹೋಗಿ ಬಾಗಿಲು ಮುಚ್ಚುವಂತೆ ತಳ್ಳುತ್ತಿತ್ತು. ಅವರು ಹೋದರು. ಜೇಜಾಬಾಯಿ ಬಾಗಿಲು ಮುಚ್ಚಿ ಬಂದರು. ಭರ್‍ರಭರ್‍ರನೆ ಬೀಸುತ್ತಿದ್ದ ಗಾಳಿಯ ಸದ್ದು ತುಸು ಅಡಗಿದಂತಾಯಿತು. ಹೆಂಚಿನ ಸಂದುಗಳೊಳಗಿಂದ ನುಗ್ಗಲು ಪ್ರಯತ್ನಿಸುವ ಗಾಳಿ, ಸುಂಯ್ಯೆಂದು ಶಬ್ದ ಮಾಡುತ್ತಿತ್ತು. ಮನೆಯೊಳಗೆ ಬೆಚ್ಚಗಿತ್ತು. ದೀಪವನ್ನು ಮೂಲೆಯಲ್ಲಿದ್ದ ಚಿಕ್ಕ ಟೇಬಲ್ಲಿನ ಮೇಲೆ ಇಟ್ಟು, ಜೇಜಾಬಾಯಿಯವರು, ಸುಬ್ಬರಾಯಪ್ಪನವರನ್ನು ಉಪಚರಿಸಿದರು. ಅಲ್ಲಿದ್ದ ಆರಾಮ ಖುರ್ಚಿಯೊಂದರಲ್ಲಿ ಕೂರಿಸಿದರು. ಕಂಪಿಸುವ ಮೋಂಬತ್ತಿಯ ಜ್ವಾಲೆಯಿಂದಾಗಿ ನೆರಳುಗಳು ಓಲಾಡುತ್ತಿದ್ದವು. ಇದುವರೆಗೂ, ತಮ್ಮನ್ನು ಈ ಹೊತ್ತಿನಲ್ಲಿ ಕರೆಸಬೇಕಾಗಿ ಬಂದಂಥ ಯಾವ ಅನಾಹುತದ ಸೂಚನೆಯೂ ಸುಬ್ಬರಾಯಪ್ಪನವರಿಗೆ ಅಲ್ಲಿ ಕಾಣಿಸಲಿಲ್ಲ. ಬದಲು, ಜೇಜಾಬಾಯಿ ಅವರನ್ನು

ಉಪಚರಿಸಿ ಕೂರಿಸುವುದರಲ್ಲಿ ತೊಡಗಿದ್ದರು. ನಿಧಾನವಾಗಿ ಆ ಈ ಮಾತಾಡಿದರು. ಸುಬ್ಬ ರಾಯಪ್ಪನವರ ಸಹನೆ ಮೀರಿ, ಯಾಕೆ ಕರೆಸಿದ್ದು ಎಂದು ಕೇಳಿಯೇಬಿಟ್ಟರು. ನಿಮ್ಮನ್ನ ನೋಡುವಾ, ನಿಮ್ಮ ಜೊತೆ ಮಾತಾಡುವಾ ಅನಿಸಿತು ಎಂಬ ಉತ್ತರ ಕೇಳಿ ಅಧೀರರಾದರು. ಬೇರೆ ಏನೋ ಮಾತು ತೆಗೆಯಲು ನೋಡಿದರು. ಆದರೆ ಜೀಜಾಬಾಯಿ ಮಾತ್ರ, ಯಾವುದನ್ನೂ ಕೇಳುವ ಸ್ಥಿತಿಯಲ್ಲಿರಲಿಲ್ಲ. ಅವರು ಮಾತಾಡಲು ನಿರ್ಧರಿಸಿದ್ದರು. ತಮ್ಮ ಒಮ್ಮುಖ ಪ್ರೇಮ ನಿವೇದನೆಯನ್ನು ವಿವಿಧ ರೂಪಕಗಳ ಮೂಲಕ ಮುಂದುವರಿಸಿದರು. ಎಲ್ಲವೂ ಈ ದೈವಿಕ ಪ್ರೇಮಕ್ಕೆ ತಕ್ಕುದಾಗಿತ್ತು-ಆ ಧಾರಾಕಾರ ಮಳೆ, ಮೋಂಬತ್ತಿಯ ಬೆಳಕು, ಒಲಿದುಬಂದ ಸುಂದರಿ ಎಲ್ಲವೂ. ಆದರೆ ಸುಬ್ಬರಾಯಪ್ಪನವರು ಈ ಮಾತು ಗಳನ್ನು ಕೇಳಿಸಿಕೊಳ್ಳಲು ಸಿದ್ಧರಾಗಿ ಬಂದಿರಲಿಲ್ಲ.

ಜೀಜಾಬಾಯಿಯ ಕತೆಯಲ್ಲಿ ಅವರ ಬಾಲ್ಯ, ಯೌವನ, ಈ ಶಾಲೆಯ ಕೆಲಸ, ಬಾಲ್ಯಕಾಲ ಸಖಿಯರು-ಎಲ್ಲ ಯಾವುಯಾವುದೋ ಕ್ರಮ ದಲ್ಲಿ ಬರತೊಡಗಿದವು. ಊರಿನ ನದಿಯ ತೀರಕ್ಕೆ ಗೆಳತಿಯರ ಜೊತೆ ಹೋದಾಗ, ಮಂಗಗಳು ಬೆನ್ನು ಹತ್ತಿ ಓಡಿಬಂದದ್ದನ್ನು ಸವಿಸ್ತಾರ ಹೇಳಿದರು. ಬೆಳಗಾವಿಯ ಸಮೀಪದ ಊರಿನ ದೊಡ್ಡ ವಾಡೆಯೊಂದರಲ್ಲಿ ಅವರು ಹುಟ್ಟಿದ್ದರು. ಅಪ್ಪನಿಗೆ ಇಬ್ಬರು ಹೆಂಡತಿಯರು. ಒಟ್ಟೂ ಆರು ಮಕ್ಕಳಲ್ಲಿ ಎರಡು ಹೆಣ್ಣು. ಜೀಜಾಬಾಯಿ ಹಿರಿಯ ಹೆಂಡತಿಯ ಮಗಳು. ಸಂಗೀತದ ಬಗ್ಗೆ ಇದ್ದ ಪ್ರೇಮದಿಂದ ಜೀಜಾ ಬಾಯಿ ಅದರ ಬೆನ್ನು ಹತ್ತಿ ಹೋದರು.

'ಅಪ್ಪ ಪುಣೆಯಲ್ಲಿ ಓದಿ ಮರಳಿ ಬಂದು ವಾಡೆಯನ್ನು ವಹಿಸಿಕೊಂಡ. ಮನೆಯಲ್ಲಿ ವಿಚಿತ್ರ ವಾತಾವರಣವಿತ್ತು. ಅಪ್ಪ ಯಾವುದನ್ನೂ ಮುಚ್ಚಿಡು ವಂಥವರಲ್ಲ. ಮಹಾ ವಿಲಾಸಿ. ನೂರಾರು ಎಕರೆ ಹೊಲವನ್ನು ಸ್ವತಃ ಮಾಡಿಸುತ್ತಿದ್ದ. ನಮ್ಮಪ್ಪನ ಹೆಸರು ಬಾಬಾಸಾಹೇಬ. ಅದೆಷ್ಟೋ ಹಿಂದೆ ಪೇಶ್ವೆಗಳಿಂದ, ನಮ್ಮ ಪೂರ್ವಿಕರು ಶೌರ್ಯದ ಕುರುಹಾಗಿ ಈ ಬಳುವಳಿ ಪಡೆದು, ಇಲ್ಲಿ ಬಂದು ನೆಲೆಸಿದರು ಎಂದು ಅವನು ಯಾವಾಗಲೂ ಹೇಳುತ್ತಿದ್ದ. ಮುಗಿಯದಷ್ಟು ಆಸ್ತಿ ಇತ್ತು. ಈಗಲೂ ಇದೆ. ನಮ್ಮಪ್ಪ ಇಲ್ಲ ಅಷ್ಟೇ. ಅವನು ಆಳುಕಾಳುಗಳ ಮೇಲೆ ಸಿಟ್ಟಾಗುವ ರೀತಿ, ಅವರನ್ನು ವಿಶ್ವಾಸದಿಂದ ನಡೆಸಿಕೊಳ್ಳುವ ರೀತಿ ಎರಡೂ ಅತಿಯಾಗಿತ್ತು. ನಮ್ಮಲ್ಲಿ ಯಾರಿಗೂ, ಒಂದು ದಿನವೂ, ಕೂತು ಓದು ಅಂದವನಲ್ಲ. ಆದರೆ ನಾವೆಲ್ಲ ಓದಿದೆವು-ಯಾವುದ ರಿಂದಲೋ ತಪ್ಪಿಸಿಕೊಳ್ಳುವವರ ಹಾಗೆ. ಒಬ್ಬರಿಗಿಂತ ಒಬ್ಬರು ಬುದ್ಧಿವಂತರು. ಯಾವಾ ಗಲೂ ಮೊದಲ ನಂಬರು ಪಡೆದವರು. ಮುಂದೆ ಮುಂದೆ ಓದಿದರು. ಅಪ್ಪ ಇದನ್ನೇ ಮಾಡು ಎಂದು ಯಾವಾಗಲೂ ಹೇಳಲಿಲ್ಲ. ನಮಗೆಲ್ಲ ಅಗಾಧ ಸ್ವಾತಂತ್ರ್ಯವಿದ್ದಂತೆ ಅನಿಸುತ್ತಿತ್ತು. ನಮ್ಮಪ್ಪ ಎಲ್ಲರಿಗಿಂತ ಬೇರೆ ಎಂದು ಗೊತ್ತಾಗುತ್ತಿತ್ತು. ನಾವು ಯಾರೂ ಮದುವೆಯಾಗಲಿಲ್ಲ. ಅದಕ್ಕಿ ರುವ ಅನೇಕ ಕಾರಣಗಳಲ್ಲಿ, ನಾವೆಲ್ಲ ತೀರಾ ಎತ್ತರ ಅನ್ನುವುದೂ ಒಂದು. ಅಪ್ಪ ಯಾರ ಮದುವೆಗೂ ಪ್ರಯತ್ನವನ್ನೇ ಪಡಲಿಲ್ಲ. ಬೆಳೆದು ವಯಸ್ಸಿಗೆ ಬಂದ, ಯೋಗ್ಯ ಗಂಡುಮಕ್ಕಳ ಮದುವೆಯೇ ಆಗದ ಮನೆಯಲ್ಲಿ, ಹೆಣ್ಣುಮಕ್ಕಳ ಮದುವೆಗೆ ಯಾರು ಆಸಕ್ತಿ ವಹಿಸುತ್ತಾರೆ? ಅವರಿಗೆ ಸುತ್ತಲಿನ ಜನರ ಭಯವಾಗಲೀ, ಹಂಗಾಗಲೀ ಇರಲಿಲ್ಲ. ಊರಿನ ಅತಿ ಶ್ರೀಮಂತನನ್ನು ಯಾರು ತಡವಲು ಇಷ್ಟಪಡು ತ್ತಾರೆ? ನಮ್ಮ ಅದೃಷ್ಟಕ್ಕೋ, ದುರಾದೃಷ್ಟಕ್ಕೋ, ಇಬ್ಬರೂ ಅಮ್ಮಂದಿರೂ ಅವನ ಹಾಗೆಯೇ ಇದ್ದರು. ಯಾರಿಗೂ ದಾದು ಮಾಡಿದವರಲ್ಲ. ನನಗೆ ಹೇಳಲು ನಾಚಿಕೆಯಾಗುತ್ತದೆ- ಇಬ್ಬರ ಜೊತೆಯೂ ಮಲಗುತ್ತಿದ್ದ ಅಪ್ಪ, ನನಗೆ ಹದಿನೈದು ವಯಸ್ಸಾಗುವವರೆಗೂ, ಇಬ್ಬ

ರಿಂದಲೂ ಮಕ್ಕಳನ್ನು ಹುಟ್ಟಿಸುತ್ತಲೇ ಇದ್ದ. ಬೆಳೆದ ಮಕ್ಕಳು ಇದನ್ನೆಲ್ಲ ಯೋಚಿಸುವುದಿಲ್ಲವೆಂದು ಅವನು ಭಾವಿಸಿದನೇನು? ಅವನಿಗೆ ಅದರ ಬಗ್ಗೆ ಸಂಕೋಚವೇ ಇರಲಿಲ್ಲ. ಇಬ್ಬರ ಜೊತೆಯೂ ಒಂದೇ ಕೋಣೆಯಲ್ಲಿ ಮಲಗುತ್ತಿದ್ದ. ಅಲ್ಲಿ ಒಬ್ಬಳು ಇರುವಾಗಲೇ, ಅವನು ಇನ್ನೊಬ್ಬಳ ಜೊತೆ ಮಲಗತ್ತಾನೇನು ಎಂದು ನಾನು ಯೋಚಿಸುತ್ತಿದ್ದೆ. ಅಥವಾ ಇಬ್ಬರ ಜೊತೆಯೂ. ಕೆಲವೊಮ್ಮೆ ನನಗೆ ಅವನ ಮೇಲೆ ಅಸಹ್ಯವಾಗುತ್ತಿತ್ತು. ಆದರೆ ಅವನಿಗೆ ಯಾರದೂ ಪರಿವೆಯಿರಲಿಲ್ಲ. ಮಕ್ಕಳು, ಅವರವರ ದಾರಿ ಅವರವರು ನೋಡಿಕೋಬೇಕು ಎಂದು ಹೇಳುತಾ ಇದ್ದ... ಒಮ್ಮೆ ನಮ್ಮ ಮನೆಗೆ ಬಂದ ಅಪ್ಪನ ಕಡೆಯ ಸಂಬಂಧದ ಮುದುಕಿಯೊಬ್ಬಳು, ಅಪ್ಪನಿಗೆ ಬುದ್ಧಿವಾದ ಹೇಳಲು ನೋಡಿದಳು. ಹೆಣ್ಣುಮಕ್ಕಳ ಮದುವೆ ಮಾಡು ಅಂದಳು. ಅದಕ್ಕೆ ಅವನೇನು ಹೇಳಿದ ಗೊತ್ತೇನು? ಅವರವರೇ ಹುಡುಕಿಕೊಳ್ಳಲಿ. ನಾನಾಗಿ ಗಂಡು ಹುಡುಕಿ ಮಾಡುವುದರಲ್ಲಿ ನನಗೆ ನಂಬಿಕೆಯಿಲ್ಲ. ಅವರಿಗೆ ಯಾರನ್ನಾದರೂ ಕೂಡಿಕೆ ಮಾಡಿಕೋಬೇಕಿದ್ದರೆ ಮಾಡಿಕೊಳ್ಳಲಿ. ಯಾರನ್ನಾದರೂ ಇಟ್ಟುಕೊಳ್ಳಲಿ ಬೇಕಿದ್ದರೆ... ಅಷ್ಟೇ ಅಲ್ಲ, ನಮ್ಮನ್ನೆಲ್ಲ ಕರೆದು, ಇದನ್ನೆಲ್ಲ ಅವರ ಎದುರಿಗೇ ಬಾಯಿಬಿಟ್ಟು ಹೇಳಿಯೂಬಿಟ್ಟ. ನಮ್ಮ ಇಬ್ಬರೂ ಅಮ್ಮಂದಿರು ಮುಸುಮುಸು ನಗುತ್ತ ಈ ನಾಟಕ ನೋಡುತ್ತಿದ್ದರು...'

'ನಾನು ಸಂಗೀತ ಕಲಿಯಲು ಹೋಗುತ್ತೇನೆಂದುದಕ್ಕೆ, ಹೋಗು ಜೀಜಾ... ಹೋಗು... ಅದರ ಎಲ್ಲ ಸೀಮೆಗಳನ್ನು ಉಲ್ಲಂಘಿಸು ಅಂದ... ಉಲ್ಲಂಘಿಸಲು ವೈಯಕ್ತಿಕ ಜೀವನದಲ್ಲೇ ಸೀಮೆಗಳಿರದಿದ್ದರೆ, ಸಂಗೀತದ ಯಾವ ಸೀಮೆಗಳನ್ನು ದಾಟಿ ಹೋಗಲು ಸಾಧ್ಯ? ವೈಯಕ್ತಿಕ ಜರೂರು ಇಲ್ಲದೆಯೇ, ಯಾವುದನ್ನೂ ಅತಿಗೆ ಒಯ್ಯುವುದರಲ್ಲಿ ಯಾವ ಸುಖವಿದೆ? ನಮ್ಮಪ್ಪನಿಗೆ ನಮ್ಮ



ಬಗ್ಗೆ ಪ್ರೀತಿ ಇರಲಿಲ್ಲ ಎಂದು ಹೇಳಿದರೆ ಸುಳ್ಳು ಹೇಳಿದಂತಾಗುವುದು. ಅವನಿಗೆ ಅತಿಶಯವಾದ ಪ್ರೀತಿ ಇತ್ತು. ಆದರೆ ಅವನು ನಮಗೆ ಕೊಟ್ಟ ಸ್ವಾತಂತ್ರ್ಯವನ್ನು ಮಾತ್ರ ನಾವು ತಾಳಿಕೊಳ್ಳಬಲ್ಲವರಾಗಿರಲಿಲ್ಲ. ಅದು ಅವನ ಬೇಜವಾಬ್ದಾರಿತನ ಎಂದೂ ಕೆಲವು ಸಲ ಅನಿಸುತ್ತದೆ...'

ಹೀಗೆ ಜೀಜಾಬಾಯಿ ಹೇಳುತ್ತ ಹೋದಂತೆ, ಅವರ ಕತೆಯಲ್ಲಿ ನಾನಾ ವಿವರಗಳು ಸೇರಿಕೊಂಡವು. ಸಂಬಂಧವಿದೆ ಅನಿಸುವ ಚಿತ್ರಗಳು.

ಸಂಬಂಧವಿಲ್ಲ ಅನಿಸುವ ಚಿತ್ರಗಳು. ಊರ ಅಂಚಿನಿಂದ ಹಾದು, ಮುಂಬೈ ಸೇರುವ ಹೆದ್ದಾರಿಯಲ್ಲಿ, ರಾತ್ರಿ ಹಾಯುವ ವಾಹನಗಳು ಮಾಡುತ್ತಿದ್ದ ವಿಚಿತ್ರ ಏಕತಾನದ ಸದ್ದು. ನಿದ್ದೆ ಬಾರದ ರಾತ್ರಿಗಳಲ್ಲಿ ಜೇಜಾಬಾಯಿ ಅದಕ್ಕಾಗಿ ಕಾಯುತ್ತಿದ್ದರು. ಒಂದರ ನಂತರ ಒಂದು. ಭರ್ರ್ರೋ ಎಂದು. ಅದರ ಸದ್ದಿನಲ್ಲೇ ಅವರಿಗೆ ವಾಹನಗಳ ಭಾರ ಗೊತ್ತಾಗುತ್ತಿತ್ತು. ಚಕ್ರಗಳು, ರಾತ್ರಿಯ ನಿಶ್ಶಬ್ದದಲ್ಲಿ ರಸ್ತೆಯನ್ನು ಚರ್ರ‌ಚರ್ರನೆ ಅಪ್ಪಿ ಅಪ್ಪಿ, ಮತ್ತೆ ಮತ್ತೆ ಕ್ಷಣಮಾತ್ರದಲ್ಲಿ ಬಿಡುತ್ತಿದ್ದ ಸದ್ದು.

ಆ ಮನೆಯ ದೊಡ್ಡ ದೊಡ್ಡ ಹಜಾರಗಳಲ್ಲಿ ಒಂದು ದಿನ. ಆವತ್ತು ಎಲ್ಲರೂ ಗೋಕಾಕದ ಸಂತೆಗೆ ಹೋಗಿದ್ದರು. ಜೇಜಾಗೆ ತುಸು ಜ್ವರ ಬಂದಂತಿತ್ತು. ಮಾರನೇ ದಿನ ಸಂಗೀತ ಪರೀಕ್ಷೆ ಇತ್ತು. ಒಬ್ಬಳನ್ನೇ ಮನೆಯಲ್ಲಿ ಬಿಟ್ಟು ಎಲ್ಲರೂ ಸಂತೆಗೆ ಹೋದರು. ಎಲ್ಲ ಹೋದ ನಂತರ, ಒಬ್ಬಳೇ ಮನೆಯಿಡೀ ಓಡಾಡಿದ ಕ್ಷಣಗಳಲ್ಲಿ, ಅಲ್ಲಿಯ ಮೂಲೆ ಮೂಲೆಗಳಲ್ಲಿ, ಕತ್ತಲು ತುಂಬಿಕೊಂಡ ಅಟ್ಟದಲ್ಲಿ, ಯಾವುದೋ ಇತಿಹಾಸವೊಂದು ಸಂಚು ಹೂಡಿ, ತಕ್ಕ ಸಮಯಕ್ಕೆ ಕಾಯುತ್ತಿದ್ದಂತೆ ಅನಿಸಿತ್ತು. ಜೇಜಾಬಾಯಿಗೆ ಸಂಗೀತದ ಅಭ್ಯಾಸ ಮುಂದುವರಿಸಲು ಸಾಧ್ಯವೇ ಆಗಲಿಲ್ಲ. ಹಾಡಲು ಬಾಯಿ ತೆಗೆದಾಗ, ಖಾಲಿ ಮನೆ ಖಾಲಿ ಅನಿಸಲಿಲ್ಲ. ಯಾರೋ ಅಲ್ಲೇ ಸುಳಿಯುತ್ತಿದ್ದ ಹಾಗೆ ಭಾಸವಾಯಿತು. ತನ್ನನ್ನು ಅಕ್ಕರೆಯಿಂದ ಗಮನಿಸುತ್ತಿರುವಂತೆ ಅನಿಸಿತು. ಬಳುವಳಿಯನ್ನು ಕೊಟ್ಟವನು ಯಾವ ಪೇಶ್ವೆಯಾಗಿರಬಹುದು ಎಂದು ಯೋಚಿಸಿದರು. ಖಡ್ಗವನ್ನು ಝುಳಪಿಸುತ್ತ, ನೆತ್ತರನ್ನು ಚಿಮ್ಮಿಸುತ್ತ, ಪುಂಡ ಕುದುರೆಯ ಪಕ್ಕೆಗಳನ್ನು ತನ್ನ ಮುಂಗಾಲುಗಳಿಂದ ತಿವಿದು ನಿಗ್ರಹಿಸುತ್ತ, ತನ್ನ ಪೌರುಷವನ್ನು ಮೆರೆದ ಪೂರ್ವಿಕ ಯಾರಾಗಿರಬಹುದು, ಅವನು ಹೇಗಿದ್ದಿರಬಹುದು ಎಂದು ಯೋಚಿಸಿದಳು. ಅವನೂ ಎತ್ತರಕ್ಕಿದ್ದಿರಬಹುದು ತಮ್ಮೆಲ್ಲರ ಹಾಗೆ. ಮತ್ತು ಬಲಶಾಲಿ. ಅವನಿಗೆಷ್ಟು ಹೆಂಡಂದಿರು? ಅವನ ಕೈಯಿಂದ ಸತ್ತವರ ಹೆಂಡತಿಯರು ಇತ್ತ ಶಾಪಗಳನ್ನು ಸುತ್ತಿಕೊಂಡೂ ತಾಳಿಕೊಂಡವನಲ್ಲವೇ? ಆ ಒಂದು ಕ್ಷಣ ಅವಳಿಗೆ ತನ್ನ ಎತ್ತರದ ಬಗ್ಗೆ ಅಭಿಮಾನವೆನಿಸಿತ್ತು.

ಜೇಜಾ ವಾರದಲ್ಲಿ ಮೂರು ದಿನ ಬೆಳಗಾವಿಗೆ ಸಂಗೀತ ಕಲಿಯಲು ಹೋಗುತ್ತಿದ್ದಳು. ಬಸ್ಸಿನಲ್ಲಿ ಹೋಗಿ ಬರುವುದು. ನಡುವಯಸ್ಸಿನ ಸಂಗೀತದ ಗುರುಗಳು, ಒಂದು ದಿನ, ಹೆಂಡತಿ ಮನೆಯಲ್ಲಿಲ್ಲದ ಹೊತ್ತಿನಲ್ಲಿ, ಮೈ ಬಳಸಿ ಮುತ್ತು ಕೊಡಲು ನೋಡಿದ್ದರು. ಅವಳು ರಾಗ ಜೋಡಿಸಲು ನೋಡುತ್ತಿದ್ದಾಗ, ಹಿಂದಿನಿಂದ ಬಳಸಲು ಪ್ರಯತ್ನಿಸಿದ್ದರು. ಜೇಜಾಬಾಯಿಗೆ ಏನೂ ತೋಚದೇ ಓಡಿಬಂದರು. ಅದೊಂದೇ ಅವರ ಜೀವನದಲ್ಲಿ ಗಂಡಸಿನ ಸಂಪರ್ಕ ಬಂದ ಘಟನೆ. ವಾರಗೆಯವರಂತೂ, ಬಾಬಾ ಸಾಹೇಬರ ಮಕ್ಕಳೆಂದರೆ, ಏನೋ ಭಯ, ಗೌರವದಿಂದ ದೂರವೇ ಉಳಿಯುತ್ತಿದ್ದರು. ದೈಹಿಕವಾಗಿ ಮಾತ್ರವಲ್ಲದೇ, ಯೋಗ್ಯತೆಯಲ್ಲೂ, ಎಲ್ಲರ ನಡುವೆ, ಅವರು ಎತ್ತರದಲ್ಲಿದ್ದ ಹಾಗೆ ಉಳಿದವರಿಗೆ ಅನಿಸುವುದು. ಹಾಗಾಗಿ ಅವರಿಗೆ ಆತ್ಮೀಯರಾದ ಜೊತೆಗಾರ ಜೀವಗಳು ಸಿಗಲಿಲ್ಲ. ಯಾವ ಹುಡುಗರೂ ಪೋಲಿ ನಗೆ ನಕ್ಕು, ಅಸಭ್ಯ ಮಾತಾಡಲಿಲ್ಲ. ಅಥವಾ ಅದು ಅವರ ಕಣ್ಣಿಗೇ ಬೀಳಲಿಲ್ಲವೋ ಅವರಿಗೇ ಸ್ಪಷ್ಟವಿಲ್ಲ. ಅದರ ನಂತರ ಅವರು ಧಾರವಾಡಕ್ಕೆ ಹೋಗಿ, ಸಂಗೀತದ ನಾನಾ ಪರೀಕ್ಷೆಗಳನ್ನು ಪಾಸು ಮಾಡಿದರು. 'ನಿಜವಾದ ಸಂಗೀತ ನಡುವೆ ಯಾವಾಗಲೋ ನನ್ನ ಕೈಬಿಟ್ಟಿತು ಅಂತ ನನಗೂ ಗೊತ್ತಾಗಿತ್ತು. ಪರೀಕ್ಷೆಗಳನ್ನು ಹೆಚ್ಚು ಹೆಚ್ಚು ಅಂಕ ಗಳಿಸಿ ಪಾಸು ಮಾಡಬಲ್ಲವಳಾಗಿದ್ದೆನೇ ಹೊರತು ಜೀವಕ್ಕೆ ಹತ್ತಿರವಾದ ಹಾಡುಗಾರಿಕೆ ನನ್ನದಲ್ಲ ಅಂತ ಗೊತ್ತಾಗಿತ್ತು. ಆಗ

ಇಲ್ಲಿ ಶಾಲೆಯ ಕೆಲಸಕ್ಕೆ ಜಾಗ ಇದ್ದುದನ್ನು ನೋಡಿದೆ. ದುಡ್ಡಿನ ಅಗತ್ಯ ಇಲ್ಲದಿದ್ದರೂ, ಕೆಲಸ ಅಂತ ಒಂದಿದ್ದರೆ ಮರುಕಳಿಸುವ ದೈನಿಕ ಇರುತ್ತದಲ್ಲ ಅಂತ ಇಲ್ಲಿ ಬಂದೆ...' ಅಂದರು.

ಜೀಜಾಬಾಯಿ ಹೀಗೆ ತಮ್ಮ ಕತೆ ಹೇಳುತ್ತಿದ್ದ ಹಾಗೆ, ಸುಬ್ಬರಾಯಪ್ಪನವರ ಮನಸ್ಸು ಎಲ್ಲೆಲ್ಲೋ ಹೋಗಿ ಬರತೊಡಗಿತ್ತು. ಅವರಿಗೆ ತಮ್ಮ ಹೆಂಡತಿ ಮತ್ತು ನಡುವೆ ಯಾವಾಗಲೋ ನಿಂತುಹೋದ ತಮ್ಮ ಸಂಸಾರದ ಗಾಡಿ ನೆನಪಾಗತೊಡಗಿದ್ದವು. ಯಾಕೆ, ಏನಾಯಿತು ಎಂದು ಪರಸ್ಪರ ಕೇಳುವುದಕ್ಕೂ ಪುರಸತ್ತು ಇಲ್ಲದವರು ಹಾಗೆ, ಕೇಳುವ ಗರಜೇ ಇಲ್ಲದ ಉಡಾಫೆಯಲ್ಲಿ ಸಂಸಾರ ಸಾಗಿಸತೊಡಗಿದ ಬಗ್ಗೆ ತುಸು ನಾಚಿಕೆ ಯಾಯಿತು. ಮಗಳು ಬೆಳೆಯುತ್ತಿದ್ದಾಳಲ್ಲ ಎಂದು ಮೊದಲ ಬಾರಿ ಅನಿಸಿತು. ಸುಳ್ಳು ಹೇಳಬಾರದು, ನನ್ನ ಮನಸ್ಸಿಗೆ ಅನಿಸಿದ್ದನ್ನೇ ಹೇಳಬೇಕು - ಅದೇ ಇವಳಿಗೆ ನಾನು ಸೂಚಿಸುವ ಗೌರವ ಎಂದು ಅನಿಸಿತು. ಅವಳಿಗೂ ತನ್ನ ಕತೆಯನ್ನೆಲ್ಲ ಹೇಳ ಬೇಕು ಎಂದು ಅವರಿಗೆ ಬಲವಾಗಿ ಅನಿಸಿದರೂ, ಏನನ್ನು ಹೇಳಬೇಕು ಎಂದು ಮಾತ್ರ ತೋಚಲಿಲ್ಲ. ಸಿರ್ಸಿಯಲ್ಲಿದ್ದ ತಮ್ಮ ಪ್ರೇಯಸಿ ಚಂಪಾಳ ಬಗ್ಗೆ ಹೇಳಲೇ ಅಂದುಕೊಂಡರು. ಸರಿಹೋಗಲಿಕ್ಕಿಲ್ಲ ಅನಿಸಿತು. ತನ್ನ ಹೆಂಡತಿ ಮತ್ತು ಮಗಳ ಬಗ್ಗೆ ಅಥವಾ ಶಾಲೆಯಲ್ಲಿ ತಾನು ಮುಂದಿನ ಹೆಡ್‌ಮಾಸ್ತರಾಗಬಹುದು ಎಂದು ಆಡಳಿತ ಮಂಡಳಿಯ ಅಧ್ಯಕ್ಷರು ಸೂಚನೆ ಕೊಟ್ಟ ಬಗ್ಗೆ ಅಥವಾ ಸವಿತಾ ಎಂಬ ಆ ಹುಡುಗಿ ತನ್ನ ಬೆರಳು ತಿರುಚಿದ ಬಗ್ಗೆ - ಇವೆಲ್ಲ ಅವರ ಮನಸ್ಸಲ್ಲಿ ಮಾತುಗಳಾಗಿ ಮರುಕಳಿಸಿದ ಹಾಗೆ, ಇದಲ್ಲ ಇದಲ್ಲ ಅನಿಸತೊಡಗಿತು.

ಇತ್ತ ಕಡೆ, ಜೀಜಾಬಾಯಿಯ ಮಾತು ಅವರು ಸುಬ್ಬರಾಯಪ್ಪನವರನ್ನು ಹೇಗೆ ಗುಪ್ತ ವಾಗಿ ಪ್ರೀತಿಸಿದರೆಂಬುದರತ್ತ ತಿರುಗಿತ್ತು. ಅವರು ವರ್ಷಗಳ ಹಿಂದೆ ಹಾಕುತ್ತಿದ್ದ ನೀಲಿ ಬಣ್ಣದ ಶರ್ಟು, ಯಾವ ದಿನ ಅವರು ಕೂದಲು ಕತ್ತರಿಸಬಹುದೆಂದು ತಾನು ಮನಸ್ಸಲ್ಲೇ, ತನಗೆ ತಾನೇ ಪಂಥ ಕಟ್ಟಿಕೊಳ್ಳುವ ರೀತಿಯನ್ನು ಹೇಳಿದರು. ಅವರ ಮಾತುಗಳು ಮುಂದುವರಿ ಯುತ್ತಿದ್ದ ಹಾಗೆ, ಸುಬ್ಬರಾಯಪ್ಪನವರಿಗೆ, ತಾವು ಇಂಥ ಒಂದು ಉತ್ಕಟ ಪ್ರೇಮಪ್ರಕರಣದಲ್ಲಿ ಒಳಗೊಳ್ಳುವುದು ಸಾಧ್ಯವಿಲ್ಲ ಅನಿಸತೊಡಗಿತ್ತು. ನಲವತ್ತರ ತುಸು ಆಚೆ ಇರಬಹುದಾದ ಜೀಜಾ ಬಾಯಿ, ಇಪ್ಪತ್ತರ ಹುಡುಗಿಯ ಹಾಗೆ, ಇದು ತನ್ನ ಮೊದಲ ಪ್ರೀತಿ ಎಂದೆಲ್ಲ ಮಾತಾಡ ತೊಡಗಿದಾಗ ಅವರಿಗೆ ಅಸಹನೀಯ ವೇದನೆ ಯಾಯಿತು. ಅವರಿಗೆ ಜೀಜಾಬಾಯಿಯ ಬಗ್ಗೆ ಆದರ, ಗೌರವ, ಅವರ ಸೌಂದರ್ಯದ ಬಗ್ಗೆ ಅಭಿಮಾನ, ಆಸೆ ಹೆಚ್ಚು ಹೆಚ್ಚಾದಷ್ಟೂ ಒಳ ಗೊಳಗೇ ಕುಸಿದರು. ತಮ್ಮಲ್ಲಿರುವ ಯಾವುದೋ ಜೀವಸೆಲೆಯೊಂದು ಬತ್ತಿಹೋಗಿದೆ ಎಂದು ಮೊದಲ ಬಾರಿ ಅನಿಸಿತು. ಆತ್ಮಕ್ಕೆ ಆರಾಧನೆಯ ಬೆಚ್ಚಗಿನ ಶಾಖ ಕೊಡುವ ಪ್ರೇಮವನ್ನು, ವಿವಶತೆಯಲ್ಲಿ ಫಕ್ಕನೆ ಒಡೆವ ಗುಟ್ಟುಗಳನ್ನು, ಕಾಣದ ಕ್ಷೇತ್ರಗಳನ್ನು ಕ್ರಮಿಸುವ ಅಪಾಯದ ರೋಮಾಂಚವನ್ನು ನಿರ್ವಹಿಸಲು ತಾನು ಅಸಮರ್ಥನಾಗಿಬಿಟ್ಟಿದ್ದೇನೆ ಅನಿಸಿತು. ಅವರ ಅಂತರಂಗದಲ್ಲಿ ಉತ್ತರ ಸಿಗದ ಪ್ರಶ್ನೆಗಳು ತುಂಬಿದವು: ಇಷ್ಟು ದಿನ ಸುಮ್ಮನಿದ್ದ ಇವಳು ಹೊರಡುವ ಹಿಂದಿನ ದಿನ ಯಾಕೆ ಇದನ್ನೆಲ್ಲ ಹೇಳುತ್ತಿದ್ದಾಳೆ? ಆ ಹುಡುಗಿ ಕೈ ತಿರುಚಿದ್ದು ಇವಳಿಗೆ ತಿಳಿದಿದೆಯೇ? ಇದೆಯೆಂದು ಜಗತ್ತಿಗೆ ತೋರಿಸಿಕೊಂಡ ನನ್ನ ಸ್ವಾತಂತ್ರ್ಯವನ್ನೇ ಪರೀಕ್ಷೆಗೆ ಒಡ್ಡುತ್ತಿದ್ದಾಳೆಯೇ? ನನ್ನ ಒಳಸೆಲೆ ಒಣಗತೊಡಗಿರುವುದು ತಿಳಿದಿದೆಯೇ? ನನ್ನನ್ನು ಯಾವುದರತ್ತ ಪ್ರೇರೇಪಿಸಲು ಹೀಗೆಲ್ಲ ಹೇಳು ತ್ತಿದ್ದಾಳೆ? ನಾನು ಹೂಂ ಅಂದರೆ ಇಲ್ಲೇ ಉಳಿಯುತ್ತಾಳೆಯೇ? ಜೀವವನ್ನು ಪಲ್ಲಟ ಗೊಳಿಸುವ ಏನೋ, ಹಠಾತ್ತನೆ ಜರುಗ







ಕುಸನೂರ್

ಬಹುದೆಂದು ಹೇಳುತ್ತಿದ್ದಾಳೆಯೇ? ಈವತ್ತಿನ ಬೀಳ್ಕೊಡುಗೆ ಸಮಾರಂಭದಲ್ಲಿ ಆಡಿದ ಮಾತು ಗಳನ್ನು ತೀರಾ ಗಂಭೀರವಾಗಿ ಪರಿಗಣಿಸಿದಳೋ ಹೇಗೆ? ಅವಳಿಲ್ಲದೇ ಶಾಲೆ ಭಣಗುಡುವುದನ್ನು ರಸವತ್ತಾಗಿ ಹೇಳಿದ ಡ್ರಾಯಿಂಗ್ ಮಾಸ್ತರರ ಭಾಷಣವನ್ನು ನಂಬಿದಳೋ ಹೇಗೆ?

ಅವರ ಸಮೀಪ ನಿಂತು, ಅವರ ಭುಜದ ಮೇಲೆ ಕೈ ಇಟ್ಟ ಜೀಜಾಬಾಯಿಯ ಸಾಮೀಪ್ಯದಿಂದ, ಮತ್ತು ಅವರ ದೇಹದಿಂದ ಹೊಮ್ಮುವ ತೆಳುವಾದ ಪರಿಮಳದಿಂದ, ಸುಬ್ಬ ರಾಯಪ್ಪನವಗ ಕಳವಳ ಇನ್ನೂ ಹೆಚ್ಚಾಯಿತು. ಯಾವತ್ತೂ ಹೀಗಾದ್ದಿಲ್ಲ. ಆದರೆ ಈಗ ಇದನ್ನು ಹೇಗೆ ನಿಭಾಯಿಸಬೇಕೋ ಗೊತ್ತಾಗಲಿಲ್ಲ. ಏನು ಹೇಳಿದರೂ ಅವಳು ಕೇಳಿಸಿಕೊಳ್ಳುವ ಸ್ಥಿತಿಯಲ್ಲಿಲ್ಲ ಅನಿಸುತ್ತಿತ್ತು. ಸುಮ್ಮನೆ ಇವಳ ಜೊತೆ ಮಲಗಿ, ಬೆದೆಬಂದ ಇವಳನ್ನು ಸಮಾಧಾನಪಡಿಸಿ ಹೋಗುವಂಥ ಸನ್ನಿವೇಶ ಇದಲ್ಲ ಎಂದು ಗೊತ್ತಾಗಿತ್ತು. 'ನಾನು ಸಂಸಾರಸ್ಥ ಜೀಜಾ ಬಾಯಿ ಯವರೇ' ಎಂಬ ಮಾತಿಗೆ, ಅವಳು 'ನನಗೇನು ಗೊತ್ತಿಲ್ಲವೇ?' ಅಂದಳು. ಸುಬ್ಬರಾಯಪ್ಪನವರು ತಮ್ಮ ಮಾತಿನ ಅಸಂಗತತೆಯಿಂದ ಪೆಚ್ಚಾದರು. ಜೀಜಾಬಾಯಿಯ ಪ್ರತಿ ಮಾತಿನಲ್ಲೂ ಆತ್ಮ ವಿಶ್ವಾಸವಿತ್ತು. ಇನ್ನು ಮುಂದುವರಿಯಲಾಗದು ಎಂದನಿಸಿ, ಅವಳ ಪಾಡಿಗೆ ಬಿಟ್ಟರೆ ಬೆಳಿಗ್ಗೆ

ಯೊಳಗೆ ಸರಿಹೋಗುತ್ತಾಳೆ ಎಂದನಿಸಿ, 'ನಾನು ಹೋಗುತ್ತೇನೆ ಜೇಜಾಬಾಯಿಯವರೇ' ಎಂದು ಹೇಳಿದ್ದೇ ಸುಬ್ಬರಾಯಪ್ಪನವರು ಎದ್ದು ಹೊರಟೇ ಬಿಟ್ಟರು.



ಜೇಜಾಬಾಯಿ ಊರು ಬಿಟ್ಟು ಹೊರಟು ಹೋದ ನಂತರ ಸುಬ್ಬರಾಯಪ್ಪನವರ ಚಿತ್ತದಲ್ಲಿ ಉಳಿದದ್ದು ಚೆಲ್ಲಿಬಿದ್ದ ನಾನಾ ಚಿತ್ರಗಳು ಮಾತ್ರ. ಜೇಜಾಬಾಯಿ ಹೇಳಿದ ಅನೇಕ ಸಂಗತಿಗಳು ಆಗಾಗ ವಿವರ ವಿವರಗಳಲ್ಲಿ ಮರುಕಳಿಸುತ್ತಿದ್ದವು. ಇವೆಲ್ಲ ತಮ್ಮೊಳಗೆ ಅಂಟಿಬಿದ್ದ ರೀತಿಗೆ ಅವರಿಗೇ ಆಶ್ಚರ್ಯವಾಗುತ್ತಿತ್ತು. ಆ ರಾತ್ರಿ, ಜೇಜಾಬಾಯಿಯ ಮನೆಯಿಂದ ಹೊರಡುವ ಹೊತ್ತಿಗೆ, ಅವರೇ ಸ್ವತಃ ಬಾಗಿಲು ತೆರೆಯಲು ಹೋದಾಗ, ಅಗಳಿಗಾಗಿ ಇಡೀ ಬಾಗಿಲನ್ನು ಕೈಯಿಂದ ತಡವಿ, ತಡವಿ ಹುಡುಕಾಡಿದ್ದು ನೆನಪಾಗುತ್ತಿತ್ತು. ಕಟ್ಟಿಗೆಯ ನುಣುಪು, ಅದರ ಓರಕೋರೆಗಳು, ಅದರ ದೊರಗುತನ, ಅದರ ಬೆಣೆಗಳು, ತೂರಿ ಬಂದು ಅಂಗೈಯನ್ನು ತಲುಪಿದ ತಂಪುಗಾಳಿಯ ಮೂಲಕ ಕೈಗೆ ಗೋಚರಿಸಿದ ಬಾಗಿಲ ಸಂದಿ - ಅವರ ಬೆರಳ ತುದಿಗಳು ಇಡೀ ಬಾಗಿಲನ್ನು ಸ್ಪರ್ಶಿಸುತ್ತ, ಗ್ರಹಿಸುತ್ತ, ತವಕದಿಂದ ಹುಡುಕುತ್ತಿದ್ದವು. ಹಿಂದೆ ಜೇಜಾಬಾಯಿ ಬಂದು ನಿಂತಿದ್ದು ಗೊತ್ತಾಯಿತು. ಅವರ ಬೆರಳುಗಳು ಚುರುಕಾದವು. ಇನ್ನೂ ದೀಪ ಬಂದಿರಲಿಲ್ಲ. ಅಕಸ್ಮಾತ್ತಾಗಿ ಅಗಳಿ ಸಿಕ್ಕು, ಬಾಗಿಲು ತೆರೆದೊಡನೆ, ಹೊರಗಿನ ಜಗತ್ತು ಸಪ್ಪೆ ಅನಿಸಿತು. ಇನ್ನೂ ಕೂತಿರೋಣ ಅನಿಸಿತು. ಅವರ ನಿರ್ಧಾರ ಸ್ಪಷ್ಟವಾಗುವ ಮುಂಚೆಯೇ, ಜೇಜಾಬಾಯಿಯೇ ಏನೋ ಹೇಳಿದರು. ಏನದು ಎಂದು ಸುಬ್ಬರಾಯಪ್ಪನವರಿಗೆ ಸ್ಪಷ್ಟವಾಗಿ ಗೊತ್ತಾಗಲೇ ಇಲ್ಲ. ಏನಿದ್ದರೂ ಒಂದೇ ಎಂಬಂತೆ ಅವರು ಬಾಗಿಲು ದಾಟಿದ್ದರು.



ಒಳ್ಳೆಯ ಗಂಡ, ಒಳ್ಳೆಯ ಅಪ್ಪ, ಒಳ್ಳೆಯ ವ್ಯಕ್ತಿ ಆಗಹೊರಟೊಡನೆ ಸತ್ಯವನ್ನು ಕಣ್ಬಿಟ್ಟು ನೋಡುವ ಮತ್ತು ಅದನ್ನು ಧೈರ್ಯವಾಗಿ ಹೇಳುವ ಸಾಧ್ಯತೆ ಕಡಿಮೆಯಾಗುತ್ತ ಹೋಗುತ್ತದೆ. ಸಂಸಾರದ ಸೂತ್ರಧಾರಣೆಯನ್ನು ಮೀರುವುದಕ್ಕೆ, ನಿಜದ ಹತ್ತಿರ ಸರಿಯುವುದಕ್ಕೆ ಇಂಥ ಒಂದು ಹೊಂಗು ಬೇಕು.

ವಿವೇಕ ಶಾನಭಾಗ



ಒಂದಾಣೆ ಮಾಲೆ

ಎಂ.ಆರ್. ಭಟ್

# ಪ್ರೇಮೋನ್ಮತ್ತತೆ




ಬಹುದಿನಗಳ ನಂತರ ಬಂದ ತನ್ನ ಇನಿಯನಿಗೆ ಭೇಟಿ ಕೊಡಲು, ಸ್ತ್ರೀಯೊಬ್ಬಳು, ಪ್ರೇಮದಿಂದ ಉನ್ಮತ್ತಳಾಗಿ ಹೋಗುತಿದ್ದಳು. ಅವಳ ದಾರಿಯಲ್ಲಿ, ಪಾಳಯದಲ್ಲಿ, ಬಾದಶಹನು ರತ್ನಗಂಬಳಿ ಹಾಸಿ ನಮಾಜು ಮಾಡುತಿದ್ದನು. ಪ್ರೇಮೋನ್ಮತ್ತಳಾದ ಆ ಸ್ತ್ರೀಗೆ, ದಾರಿಯ-ತಾನು ಎಲ್ಲಿ ನಡೆಯುತ್ತಿರುವೆನೆಂಬುದರ-ಸ್ಮೃತಿಯೇ ಇಲ್ಲದಂತಾಗಿತ್ತು. ಹೋಗುತ್ತ, ಅವಳು ರತ್ನಗಂಬಳಿಯನ್ನು ತುಳಿದೇ ಮುಂದುವರಿದಳು.

ಬಾದಶಹನು ಇದನ್ನು ನೋಡಿ, ಕೋಪಗೊಂಡನು. ಆದರೆ ನಮಾಜು ಹೇಳುತಿದ್ದುದರಿಂದ, ಆ ವೇಳೆಯಲ್ಲಿ ಏನನ್ನೂ ಹೇಳಲಿಲ್ಲ.

ಸ್ವಲ್ಪ ಸಮಯದ ನಂತರ, ಅವಳು ತನ್ನ ಪ್ರಿಯತಮನೊಡನೆ ಹಿಂದಿರುಗಿದಳು. ಬಾದಶಹನು ಆ ಸ್ತ್ರೀಯನ್ನು ತನ್ನ ಬಳಿಗೆ ಕರೆದು ಹೀಗಂದನು: ''ಎಲೇ ಪಾಪಿನಿ! ನಾನು ನಮಾಜು ಹೇಳುವುದನ್ನು ಲಕ್ಷಿಸದೆ, ರತ್ನಗಂಬಳಿಯ ಮೇಲೆ ಕಾಲುಗಳನ್ನಿಟ್ಟು ನೀನು ಹೋದೆ!''

ಪ್ರೇಮಹೃದಯಿಯಾದ ಆ ಸ್ತ್ರೀಯು, ನಿರ್ಭಯತೆಯಿಂದ ಹೀಗಂದಳು: ''ರಾಜಾಧಿರಾಜನೇ! ಒಬ್ಬ ಸಾಧಾರಣ ಮನುಷ್ಯನ ಪ್ರೇಮದಿಂದ ಉನ್ಮತ್ತಳಾದುದರಿಂದ ನನಗೆ ನಿನ್ನ ರತ್ನಗಂಬಳಿಯ ಸ್ಮೃತಿಯು ಬರಲಿಲ್ಲ. ಆದರೆ, ಭಗವಾನನನ್ನು ಧ್ಯಾನಿಸುತ್ತಿರುವ ನೀನು ನನ್ನನ್ನು ಹೇಗೆ ನೋಡಿದೆ? ನಿನ್ನ ಮನಸ್ಸಿನಲ್ಲಿ ನೀನು ಭಗವಂತನನ್ನು ನೋಡದೆ, ಕೇವಲ ಬಾಹ್ಯದಿಂದ ನಮಾಜು ಹೇಳುತ್ತಿದ್ದಿಯೆಂದು ನಾನು ತಿಳಿಯಬಹುದೇ? ನಿನ್ನ ಮನಸ್ಸಿನಲ್ಲಿ ಭಗವಾನನು ಇರಲಿಲ್ಲವೆಂಬುದು ಸ್ಪಷ್ಟವೇ ಸರಿ!''

ಈ ಮಾತನ್ನು ಕೇಳಿ, ಬಾದಶಹನು ತನ್ನ ತಪ್ಪನ್ನು ಅರಿತನು; ಮತ್ತು ಆ ಸ್ತ್ರೀಗೆ ಧನ್ಯವಾದವನ್ನರ್ಪಿಸಿದನು.



# ಒಂದು ಹಾಡಿಗೆ ಹತ್ತು ಪೈಸೆ

ಪ್ರೀತಿಯ ಗೆಳತಿಯರೆ,

ಅಲ್ಲಿಗೆ ಕೆಲವು ಸಾರಿ ನೀವು ಇಬ್ಬರು ಬರ್‍ತಾ ಇದ್ರಿ. ಒಮ್ಮೊಮ್ಮೆ ಮೂರು ಜನಾ ಇರ್‍ತಾ ಇದ್ರಿ. ಅಲ್ಲಿಗೆ ಅಂದ್ರೆ, ಮೈಕ್‌ಚಂದ್ರೂ ಸೋಡಾ ಅಂಗ್ಡಿಗೆ. ಚಂದ್ರೂ ಆಗ, ಮೈಸೂರಲ್ಲಿ, ಮದ್ವೆ ಮನೆಗಳಿಗೆ, ರಾಮೋತ್ಸವಕ್ಕೆ, ಗಣೇಶನ ಹಬ್ಬಕ್ಕೆ ಮೈಕ್ ವ್ಯವಸ್ಥೆ ಮಾಡ್ತಾ ಇದ್ದ. ಚಂದ್ರೂ ಸೌಂಡ್ ಸಿಸ್ಟಮ್ಸ್. ಶಿವರಾಂ ಪೇಟೇಲಿತ್ತು. ನೆನಪಾಯ್ತಾ ನಿಮಗೆ? ಕಳೆದ ಶತಮಾನದ ಅರವತ್ತಾರು-ಅರವತ್ತೇಳನೇ ಇಸ್ವಿ ಮಾತು! ಒಂಥರಾ ಹಿಸ್ಟರಿ ಕ್ಲಾಸಲ್ಲಿ ಮಾತಾಡ್ತಾರಲ್ಲ... ಹಾಗನ್ನಿಸತ್ತೆ ಅಲ್ಲವಾ? ಹಿಸ್ಟರಿ ಅನ್ನೋದೇ ಕರೆಕ್ಟು. ಆಗಿನ ಮೈಸೂರು, ನನ್ನ ಮೈಸೂರು, ಸಯ್ಯಾಜಿರಾವ್ ರೋಡು, ಇಂದ್ರಭವನ್, ಇಂದ್ರಕೆಫೆ, ಅಲ್ಲೊಂದಿಲ್ಲೊಂದು ಸಿಟಿ ಬಸ್ಸು, ಷಾಪಸಂದ್ ಜಟಕಾಗಾಡಿಗಳು, ಅರಮನೆ, ಜಂಬೂಸವಾರಿ, ಮೆಡಿಕಲ್ ಕಾಲೇಜು, ಮಹಾರಾಣಿ ಕಾಲೇಜುಗಳ ಹುಡುಗೀರು, ಜೀವನರಾಯನ ಕಟ್ಟೆ ಎಗ್ಸಿಬಿಷನ್ನು... ಒಂದೇ ಎರಡೇ... ಮೆಡಿಕಲ್‌ನಲ್ಲಿ ಸೀಟು ಸಿಗದೇ ಬೇಸತ್ತು, ಯುವರಾಜಾ ಕಾಲೇಜ್‌ಗೇ ಹೋಗ್ತಿದ್ದೆ, ಮನೆಮಂದಿ ಹತ್ರ ಉಗಿಸಿಕೊಂಡು... ಅರ್ಥವೇ ಆಗ್ತಿದ್ದ ಇಂಗ್ಲಿಷ್ ಪಾಠಗಳನ್ನೆಲ್ಲ ಕಲೀಬೇಕಾಗಿದ್ದು... ಕಾಲೇಜಿಗೆ ಚಕ್ಕರ್ ಹಾಕಿದ್ದೇ ಹಾಕಿದ್ದು... ಆಗ ಪಾಠಗಳು ನಡೀತಾ ಇದ್ದಿದ್ದೇ ಒಲಂಪಿಯಾ, ಒಪೇರಾ, ಶ್ರೀ ಟಾಕೀಸುಗಳಲ್ಲಿ. ಈಗ ಇಂಗ್ಲಿಷ್ ಲೆಕ್ಚರರ್ ಆಗಿರೋದು ನೆನಪಿಸಿಕೊಂಡ್ರೆ, ನಗು ಬರತ್ತೆ. ಆಗಿನ ಸಾಹಿರ್, ಶೈಲೇಂದ್ರ, ಹಸರತ್, ಕೈಫಿ ಅವರುಗಳೆಲ್ಲ ನಮಗಾಗೇ ಹಾಡುಗಳನ್ನ ಬರೀತಾ ಇದ್ರು ಅನ್ನಿಸತ್ತೆ! ರಫಿ, ಮುಖೇಶ್, ಮನ್ನಾಡೇ, ತಲತ್‌ಗಳೆಲ್ಲ ನಮ್ಮವೇ ದನಿಗಳು! ಕಾಲೇಜಿಗೆ ಹೋಗ್ದೇ ಇದ್ರೂ ಇಂಟರ್‌ಕೊಲಿಜಿಯಟ್ ಕಾಂಪಿಟೇಷನ್ನುಗಳಿಗೆ ಯಾವಾಗ್ಲೂ ಹಾಜರಾಗ್ತಾ ಇದ್ವಿ. ಆಗಿನ್ನೂ ರಾಜೇಶ್‌ಖನ್ನಾ ಆಗ್ಲಿ, ಅಮಿತಾಭ್ ಆಗ್ಲಿ ಬಂದಿರಲಿಲ್ಲ. ಕ್ಯಾಸೆಟ್ಟುಗಳೂ ಇರ್‍ಲಿಲ್ಲ. 'ಬಿನಾಕಾ ಗೀತ್‌ಮಾಲ' ಕೇಳಬೇಕಾಗ್ತಾ ಇತ್ತು. ಇಲ್ಲ, ಪದೇ ಪದೇ, ನಮ್ಮ ಆರಾಧ್ಯ ದೇವತೆಗಳಾದ ರಾಜಕಪೂರ್, ದಿಲೀಪ್, ದೇವ್, ಮಧುಬಾಲ, ನೂತನ್, ನರ್ಗೀಸ್‌ಗಳ ಸಲುವಾಗಿ ಸಿನೆಮಾ ನೋಡಬೇಕಾಗ್ತಾ ಇತ್ತು! 'ಅಂಚಲ್ ಮೆ ಕ್ಯಾಜೇ? ಮಾಂಗಕೇ ಸಾಥ ತುಮ್ಹಾರಾ, ಆಜಾ ಸನಮ್ ಮಧುರ ಚಾಂದ್ನಿ ಮೇ ಹಂ'








ಇತ್ಯಾದಿಗಳ ಕಾಲ ಅದು! ದುಡ್ಡು ಜೇಬಲ್ಲಿದ್ದಾಗ ಪ್ರಭಾ ಟಾಕೀಸ್ ಕೆಳಗೆ 'ಜ್ಯೂಕ್ ಬಾಕ್ಸ್' ಹೋಟೇಲಿಗೆ ಹೋಗ್ತಾ ಇದ್ವಿ. 25 ಪೈಸಾ ಹಾಕೋದು. ಬೇಕಾದ ರಿಕಾರ್ಡು ಕೇಳೋದು! ಅರ್ಧಕಾಫಿ! ಬ್ರಿಸ್ಟಲ್ ಸಿಗರೇಟು! ಜೇಬು ಖಾಲಿ ಆದಾಗ ಚಂದ್ರೂ ಸೋಡಾ ಅಂಗ್ಡಿ!

ಅಲ್ಲಿಗೇ ನೀವು ಬರ್ತಾ ಇದ್ದಿದ್ದು. ಪುಟ್ಟದೊಂದು ಸಾಧಾರಣ ಅಂಗ್ಡಿ ಅದು. ಹಳೇ ಟೇಬಲ್ಲು. ಆ ಕಡೇ ಈ ಕಡೇ ಎರಡು ಬೆಂಚುಗಳು. ಬೇಕಾದ್ರೆ ಸೋಡಾ ಕುಡಿ. ಇಲ್ಲದಿದ್ರೆ ಹಾಡು ಕೇಳು. ಚಂದ್ರೂ ಹತ್ರ ಹಾಡುಗಳ ಡೈರೆಕ್ಟರಿನೇ ಇತ್ತು. ಬರೀ L P ಅಥವಾ EPಗಳ ಕಾಲ. ಒಂದು ಹಾಡಿಗೆ ಹತ್ತು ಪೈಸಾ. ಹಾಡಿನಂಗ್ಡಿ! ಅಲ್ಲಿಗೆ ಹುಡುಗಿಯರು ಬರ್ತಾ ಇದ್ದಿದ್ದು ಕಡಿಮೇನೇ. ಆದರೂ ನೀವುಗಳು ಆವಾಗಾವಾಗ ಬರ್ತಾ ಇದ್ರಿ. ತುಂಬ ಡೀಸೆಂಟಾಗಿರ್ತಾ ಇದ್ರಿ. ಕೈಲಿ ಏಪ್ರನ್ನು, ಸ್ಟೆಥ್. ನಿಮ್ಮನ್ನ ನೋಡ್ದಾಗಲೆಲ್ಲ ಒಂಥರಾ ಥ್ರಿಲ್ ಆಗ್ತಾ ಇತ್ತು. ನಿಮ್ಮನ್ನ ತುಂಬ ಇಷ್ಟಪಡ್ತಾ ಇದ್ವಿ. ನಾವೂ ಸಹ 3-4 ಗೆಳೆಯರಿದ್ವಿ. ಆ ಬೆಂಚಿನ ಮೇಲೇ ನೀವು, ಈ ಬೆಂಚಿನ ಮೇಲೆ ನಾವು. ಹಾಡಿನ ಮೇಲೆ ಹಾಡು. ಹುಡುಕೀ... ಹುಡುಕೀ ಹಾಡುಗಳನ್ನ select ಮಾಡಿ ಹಾಕೋದ್ರಲ್ಲಿ ನಮ್ಮ ನಡುವೆ ಒಂಥರಾ ಕಾಂಪಿಟೇಷನ್ ಆಗ್ತಾ ಇತ್ತು.

ನಾವು ಹಾಕಿದ ಹಾಡಿಗೆ-ಹಾಗಂತ ನೇರವಾಗಿ ಹೇಳ್ದೇ ಹೋದ್ರೂ- ನೀವು 'ಉತ್ತರ'ವಾಗಿ ಹಾಕ್ತಾ ಇದ್ದ ಹಾಡುಗಳು ನಿಮ್ಮ ಭಾವನೆಗಳನ್ನ ತಿಳಿಸ್ತಾ ಇದ್ವು. ಮೊದಮೊದಲು, ಚಂದ್ರೂ ಅಂಗ್ಡಿಗೆ ಹಾಡು ಕೇಳಕ್ಕೆ ಹೋಗ್ತಾ ಇದ್ದ ನಾವು, ಆಮೇಲೆ, ನೀವುಗಳು ಬರಬಹುದು ಅನ್ನೋ ಆಸೇಲಿ ಹೋಗ್ತಾ ಇದ್ವಿ. ಆಗಿನ ವಯಸ್ಸಿಗೆ ತಕ್ಕಂತೆ ತಲೆ ತುಂಬ ಏನೇನೋ ಕನಸುಗಳು! ಕಣ್ಣಲ್ಲಿ ಬೆಳಕು; ತುಟಿಯಲ್ಲಿ ನಗೆ. ತಮಾಷೆ ಅಂದ್ರೆ, ನಾವೂ-ನೀವೂ ಪರಿಚಯಾನೇ ಮಾಡಿಕೊಳ್ಳಲಿಲ್ಲ! ಇವತ್ತೂ ಚೆನ್ನಾಗಿ ನೆನಪಿದೆ. ನಿಮ್ಮ ಪೈಕಿ ಒಬ್ಬರ ಪಾದಗಳು, ತುಂಬ ಪಿಂಕಾಗಿ, ಹೂವುಗಳ ಥರಾ ಇತ್ತು. ಒಂದಿನಾ ನೀವುಗಳು, 'ಯೇ ತೂ ಕಹೋ... ಕೌನ್ ಹೊ ತುಮ್... ಕೌನ್ ಹೋ ತುಮ್' ಹಾಡು ಹಾಕಿದ್ರಿ. ಉತ್ತರವಾಗಿ ನಾವು, 'ಆ... ಮೊಹಬ್ಬತ್ ಕೀ ಬಸ್ತಿ ಬನಾಯೇಂಗೇ ಹಮ್' ಹಾಡನ್ನ ಹಾಕಿದ್ವಿ... ನೆನಪಾಯ್ತಾ?... ಈಗ ನೀವುಗಳು ಎಲ್ಲಿದ್ದೀರೋ ಗೊತ್ತಿಲ್ಲ. ಈ ಕಾಗದದ ದೋಣಿ ನಿಮ್ಮ ಕಿನಾರೆಗೆ ಬಂದ್ರೆ ಮತ್ತೆ ಯಾವ ಹಾಡು ಗುನುಗುತ್ತೀರಿ?

ವಿಜಯ ವಾಮನ

ಸಾಗರ







ಛಾಯಾಚಿತ್ರ: ಶ್ರೀಧರಮೂರ್ತಿ

# ಖಾಯಂ ವಿಳಾಸ ಬದಲಾಗುವ ಮುಂಚೆ

ಸುಮ, ಪ್ರೀತಿಯ ಸುಮ,

ಯಾಕೋ ನಿನ್ನ ಹ್ಯಾಗೆ ಕರೆದರೂ ನನ್ನ ದನಿ ನಿನ್ನವರೆಗೆ ಮುಟ್ಟೋದು ಅನುಮಾನ... ಅಂತೆಲ್ಲ ಅನ್ನಿಸ್ತಿದೆ ಕಣೆ. ನಿನ್ನ ನೋಡ್ದೇ ಎರಡು ವರ್ಷ ಮಿಕ್ಕಿದವು. ಈಗಲೂ ನಾವು ಪತ್ರ ಬರೆದುಕೊಳ್ತಾ ಇದ್ದೇವೆ. ತಿಂಗಳು-ಎರಡು ಮೂರು ತಿಂಗಳಿಗೊಂದರಂತೆ (ನನ್ನಿಂದ್ಲೇ ತಡ ದೇವರಾಣೆ). ಇದೇ ನೆಲದ ಇನ್ಯಾವುದೋ ಮಗ್ಗುಲಲ್ಲಿ ನಾವು ಜೀವಂತ ಇದ್ದು, ಒಬ್ಬರನ್ನೊಬ್ರು ನೆನಪಿಸಿಕೊಳ್ತ ಇದ್ದೇವೆ ಅಂತ ಪರಸ್ಪರ ನಂಬಿಸಿಕೊಳ್ಳುತ್ತ ಇರೋದಕ್ಕೆ ಸಾಕ್ಷೀ ಪತ್ರಗಳಂತೆ. ಅಲ್ಲಿಂದ ನೀನು ಬರೆದದ್ದೇ ಖರೆ; ಇಲ್ಲಿಂದ ನಾನು ವದರಿದ್ದೇ ಬದ್ಧ. ಒಂದೊಂದ್ಸಲ ತೀರ ಜಿಗುಪ್ಸೆ ಹುಟ್ಟುತ್ತದೆ ನಂಗೆ. ನಮ್ಮ ಬದುಕಿನ ಗಿಲೀಟಿನ ಪರದೆಗಳ ಬಗ್ಗೆ. ನಿಜ ಹೇಳು, ನಾವಿಬ್ಬರು (ಗೆಳತಿಯರಾಗದೇ) ಗೆಳೆಯರಾಗಿರುತ್ತಿದ್ದರೆ, ಇಷ್ಟೊತ್ತಿಗೆ ಕನಿಷ್ಠ ಒಂದೆರಡು ಬಾರಿಯಾದ್ರೂ ಎದುರು ಬದುರಾಗಿ ಸಿಕ್ಕಿ, 'ಓಹೋ' ಅಂತ ಕೂಗಿಕೊಂಡು, ಕೆಲಕ್ಷಣಗಳ 'ಹಂಗಾಮ'ವನ್ನ ಹಂಚಿಕೊಳ್ತಾ ಇದ್ದವೇನೋ. ನಮ್ಗೆ ಅಂಥ ತಲೆಹೋಗುವಂಥ ಕಾರುಬಾರುಗಳು ಏನಿವೆ ಈಗ? ಅವೇ ಜಿಡ್ಡುಜಿಡ್ಡಿನ ಕಾಲೇಜು ದಿನಗಳು, ಹತ್ತುವುದಿಲ್ಲ ಹರಿಯೋದಿಲ್ಲ. ಪರಮಾವಧಿ ಅಂದ್ರೆ ಎಷ್ಟು ಮಹಾ ದೂರದಲ್ಲಿದ್ದೇವೆ ನಾವು? ನಾನು ಉತ್ತರ ಕನ್ನಡದಲ್ಲಿ, ನೀನು ತಿಪಟೂರಿನಲ್ಲಿ.

ಸುಮ, ನಮ್ಮ ನಡುವೆ ಸೆಕೆಂಡ್ ಪಿ.ಯು.ಸಿ. ಮುಗಿದ ಹೊತ್ತಿಗೆ ಉದ್ಭವವಾದ ಎರಡು ವರ್ಷಗಳ ಖಾಲೀ ಕಂದರ ನನ್ನನ್ನ ಆಗೀಗ ತೀರ ವಿಹ್ವಲಗೊಳಿಸಿಬಿಡುತ್ತದೆ. 'ಸುಮಾ ನೋಡ್ದೆ ರಾಶೀ ಬೇಜಾರ್ಬಂಜು ಎಂಗೆ. ಆನು ತಿಪಟೂರಿಗೆ ಹೋಪವ್ನೆಯಾ' ಅಂತ ಅಪ್ಪನತ್ರ ಹಟಮಾಡ್ಲಿಕ್ಕೆ, ಅತ್ತು ಮಾತು ಕೇಳಿಸಲಿಕ್ಕೆ ಯಾಕೆ ಆಗ್ತಾ ಇಲ್ಲ ನಂಗೆ?

ನಿನ್ನ, ಪ್ರೇಮಾ ನಡುವಿನ ನೂರಾರು ಜಗಳಗಳಲ್ಲಿ ನಾನು 'ಜಡ್ಜ್' ಪದವೀನ ಅವಿರೋಧವಾಗಿ ಪಡಕೊಂಡಿದ್ದು, ದಿನಾ ಬೆಳಿಗ್ಗೆ ನಾನು ಕ್ಲಾಸಿಗೆ ಬರೋ ಹೊತ್ಗೆ ಮುಖ ಊದಿಸಿಕೊಂಡು ಕೂತಿರುತ್ತಿದ್ದ ನಿನ್ನ ಗಮನಿಸದೇ, ಎದುರಿಗೇ ಕಂಡ ಪ್ರೇಮಾ ಪಕ್ಕ ನಾನು ಕೂತಿದ್ದಕ್ಕೆ ಇನ್ನೊಂದು ಘೋರ ಕದನವನ್ನು ಹುಟ್ಟು ಹಾಕುತ್ತಿದ್ದುದು. ಎಲ್ಲ ತಣ್ಣಗಾಗುವ ವೇಳೆ ನಂಗೆ, ಪ್ರೇಮಂಗೆ ನೀ ಬರೆಯುತ್ತಿದ್ದ 2-3 ಪೇಜುಗಳ ಪ್ರೀತಿಯ ಪತ್ರಗಳು. ಅದರ ತುಂಬೆಲ್ಲ ಎಷ್ಟೊಂದು ಹಳಹಳಿಕೆ. 'ರಶ್ಮಿ, ನಾನು ನಿನ್ನಷ್ಟು ಚೆಂದ ಇಲ್ಲ,





ಬುದ್ಧಿವಂತಳಲ್ಲ. ನಿಮ್ಮಂತೆ aim, ambitionಗಳನ್ನು ಇಟ್ಕೊಂಡವಳಲ್ಲ. ನಿನ್ನ friendshipಗೆ ಯೋಗ್ಯಳೂ ಅಲ್ಲ, ಆದ್ರೂ ನನ್ನ ಯಾಕಿಷ್ಟು ಹಚ್ಚಿಕೊಳ್ತೀಯ? ನೀ ಹಾಗೆ, ಹೀಗೆ... ಇಂಥ ಹೊಗಳು ಮುತ್ತುಗಳು ಈಗ ಒಂದೊಂದಾಗಿ ನೆನಪಲ್ಲಿ ಉದುರುತ್ತಿವೆ.

ಆದ್ರೆ ಒಂದು ಮಾತು ಸುಮ. ನಿಂಗೆ ಕಬ್ಬಗಾರಿನ ನನ್ನ ಮನೆಗೆ ಬರುವ ಆಸೆ ಎಷ್ಟೆಲ್ಲ ಇದ್ದದ್ದು ನಂಗೆ ಗೊತ್ತಿದ್ದೂ, 'ಹ್ಯಾಗೂ ಇನ್ನೂ ಮೂರು ವರ್ಷ ಇಲ್ಲೇ ಇರ್ತೀಯಲ್ಲ, ಅವಸರ ಯಾಕೆ ಅಂತ ನಾನೆ ನಿನ್ನನ್ನ, ಕರೆದೊಯ್ಯುವುದನ್ನು ಮುಂದೂಡಲಿಕ್ಕೆ ಕಾರಣ ನನ್ನೊಳಗಿನ-ನಿನ್ನೆದುರು ಬಚ್ಚಿಟ್ಟ-ಕೀಳರಿಮೆ. ತೀರ ನಾಜೂಕಿನ, ಪೇಟೆಯ ಹುಡುಗಿಯಾಗಿದ್ದ ನಿನ್ನ, ಬೆಟ್ಟಗುಡ್ಡ, ಮಣ್ಣು, ಕಡಿ ರಸ್ತೆ, ಹೊಳೆಹಳ್ಳಗಳ ದಾಟಿಸಿ, ಅರೆಗಪ್ಪಿನ ತಗ್ಗಿದ ನನ್ನ ಹಳ್ಳೀ ಮನೆಗೆ ಕರೆದೊಯ್ಯಲು ಎಂಥದೋ ಮುಜುಗರ. ನಿನ್ನೆದುರು ತೀರ ಆತ್ಮವಿಶ್ವಾಸದ, ನಿನ್ನ ಹತ್ತಾರು ಗೊಂದಲಗಳಿಗೆ ಸಾಂತ್ವನ ಹೇಳಬಲ್ಲ ಗಟ್ಟೀ ಹುಡುಗಿಯಾಗಿದ್ದ ನಂಗೆ, ನನ್ನೊಳಗಣ ಈ ಕೀಳರಿಮೆಯ ಕೊಳವನ್ನು ಇಡೀ ಎರಡು ವರ್ಷಗಳಲ್ಲಿ ದಾಟಲಾಗ್ಲೇ ಇಲ್ಲ.

ಇಲ್ಲ, ಇನ್ನೂ ನಾನು ಇಷ್ಟು ದಿನದಂತೆ ಜಬ್ಬಿಯಾಗಿ ಚಿಂತಿಸುತ್ತ ಕುಳಿತರೆ, ನಮ್ಮ ದಿನಗಳೇ ಮುಗಿದು ಹೋಗ್ತವೆ. ನಂನಮ್ಮ ಖಾಯಂ ವಿಳಾಸಗಳು ಬದಲಾಗುವ ಮುಂಚೆ, ಒಂದ್ಸಲ, ಪ್ರೀತಿಯಿಂದ, ಸೊಕ್ಕಿನಿಂದ, ಸಂಭ್ರಮದಿಂದ ನನ್ನೂರ ನೆಲದಲ್ಲಿ ನಿನ್ನ ಓಡಾಡಿಸಿ, ನನ್ನ ಮನೆಯ ನೆರಳಿಗೆ ನಿನ್ನ ಕರೆದೊಯ್ತೇನೆ. please ಕಣೆ ಸುಮ, 'ರಶ್ಮೀ ಮನೇಲಿ ಪೂರ್ತಿ ನಾಲ್ಕು ದಿನ ಇದ್ದೆ' ಅಂತ ಪ್ರೇಮನ್ಹತ್ರ ಜಂಬ ಕೊಚ್ಚಿಕೊಳ್ಳುವಿಯಂತೆ. ಒಂದ್ಸಲ ಬಾರೇ... ಶಿರಸಿ ಬಸ್‌ಸ್ಟಾಂಡಿನಲ್ಲಿ ಎಷ್ಟೊತ್ತಿಗೆ ಅಂದ್ರೆ ಅಷ್ಟೊತ್ತಿಗೆ ಕಾಯ್ತೇನೆ, ಬಂದುಬಿಡೇ...

ರಶ್ಮಿ. ಮ. ಹೆಗಡೆ ಕಬ್ಬಗಾರ

ಸಿದ್ದಾಪುರ



# ಸಭ್ಯನ ಹಣೆಬರಹ

ಮಲ್ಲಿಗೆ,

ನಿನ್ನ ಖರೆ ಹೆಸರು ನಂಗೆ ಗೊತ್ತಿಲ್ಲ. ಅದರ ಅವಶ್ಯಕತೆಯೂ ನನಗೆ ಕಾಣಲಿಲ್ಲ. ನಾನು ನಿನ್ನನ್ನು ಮಲ್ಲಿಗೆ ಎಂದು ಕರೆಯುವುದಕ್ಕೆ ಕಾರಣ ಇಷ್ಟೇ, ನೀನು ಮಲ್ಲಿಗೆಯಂಥವಳು.

ಮಜ ನೋಡು. ನಿನಗೆ ಇಂಥ ಒಂದು ಪತ್ರ ಬರೀಬೇಕೆಂದು ಬಹಳ ಸಲ ಅನಿಸಿದ್ದುಂಟು. ಅದು ಎಂದೂ ಸಾಧ್ಯವಾಗಲಿಲ್ಲ. ಕೊನೆಗೆ ನೀನು ನನ್ನ ಕಣ್ಣಾಚೆಯ ದೂರ ಹೋಗುವ ತನಕವೂ.

ನಾವಿಬ್ಬರೂ ಕುಮಟೆಯಿಂದ ಗೋಕರ್ಣಕ್ಕೆ ಸಹಪ್ರಯಾಣಿಕರು. ನೀನು ಗೋಕರ್ಣದ ಬ್ಯಾಂಕೊಂದರಲ್ಲಿ ಹೊಸದಾಗಿ ಕೆಲಸಕ್ಕೆ ಸೇರಿಕೊಂಡಿದ್ದೆ. ನಾನು ಸಾಣಿಕಟ್ಟೆಯಲ್ಲಿ ಇಳಿಯುವವ.

ಎಂದಿನಂತೆ ಈ ಗೋಕರ್ಣ ಬಸ್ಸು ಅಂದೂ ಸಮ ಟೈಮಿಗೆ ಬಂದಿರಲಿಲ್ಲ. ಟೆಂಪೊದವರು

'ಗೋಕರ್ಣ, ಗೋಕರ್ಣ' ಎಂದು ಅರ್ಧ ತಾಸಿಂದ ಕೂಗುತ್ತಿದ್ದರೂ, ಬಿಡುವುದು ಇನ್ನೂ ಅರ್ಧ ತಾಸಿನ ಮೇಲೇ ಎಂಬುವುದು ಅನುಭವದಿಂದ ಗೊತ್ತಿದ್ದುದರಿಂದ ಬಸ್ ಸ್ಟಾಂಡ್‌ನಲ್ಲೇ ನಿಂತಿದ್ದೆ. ಅಷ್ಟೊತ್ತಿಗೆ, ಸ್ಟಾಂಡ್‌ನ ಆ ಬದಿ ಪ್ರವೇಶದಿಂದ, ದಟ್ಟ ನೀಲಿ ಬಣ್ಣದ, ಮೈಗೆ ಅಂಟಿಕೊಂಡಂತಿರುವ ಡ್ರೆಸ್ ಹಾಕಿ, ನಾಜೂಕು ದೇಹದ ಬಿಳಿಯ ಹುಡುಗಿಯೊಬ್ಬಳು ಕಣ್ಣಿಗೆ ಬಿದ್ದಳು. ಕಣ್ಣು ತೆಗೆಯೋಕೆ ಆಗಲಿಲ್ಲ. ಹೆಗಲಿಗೊಂದು ಬ್ಯಾಗ್ ಇಳಿಬಿಟ್ಟು ಸ್ಕೂಲು ಹುಡುಗಿಯಂತೆ ಕಾಣುತ್ತಿದ್ದ ಅವಳು, ಮೊಲದ ಮರಿಯಂತೆ ಜನರ ಮಧ್ಯೆ ದಾರಿ ಮಾಡಿಕೊಳ್ಳುತ್ತ, ಹತ್ತಿರ ಹತ್ತಿರ ಬಂದು, ನನ್ನ ಎದುರೇ ನಿಂತಳು! ಯಾರು ಮಾರಾಯ ಇವಳು? ಎಲ್ಲಿಗೆ ಹೋಗುವವಳೋ?

ನೀನು ಗೋಕರ್ಣಕ್ಕೆ ಹೊರಟಿದ್ದೆ. ನಮ್ಮ ಟೆಂಪೋಕ್ಕೆ ಹತ್ತಿದೆ. ನನ್ನ ಎದುರಿನ ಸೀಟಲ್ಲೇ ಬಂದು ಕೂತೆ! ನೀನು ನಿಜಕ್ಕೂ ಚಂದದ ಹುಡುಗಿ. ನಿನ್ನ ಕಣ್ಣುಗಳು ಪುಟ್ಟವಾದರೂ ಆಕರ್ಷಕವಾಗಿವೆ. ಕೆನ್ನೆಗಳು ಮೃದುವಾಗಿವೆ. ಒಮ್ಮೆ 'ಹೀಗೆ' ತಟ್ಟೋಣ ಎನಿಸುವಷ್ಟು. ಅಘನಾಶಿನಿ ನದಿಗುಂಟದ ಗಾಳಿ, ನಿನ್ನ ಮುಂಗುರುಳ ಸೇರಿ, ಕೇಶವಿನ್ಯಾಸದ ಸಾಧ್ಯತೆಗಳ ಅಭ್ಯಾಸ ನಡೆಸಿತ್ತು.

ನನ್ನ ನಿತ್ಯದ  ಪ್ರಯಾಣಕ್ಕೆ ಹುರುಪು ಅಂಟಿಕೊಂಡಿತು. ನಸುಬೆಳಕಲ್ಲೆ ಏಳುತ್ತಿದ್ದೆ. ಬಟ್ಟೆಗಳು ಇಸ್ತ್ರಿ ಮಾಡಲ್ಪಟ್ಟವು. ದಿನಾ ಶೇವ್ ಮಾಡುವುದು ಸಂಪ್ರದಾಯವಾಯಿತು. ವರ್ಷಗಟ್ಟಲೆ ಅಂಟಿಕೊಂಡ ಧೂಳನ್ನು ಕಳಚಿಕೊಂಡು ಶೂಗಳು ಮಿಂಚಲಾರಂಭಿಸಿದವು. ನನ್ನಲ್ಲಿಯ ಈ ಬದಲಾವಣೆಯಿಂದ ನನ್ನ ಹೆಂಡತಿ ಖುಷಿಯಾದಳು.

ದೇವಕಿ ಕೃಷ್ಣ ದೇವಸ್ಥಾನದ ಎದುರು, ನೀನು, ಕೋಮಲ ಬೆರಳುಗಳಿಂದ ಮೊದಲು ಕೆನ್ನೆಗಳ ತಟ್ಟಿ, ಆಮೇಲೆ ಗಲ್ಲ ಮುಟ್ಟಿ, ದೇವರಿಗೆ ನಮಸ್ಕರಿಸುವ ರೀತಿ ನೋಡುವುದೇ ಚೆಂದ. ನೀನು ಇದೆಲ್ಲದರ ಪರಿವೆ ಇಲ್ಲದವಳಂತೆ ಕಿಡಕಿಯಾಚೆ ಎಲ್ಲೋ ದೃಷ್ಟಿ ನೆಟ್ಟಿರುವೆ. ನಿನ್ನ ನಿರ್ಲಕ್ಷ್ಯ ಸಾಯುವಷ್ಟು ಹಿಂಸೆ ನೀಡುತ್ತಿತ್ತು. 'ನೀನು ಚಂದದ ಹುಡುಗಿ' ಎಂದು ಹೇಳಲು ಮನಸು ಬಯಸುತ್ತಿತ್ತು. ನಾಲ್ಕು ಜನರೆದುರು ಹಾಗನ್ನಲು ಹಿಂಜರಿಕೆ. ಎಲ್ಲಾದರೂ ಏಕಾಂತದಲ್ಲಿ ಕಾದು ಭೆಟ್ಟಿಯಾದರೆ ಹೇಗೆ? ಛೆಛೆ... ಹುಡುಗಾಟ ಕಳಚಿಕೊಂಡು ಸಭ್ಯರಾದವರ ಹಣೆಬರಹ ಹೇಗೆ ವಿವರಿಸಲಿ?

ಹೀಗಿರಲು ನೀನು ಇದ್ದಕ್ಕಿದ್ದಂತೆ ಕಣ್ಮರೆಯಾದೆ. ಒಂದಿನವಾಯ್ತು. ಎರಡು ದಿನವಾಯ್ತು. ಬಸ್ಸಿಗೂ ಇಲ್ಲ, ಟೆಂಪೋಕ್ಕೂ ಹತ್ತಿಲ್ಲ. ನಾನು ಕಾದೇ ಇದ್ದೆ. 'ಅಣ್ಣೋ ಬರ್‍ರ್ರಿ, ಅವ್‌ಳು ಬರೂದಿಲ್ಲ, ವರ್ಗ ಆಗೋದ್ಯಂತೆ, ಬರ್‍ರಿ ಬರ್‍ರಿ' ಎಂದು ಟೆಂಪೋದಂವ ಕನಿಕರ ತೋರಿಸುತ್ತ ಕರ್ಕ ಹೋದ. ನಾನು ಕುರಿಯಂತೆ ಅವನ ಹಿಂಬಾಲಿಸಿದೆ!

ಯಾರಿಗೂ ಹುರುಪಿಲ್ಲ. ಟೆಂಪೋಕೂ ಎಂದಿನ ವೇಗವಿಲ್ಲ. ನಿನ್ನ ಬದಿ ಕುಳ್ಳಲು ಸದಾ ಸಿದ್ಧನಾಗಿರುತ್ತಿದ್ದ ಆ ಧಡೂತಿ ಮನುಷ್ಯ ಏಕೋ ಸೊರಗಿದಂತೆ ಕಾಣುವನು. ಸೋಡಾ ಗ್ಲಾಸ್ ಚಶ್ಮದವನ ಜೋಕುಗಳು ಬತ್ತಿಹೋಗಿವೆ. ಅರ್ಧ ಮುಚ್ಚಿ, ಅರ್ಧ ತೆರೆದ ಕಣ್ಣುಗಳ ವಿಚಿತ್ರಭಂಗಿಯಲ್ಲಿ ತೂಗುತ್ತ, ಕಟ್ಟಿಗೆ ಬಲಿ ಕೊಡಲು ಹೋಗುತ್ತಿರುವವರಂತೆ ಕಾಣುತ್ತಿರುವರು. ಸುತ್ತ ನಿಟ್ಟುಸಿರ ಬಿಸಿ ಹಾಯುತಿದೆ. ಎಲ್ಲರಿಗೆ ಜೀವ ತುಂಬಲು ನಿನ್ನ ದರುಶನವೇ ಆಗಬೇಕು. ಮತ್ತೆ ಬರುವೆಯಾ?

ನನಗೆ ಇಷ್ಟೆ ಹೇಳಲಿಕುಂಟು; ನಿನ್ನ ಕಣ್ಣುಗಳು ಸುಂದರವಾಗಿವೆ. ಶುಭ್ರವಾಗಿದೆ, ಈಗಷ್ಟೇ ಜನಿಸಿದ ಮಗುವಿನ ಕಣ್ಣುಗಳಂತೆ.

ಸಾಣಿಕಟ್ಟಾ

ರಾಜೀವ .ಎನ್

# ಮರೆಯಲ್ಲೇ ನಿಂತ ಸೂತ್ರಧಾರ



ಕಣ್ಣುಗಳು ತೇವಗೊಳ್ಳುವ ಉದ್ವೇಗದಿಂದಲ್ಲದೇ ಎಂ.ಜಿ.ಎಂ. ಕಾಲೇಜಿನ ನನ್ನ ಕಲಿಕೆಯ ದಿನಗಳನ್ನು ನೆನಪಿಸಿಕೊಳ್ಳುವುದೂ ನನಗೆ ಸಾಧ್ಯವಿಲ್ಲ. ಪ್ರಪಂಚಜ್ಞಾನವಾಗಲೀ ವ್ಯವಹಾರ ಜ್ಞಾನವಾಗಲೀ, ಕೊನೆಗೆ ಕನಿಷ್ಠ ಸಾಮಾನ್ಯ ಜ್ಞಾನವಾಗಲೀ (ಈಗ ಇವೆಲ್ಲ ಇವೆ ಎಂದೇನೂ ಅಲ್ಲವಾದರೂ) ಇಲ್ಲದ ಶುದ್ಧ ಗಮಾರನಾಗಿ ನಾನು ಎಂ.ಜಿ.ಎಂ. ಕಾಲೇಜಿಗೆ ಬಂದವನು. ಅಲ್ಲದೇ ಆ ವಯಸ್ಸಿಗೆ ಸಹಜವಾದ ಕಾರಣಗಳಿಗಷ್ಟೇ ಅಲ್ಲದೇ ಅತಂತ್ರ ಹಾಗೂ ಅನಾಥ ಸ್ಥಿತಿಯಲ್ಲಿದ್ದೆ ಕೂಡಾ.

ಇಲ್ಲದ ನನ್ನ ತಂದೆಯ ಸ್ಥಾನವನ್ನು ತಮಗೇ ಗೊತ್ತಿಲ್ಲದಂತೆ ತುಂಬಿದ ಅಲ್ಲಿನ ನನ್ನ ಗುರುಗಳಾಗಲೀ, ಈಗಲೂ ನನಗೆ ಉಪಯೋಗಕ್ಕೆ ಬರುವಂತೆ ಉಳಿದು ಬಂದಿರುವ ಜೀವನ ದೃಷ್ಟಿಯೊಂದು ಅಲ್ಲಿ ರೂಪ ಪಡೆದದ್ದಾಗಲೀ, ನನಗೆ ಅತ್ಯಂತ ಅನುಕೂಲವಾಗುವ ರೀತಿಯಲ್ಲಿ ನನ್ನ ಮುಂದಿನ ವಿದ್ಯಾಭ್ಯಾಸದ/ಜೀವನದ ದಿಕ್ಕು ವ್ಯಾವಹಾರಿಕವಾಗಿ ಕೂಡಾ ಇಲ್ಲಿ ನಿರ್ಧಾರವಾದದ್ದಾಗಲೀ, ಸುಳ್ಳಲ್ಲ.

ಅಚ್ಚಾದ ಎಲ್ಲ ಅಕ್ಷರಗಳ ಬಗ್ಗೆ ಶ್ರದ್ಧಾಭಕ್ತಿಯ ಭಾವವೇ ಪ್ರಧಾನವಾಗಿದ್ದ ನಮಗೆ ಪ್ರತಿವಾರ ಉದಯವಾಣಿಯಲ್ಲಿ ಲೇಖನ ಬರೆಯುತ್ತಿದ್ದ ಕು.ಶಿ.ಹರಿದಾಸ ಭಟ್ಟರು ಅಧ್ಯಾಪಕರು. ಅವರ ಕುರಿತು ಆಗಲೂ, ಈಗಲೂ ಭಯಮಿಶ್ರಿತ ಗೌರವ; ಭಯದ ಅಂಶವೇ ಜಾಸ್ತಿ. ಎದುರು ನಿಂತು ಮಾತನಾಡಲೂ ಧೈರ್ಯವಿಲ್ಲದ ನನಗಾಗಿ, ನಿಂತೇ ಹೋಗಬಹುದಾಗಿದ್ದ ನನ್ನ ಓದನ್ನು ಮೈಸೂರಲ್ಲಿ ಮುಂದುವರಿಸಲು ಅಗತ್ಯವಿರುವ ಊಟ ಹಾಗೂ ವಸತಿಯ ವ್ಯವಸ್ಥೆಯನ್ನು ಅವರು ಮಾಡಿಸಿದ್ದರು. ಬರವಣಿಗೆಯ ಅಭ್ಯಾಸ ಬಿಡಬೇಡ ಎಂದಿದ್ದರು. ನನಗೆ ಇಂಗ್ಲಿಷ್ ಸಾಹಿತ್ಯ ಕಲಿಸಿದ ಬಿ. ಕೃಷ್ಣಪ್ಪ, ಕಲಿಸುವುದೆಂದರೆ ಪಾಂಡಿತ್ಯ ಪ್ರದರ್ಶನವಲ್ಲ, ಬದಲು ಕೂಡಿ ನಡೆಸುವ ಹುಡುಕಾಟ ಎಂದು ಕಾಣಿಸುತ್ತ ಇಂಗ್ಲಿಷ್ ಮತ್ತು ಜರ್ಮನ್ ಕಲಿಸಿದ ತಿರುಮಲೇಶ್ವರ ಭಟ್ಟರು, ತಾನು ಓದಿದ್ದೆಲ್ಲವನ್ನೂ ನಾನೂ ಓದಿ ಸಂತೋಷಪಡಬೇಕು ಎಂದು ತಾಯಿಯಂತೆ ಅಕ್ಕರೆ ತೋರಿಸಿದ ಅರ್ಥಶಾಸ್ತ್ರದ ಇಂದಿರಾ ಕಿದಿಯೂರ್, ತಮ್ಮ ಲಹರಿಗಳಿಂದ ಪ್ರಿಯರೆನಿಸಿದ ಶ್ರೀಶ ಬಲ್ಲಾಳರು, ಪರಿಶುದ್ಧ ಇಂಗ್ಲಿಷಲ್ಲಿ ಪಾಠ ಹೇಳಿದ ರಾಮಭಟ್ಟರು, ನನ್ನನ್ನು ಮಾನಸಗಂಗೋತ್ರಿಗೆ ಅಟ್ಟಿದ ವಾಸುದೇವ ಉಚ್ಚಿಲರು, ಹೀಗೆ ಎಷ್ಟೊಂದು ಒಳ್ಳೆಯ ಅಧ್ಯಾಪಕರ ದಂಡೇ ಅಲ್ಲಿತ್ತು.

ಆಗ 'ಸಮುದಾಯ'ದ ಮೂಲಕ ಪ್ರಸನ್ನ ಕರ್ನಾಟಕದಾದ್ಯಂತ ವೈಚಾರಿಕ ಬಿರುಗಾಳಿಯನ್ನೇ ಎಬ್ಬಿಸಿದ್ದರು. ಅಂಥದ್ದನ್ನೆಲ್ಲ ಹರಿದಾಸ ಭಟ್ಟರು ಯಾವಾಗಲೂ ಪೋಲಾಗಲು ಬಿಟ್ಟವರಲ್ಲ. ಪ್ರಸನ್ನರ 'ಸಮುದಾಯ'ದ ಎಲ್ಲ ನಾಟಕಗಳನ್ನೂ 'ಮುದ್ದಣ ಮಂಟಪ', ವಾಸುದೇವ ಉಚ್ಚಿಲರು ಕಲಿಸಿದ ವಿಮರ್ಶೆಯ ದೃಷ್ಟಿ ಮತ್ತು ಮರೆಯಲ್ಲೇ ನಿಂತು ಎಲ್ಲ ಸೂತ್ರವನ್ನೂ ಆಡಿಸುವ ಹರಿದಾಸ ಭಟ್ಟರ ಹೊರತಾಗಿ ಈಗಲೂ ನೆನೆಯಲಾಗುವುದಿಲ್ಲ.

ಆ ಶಿಸ್ತು, ಅಚ್ಚುಕಟ್ಟು, ದಕ್ಷತೆ, ಒಳ್ಳೆಯದರ ಬಗ್ಗೆ ಪಕ್ಷಪಾತ, ಹೆಚ್ಚು ಸದ್ದಿಲ್ಲದೇ ಎಡೆಬಿಡದೇ ನಡೆಯುವ ಈ ಕೆಲಸಗಳ ಹಿಂದೆ ಸಮರ್ಥ ಸಂಘಟಕರಾಗಿ ನಿಂತು ಹರಿದಾಸಭಟ್ಟರು ಹಲವರ ಭವಿಷ್ಯವನ್ನು ಬರೆಯುತ್ತಲೂ, ತೀಡುತ್ತಲೂ ಇದ್ದರು. ಅವರ ಮಾತನ್ನು ಮೀರದ ಒಂದು ದೊಡ್ಡ ಪಡೆಯೇ ಸದಾ ಕಾರ್ಯಪ್ರವೃತ್ತವಾಗಿರುತ್ತಿತ್ತು. ಒಳ್ಳೆಯದು ನಡೆಯುತ್ತಿತ್ತು.

ಕುಶಿ ಮತ್ತು ಎಂ.ಜಿ.ಎಂ. ಒಂದು ಸುಂದರ ನೆನಪಾಗಿ, ಈಗಲೂ ಕೈಹಿಡಿದು ನಡೆಸುವ ಅನುಭವವಾಗಿ ಮನದಲ್ಲಿ ಉಳಿದದ್ದು ಹೀಗೆ. ■

**ಎಚ್. ಪಟ್ಟಾಭಿರಾಮ ಸೋಮಯಾಜಿ**



ಗೀತಾ ಸಾಳುಂಕೆ



ಮಿತ್ರಾ ವೆಂಕಟ್ರಾಜ

# ಅಮ್ಮನ ಆಟ

''ಗೊನ್ನಿ, ಗೊನ್ನಮ್ಮ ಅಂದ್ರೆ ಎಂಥ ಹೆಸ್ರನ ಅದು? ಒಂದು ಲಾಯಕ್ಕಿನ ಹೆಸ್ರು ಇಡಬಾರ್ದ?'' ಅಂತ ಯಾರಾದರೂ ಕೇಳಿದರೆ, ಗೊನ್ನಿಯ ಅಮ್ಮ ರುಕ್ಮಿಣಿ, ''ಅದೇ ಅಭ್ಯಾಸ ಆಗಿದೆಯೇ. ಬೇರೆ ಸಮ ಆಗುದಿಲ್ಲ'' ಎಂದೋ, ''ಅದ್ಕೆಲ್ಲ ಯಾರಿಗೆ ಪುರುಸೊತ್ತು ಬಿಡಿ'' ಎಂದೋ ಮಾತು ಹಾರಿಸಿಬಿಡಬಹುದು. ಅಥವಾ ದುಮ್ಮಾನದಲ್ಲಿದ್ದರೆ, ''ಅದಕ್ಕೊಂದು ಹೆಸರ? ಅದರ ಸುರ್ಪಕ್ಕೆ...'' ಎಂದು ಗುಣುಗುಣು ಬಯ್ದುಕೊಂಡುಹೋದರೂ ಆಯ್ತು. ಆದರೆ ಗೊನ್ನಿಯ ಸ್ವರೂಪಕ್ಕೆ ಅಂಥದ್ದೇನೂ ಆಗಿರಲಿಲ್ಲ. ಎಲ್ಲ ಮಕ್ಕಳಂತೆ ಇದ್ದಳು. ಅವಳ ಜಡೆಯಿಂದ ತಪ್ಪಿಸಿಕೊಂಡ ಕೂದಲ ಎಳೆಗಳು ಮುಖದ ತುಂಬ ಹರಿದಾಡಿಕೊಂಡು ಇರುತ್ತಿದ್ದವಾದರೂ, ಮುಖದಲ್ಲಿ ಲಕ್ಷಣದ ಗೆರೆಗಳಿದ್ದವು. ಕರಿಮಸಲು ಬಣ್ಣ. ನರಪೇತಲ ಜೀವ. ಹಿಡಿಕಡ್ಡಿ ಕೈಕಾಲುಗಳು.

ಆದರೂ ಎಂಟು ವರ್ಷ ಅಂತ ಹೇಳಲಿಕ್ಕೆ ಏನೂ ಅಡ್ಡಿಯಿಲ್ಲದ ಬೆಳವಣಿಗೆ. ಮಾಲತಿ ಹುಟ್ಟಿದ ಲಾಗಾಯ್ತು, ಬಾಗಿಲ ಚಡಕಿನಲ್ಲಿ, ಉಪ್ಪರಿಗೆ ಮೆಟ್ಟಲಿನ ಅಡಿಯಲ್ಲಿ 'ಕೈಕೊಂಬು' ಊಜೆ ಊಜೆ ಉಂಟಾದ ಮುಂಬಲ್ಲು. ಇಷ್ಟರ ಮೇಲೆ, ಮುಖ ದಲ್ಲಿ ಎದ್ದುಕಾಣುವ ಗೋಲಿಕಣ್ಣುಗಳು. ರೆಪ್ಪೆ ಗಳಿಂದ ಹಿಡಿದಿಡಲಾಗದಷ್ಟು ದೊಡ್ಡದಾದ ಕಣ್ಣುಬೇಳೆಗಳು ಈಗಲೋ ಮತ್ತೆಯೋ ಹೊರಗೆ ಬೀಳುವಂತಿದ್ದು, ಅವಳು ಮಲಗಿದಾಗಲೂ ಹೊರಗಿಣುಕುತ್ತಿರುತ್ತಿದ್ದವು. ನಿದ್ದೆಯಲ್ಲಿದ್ದಾಗ, ಅರೆತೆರೆದ ರೆಪ್ಪೆಗಳ ಎಡೆಯಲ್ಲಿ ಆಚೀಚೆ ತಿರುಗುವ ಕಣ್ಣಬೊಂಬೆಗಳನ್ನು ಕಂಡು ಮಕ್ಕಳು, ಒಮ್ಮೊಮ್ಮೆ, ''ಗೊನ್ನಿಯ ಕಣ್ಣು ಕಾಣು. ರಾತ್ರಿ ಸಾ ಕಣ್ಣು ತೆರ್ಕಂಡು ಎಲ್ಲ ನೋಡ್ತಾಳೆ!'' ಅಂತ ಸುಳ್ಳೇ ಗಾಬರಿಪಡುವುದಿತ್ತು.

ಒರಳಿಗೆ ಹಾಕಿದ ಸಾರಿನ ಮಸಾಲೆಯನ್ನು ಸೈಂಗೋಲಿನಲ್ಲಿ ಕುಟ್ಟಿ ಪುಡಿ ಮಾಡುತ್ತಿದ್ದ ರುಕ್ಮಿಣಿ, ''ಗೊನ್ನಿ, ಏ ಗೊನ್ನಮ್ಮ, ಸೌಂಟು ತೆಕಂಡು ಬಾ'' ಅಂತ ಏರುದನಿಯಲ್ಲಿ ಕರೆದವಳು, ''ಇದೊಂದು ಕಾಟು ಎಲ್ಲಿ ಹೋಗಿದಪ್ಪ'' ಎಂದು ತನ್ನಲ್ಲೇ ಗೊಣಗಿಕೊಂಡಳು. ಹೊರಗಿನ ಜಗಲಿಯಲ್ಲಿ ಮೂಗಿಗೆ ಸೆರಗು ಹಿಡಿದು ನಿಂತಿದ್ದ ರುಕ್ಮಿಣಿಯ ಅತ್ತೆ ಪಾರ್ತಮ್ಮ, ಅಲ್ಲಿಂದಲೇ ಕೂಗಿ, ''ಎಂಥದು? ಆ ಗೊನ್ನಿನ್ನ ಕರೆದು ಕಾಸಿನ ಉಪಯೋಗ ಉಂಟೋ? ಶತ ಸೋಂಬೇರಿ. ಮಕ್ಕಳ ಹಿಂದು ಹೊಡಕೊಂಡು ಸೊಕ್ಕಲಿಕ್ಕೆ ಅಡ್ಡಿಲ್ಲೆ'' ಎಂದವರು, ತಾನೇ ಸೌಟು ತಂದು ಕೊಟ್ಟು, ಫಕ್ಕನೆ ಜಗಲಿಗೆ ಓಡಿದರು. ಅಷ್ಟರೊಳಗೆ ಮಸಾಲೆಯ ಘಾಟಿಗೆ ಅವರಿಗೆ ನಾಲ್ಕಾರು ಸೀನು ಬಂದಾಗಿತ್ತು. ಸೀನುಗಳೆಡೆಯಲ್ಲಿ, ''ಆ ಗೊನ್ನಿ ಬರೀ ಕಾಟಾಗಿದ ಈಗ'' ಎಂದೂ ಸೇರಿಸ ದಿರಲಿಲ್ಲ. ಸ್ವಲ್ಪ ಹೊತ್ತಿಗೆ ಮುಂಚೆ ತಾನು ಕಾಟು ಅಂತ ಬೈದುಕೊಂಡಿದ್ದರೂ, ಅತ್ತೆ ಹಾಗೆ ಹೇಳು ವಾಗ ರುಕ್ಮಿಣಿಗೆ ಕಿರಿಕಿರಿಯಾಯಿತು. ತನ್ನ ಅತ್ತೆಗೆ ಈಗಲ್ಲ, ಮುಂಚೆನಿಂದಲೂ ಗೊನ್ನಿಯನ್ನು ಕಂಡರೆ ಅಷ್ಟಕ್ಕಷ್ಟೆ ಅಂತ ಅವಳಿಗೆ ಗೊತ್ತಿಲ್ಲದ್ದಲ್ಲ. ಅದನ್ನು ನೂರು ವಿಧದಲ್ಲಿ ಗೊತ್ತು ಮಾಡಿ ಕೊಂಡೇ ಇರುವವರು ಅವರು.

''ಹೌದನ ರುಕ್ಕ, ನಾಳೆ ನಾ ಉಡುಪಿಗೆ ಹೋಗ್ತೆ ಹೌದಲ್ಲ, ಗೊನ್ನಿನ್ನ ಕರ್ಕಂಡು ಹೋಗ್ತೆ ಆಗದ? ಅಲ್ಲಿ ಏನಾದ್ರೂ ಮಾಡಲಿಕ್ಕಾಗುತ್ತದ ಕಾಣ್ತ, ಹ್ಞ? ಸೀನು ಮಾಮನ ತಂಗಿ ಇಲ್ವ, ಕಟ್ಪಾಡಿಗೆ ಕೊಟ್ಟವಳು, ಎಂತಪ್ಪ ಅವಳ ಹೆಸರು, ಹೊಟ್ಟೆಯಲ್ಲುಂಟು, ಬಾಯಲ್ಲಿ ಬರುದಿಲ್ಲ ಕಾಣು... ಹ್ಞಾ, ವಸಂತಿ. ವಸಂತಿ ಗೊತ್ತುಂಟಲ್ಲ? ಅವರ ಮನೆಯಲ್ಲಿ ಕೆಲಸಕ್ಕೆ ಒಂದು ಹೆಣ್ಣು ಬೇಕು ಅಂತಿದ್ರು, ಏನ್ ಹೇಳ್ತಿ?'' ಎಂದರು ಅವಳ ಅತ್ತೆ ಉಪಾಯವೊಂದನ್ನು ಹೇಳುವವರಂತೆ.

ಮರುದಿನ ಅವರು ತಮ್ಮ ಮಗಳ ಬಾಣಂತನ ಕ್ಕೆಂದು ಅವಳ ಮನೆಗೆ ಹೋಗುವವರಿದ್ದರು. ಈಗ ಸಾರಿನ ಪುಡಿ ತಯಾರಾಗುತ್ತಿದ್ದದ್ದೂ ಮಗಳಿಗಾಗಿಯೇ. ಹೊರಟವರಿಗೆ ಹಾಗೆಯೇ ಗೊನ್ನಿಯ ಭವಿಷ್ಯದ ಯೋಚನೆ. ಕುಟ್ಟಿದ ಸಾರಿನ ಪುಡಿಯನ್ನು ಸಾರಣಿಗೆಯಲ್ಲಿ ಗಾಳಿಸುತ್ತಿದ್ದ ರುಕ್ಮಿ ಣಿಗೆ, ಅತ್ತೆಯ ಮಾತು ಕೇಳಿ ತಲೆ ಮೇಲೆ ಕಲ್ಲು ಬಂಡೆ ಹೊತ್ತು ಹಾಕಿದಂತಾಯಿತು. ಸೈಂಗೋಲು ಗುದ್ದುವ ಕೈ ಕ್ಷಣಕಾಲ ತಟಸ್ಥವಾಯಿತು. ಥಟ್ಟನೆ, ''ಬೇಡ ಬೇಡ ಮಾಮಿ. ಗೋದಕ್ಕನಿಗೆ ಹೇಳಿದ್ದೆ. ಎಲ್ಲ ನಾ ನೋಡಿಕೊಳ್ತೆ ಅಂದಿದ್ದಳು'' ಎಂದು ಒಟ್ಟಾರೆ ಏನೋ ಹೇಳಿಬಿಟ್ಟಳು. ಗೊನ್ನಿಯ ಬಗ್ಗೆ ಎಲ್ಲರೂ ರುಕ್ಮಿಣಿಗೆ ಬುದ್ಧಿ ಹೇಳುವವರೇ. ಪ್ರತಿ ಯೊಬ್ಬರೂ ಗೊನ್ನಿಗೊಂದು ಇತ್ಯರ್ಥ ಮಾಡುವ ಅಂದಾಜಿನವರೇ. ಹೇಳುವವರ ಮಾತು ಕೇಳಿ ಕೇಳಿ ರುಕ್ಮಿಣಿಯ ಮಂಡೆ ಬಿಂಗ್ರಿಯಾಗಿಬಿಡು ತ್ತಿತ್ತು. ಉಪ್ಪಲ್ಲೂ ಇಲ್ಲ, ಹುಳಿಯಲ್ಲೂ ಇಲ್ಲ ಎಂಬಂಥ ಸ್ವಭಾವದ ಅವಳ ಗಂಡ ಗೋಪಾಲ ಕೃಷ್ಣ ಪ್ರಭುವೂ, ಒಮ್ಮೊಮ್ಮೆ, 'ಅಮ್ಮ ಹೇಳಿದ್ದು ಹೌದಲ್ಲ' ಎಂದಾಗಲಂತೂ ರುಕ್ಮಿಣಿಗೆ ಮುಲ್ಲೆಗೆ





ಮಾಡಿಟ್ಟ ಕಸವನ್ನೆಲ್ಲ ಮನೆತುಂಬ ಸುರಿದಂತಾಗುತ್ತಿತ್ತು.

ಈಗೀಗ ರುಕ್ಮಿಣಿಗೆ ಗೊನ್ನಿಯ ಮೇಲೆ ವಿನಾ ಕಾರಣ ಸಿಟ್ಟೂ ಬರತೂಡಗಿತ್ತು. ಅವಳು ನಿಂತದ್ದಲ್ಲ, ಕೂತದ್ದಲ್ಲ ಎನ್ನುವಂತೆ ಮಾಡಿಬಿಡುತ್ತಿದ್ದಳು. ಇದೊಂದು ಯಾಕಾದರೂ ತನ್ನ ಮನೆಗೆ ಬಂತು ಎನ್ನುವಷ್ಟು ಅವಳಿಗೆ ಕಾಣತೊಡಗಿತ್ತು ಎಂದರೆ ನಂಬಲಿಕ್ಕೆ ಕಷ್ಟ. ಯಾಕೆಂದರೆ ರುಕ್ಮಿಣಿ ಮೊದಲು ಹಾಗಿರಲೇ ಇಲ್ಲ.

ಗೊನ್ನಿ ಮನೆಗೆ ಬಂದ ಹೊಸತರಲ್ಲಿ ರುಕ್ಮಿಣಿ ಅವಳನ್ನು ಮುದ್ದು ಮಾಡಿದ್ದೇ ಮಾಡಿದ್ದು. ಆಗ ಅವಳಿಗೆ ಬೇರೆ ಮಕ್ಕಳೂ ಇರಲಿಲ್ಲ. ಮದುವೆಯಾಗಿ ಹತ್ತು ದಾಟಿ ಮತ್ತೊಂದು ವರ್ಷ ಕಳೆದಾಗಿತ್ತು. ತನಗೆ ಮಕ್ಕಳ ಭಾಗ್ಯವೇ ಇಲ್ಲವೇನೋ ಎಂದು ಅವಳು ಕೊರಗುತ್ತಿದ್ದ ಕಾಲ. ಗೊನ್ನಿ ಕೈಗೆ ಬಂದದ್ದು ಅವಳಿಗೊಂದು ವರ ಸಿಕ್ಕಿದಂತೆ ಆಗಿತ್ತು. ಪುರುಮಗುವಿಗೆ ಗೊನ್ನಿ, ಗೊನ್ನಿಮರಿ, ಗೊನ್ನಮ್ಮ ಅಂತ ಕರೆದದ್ದೇ ಖಾಯಂ ಆಗಿ, ಅದಕ್ಕೊಂದು ಕ್ರಮಪ್ರಕಾರದ ಹೆಸರು ಇಡುವುದರೊಳಗೆ ಮಾಲತಿ ಹುಟ್ಟಿಯಾಗಿತ್ತು. ಮಾಲತಿಯ ಹಿಂದೆ ನಾಗೇಶ. ಬೆನ್ನಿಂದ ಎರಡು ಸಣ್ಣ ಮಕ್ಕಳಿದ್ದಾವೆಂದ ಮೇಲೆ ಅಲ್ಲಿಗೆ ಮಕ್ಕಳಾಟಿಗೆ ಮುಗಿಯಬೇಕೆಂದೇ ಅರ್ಥ. 'ಇಷ್ಟು ದೊಡ್ಡವಳಾದರೂ ಬುದ್ಧಿ ಇಲ್ಲಲ್ಲ ನಿಂಗೆ' ಅಂತಲೋ, 'ನಾಚಿಕೆಕೇಡಿಗೆ ಅಷ್ಟೂ ಗೋಚರ ಇಲ್ಲಂದ್ರೆ', ಎಂದೋ ಹೇಳಿಸಿಕೊಳ್ಳುತ್ತ, ಎರಡು ವರ್ಷ ಪ್ರಾಯಕ್ಕೇ ಗೊನ್ನಿ ದೊಡ್ಡವರ ಪಟ್ಟಕ್ಕೆ ಏರಿದ್ದಳು. ನಾಗೇಶನನ್ನು ಸೊಂಟದಲ್ಲಿ ಏರಿಸಿಕೊಂಡು, ಮಾಲತಿಯ ಕೈ ಹಿಡಿದುಕೊಂಡು, ಕೆಳತುಟಿಯನ್ನು ಕಚ್ಚಿಹಿಡಿದು, ಕಲ್ಲುಮುಳ್ಳಿನ ಹಿಂದಿನಂಗಳದಲ್ಲಿ ನಡೆಯುತ್ತ, ಕಳ್ಳಿಗಿಡದ ಬೇಲಿ ದಾಟಿ, ನೆರೆಮನೆಯಲ್ಲಿ ಆಡಲಿಕ್ಕೋ, ಅಂಗಡಿಯಿಂದ ಏನಾದರೂ ಸಾಮಾನು ತರಲಿಕ್ಕೋ ಹೋಗುತ್ತಿದ್ದರೆ, ಗೊನ್ನಿಯ ಮುಖದ ಮೇಲೆ ಹಿರಿಯಕ್ಕತನದ ಪರೆ ಹಾಸಿದಂತಿರುತ್ತಿತ್ತು.

ಹೀಗೇ ಐದಾಯಿತು, ಆರಾಯಿತು, ಏಳು ವರ್ಷ ದಾಟಿದರೂ ಗೊನ್ನಿಯಿನ್ನೂ ಶಾಲೆಗೆ ಹೋಗುವ ಹನಿ ಸೂಚನೆಯೂ ಇರಲಿಲ್ಲ. ಅವಳಿಕಿಂತ ಸಣ್ಣವಳು ಮಾಲತಿ ಹೇಗೂ ಆಯಿತಲ್ಲ, ಇನ್ನೂ ಕೊಂಞ್ಞ (ತೊದಲು) ಮಾತಿನಿಂದ ಮೇಲೇರಿರದ ನಾಗೇಶ ಸಹ ಜನಿವಾರದಂತೆ ಚೀಲ ನೇಲಿಸಿಕೊಂಡು, 'ಎಲ್ಡೊಂದ್ಲಿ ಎಲ್ಡು' ಎನ್ನುತ್ತ ಶಾಲೆಯ ಯಾತ್ರೆ ಸುರುಮಾಡಿಯಾಗಿತ್ತು. ಇತ್ತ ಗೊನ್ನಿ ಮಾತ್ರ, ಮನೆಕೆಲಸಗಳಲ್ಲಿ ಸಹಾಯ ಮಾಡಿಕೊಂಡು, ರುಕ್ಮಿಣಿಯ ಮಾತಿನಲ್ಲಿ ಹೇಳುವುದಾದರೆ, ಅವಳ ಕೈಕಾಲಿಗೆ ಅಡ್ಡ ಬಂದುಕೊಂಡು ಮನೆ ತುಂಬ ಸುತ್ತಿಕೊಂಡು ಇರುತ್ತಿದ್ದಳು. ದಿನದಿಂದ ದಿನಕ್ಕೆ ಮಡಿಯ ಗಿರ ಹಿಡಿಯತೊಡಗಿದ ರುಕ್ಮಿಣಿಯ ಅತ್ತೆ ಪಾರ್ತಮ್ಮನಂತೂ, ಸದಾ ಒಂದಲ್ಲ ಒಂದು ಕಾರಣಕ್ಕೆ ಹಿಡಿದುತರುತ್ತಿದ್ದ ಮಕ್ಕಳ ದೂರುಗಳಲ್ಲಿ ಹೆಚ್ಚಿನವು ಗೊನ್ನಿಯದೇ. ಗೊನ್ನಿ ಅದನ್ನು ಮುಟ್ಟಿದಳು, ಇದನ್ನು ಚೆಲ್ಲಿದಳು, ಎದುರು ಮಾತಾಡಿದಳು, ಹೀಗೆ ಏನಾದರು ಒಂದು. ತಾಳ್ಮೆಗೆಟ್ಟು ರುಕ್ಮಿಣಿ ಗೊನ್ನಿಯ ಬೆನ್ನಿಗೆ ನಾಕು ಬಿಗಿಯುತ್ತಿದುದೂ ಇತ್ತು. ಆದರೆ ಅದೇ ಮರುಕ್ಷಣಕ್ಕೆ ರುಕ್ಮಿಣಿಗೆ ಅವಳ ಮೇಲೆ ಥಟ್ಟೆಂದು ಮೋಹ ಬಂದು ಬಿಡುತ್ತಿತ್ತು. "ಸಾಕೆ, ಹೋಗು. ಮಕ್ಕಳೊಟ್ಟಿಗೆ ಆಟ ಆಡಿಕೊಂಡು ಬಾ ನಡಿ" ಅಂತ ಕಳಿಸುತ್ತಿದ್ದಳು.

ಗೊನ್ನಿಗೆ ಆಚೀಚೆ ಮನೆ ಮಕ್ಕಳು ಸೇರಿ ಆಡುವ ಆಟಗಳಲ್ಲಿ ತನ್ನನ್ನು ತುರುಕಿಕೊಳ್ಳುವುದೆಂದರೆ ಮಹಾ ಇಷ್ಟ. ಮಕ್ಕಳಿಗೂ ಅಷ್ಟೆ. ಒಂದ್ಕಾಲಾಟ, ಹೊಕ್ಕಂಬಾಟ, ಜಬಲಿ, ಗಜಿಗ, ಇನ್ನು ಮನೆಯಾಟ, ಮದುವೆಯಾಟ, ಶಾಲೆಯಾಟ- ಎಲ್ಲದಕ್ಕೂ ಗೊನ್ನಿಯ ಅಗತ್ಯ ಬಿದ್ದೇಬೀಳುತ್ತಿತ್ತು. ಶಾಲೆಯಾಟ ಆಡುವಾಗ, ಏನಲ್ಲದಿದ್ದರೆ, ಹಾಜರಿ ಪುಸ್ತಕ ಹಿಡಿದು ಕ್ಲಾಸಿಂದ ಕ್ಲಾಸಿಗೆ ಹೋಗುವ ಹಾಗೂ ಶಾಲೆ ಮುಗಿಯುವಾಗ ಢಣಢಣ ಗಂಟೆ ಬಾರಿಸುವ ಪೇದೆ ಗುಂಯ್ಯನ ಪಾತ್ರಕ್ಕಾದರೂ





ಅವಳು ಬೇಕೇಬೇಕಾಗುತ್ತಿತ್ತು. ಇನ್ನು ಮನೆಯಾಟವಾದರಂತೂ ಮುಕ್ಕಾಲಂಶ ಕೆಲಸ ಅವಳಿಗೇ.

ಹೀಗೆ ಹಳೇ ಆಟ ಆಡಿ ಆಡಿ ಬೇಜಾರು ಬರಲು ಸುರುವಾದಾಗಲೇ ಅವರಿಗೊಂದು ಹೊಸ ಆಟ ಸಿಕ್ಕಿತ್ತು. ಅವರು ಅದಕ್ಕೆ 'ಅಮ್ಮನ ಆಟ' ಎಂದು ಹೆಸರಿಟ್ಟೂಬಿಟ್ಟಿದ್ದರು. ಅದು ಆದದ್ದು ಹೀಗೆ.

ರುಕ್ಮಿಣಿಯ ಅಕ್ಕ ಗೋದಾವರಿಬಾಯಿಯ ಮನೆಯಲ್ಲಿ ಚೌತಿಗೆ ಗಣಪತಿ ಇಡುವ ಕಟ್ಟಳೆ ಇತ್ತು. ಅವಳೇನೋ ಎಂದಿನಂತೆ ರುಕ್ಮಿಣಿಯನ್ನೂ ಕರೆದಿದ್ದಳು. ಅಕ್ಕನ ಮನೆಯೇನೂ ಅಂಥ ದೂರದ ಊರಲ್ಲ. ಮನೆಯಿಂದ ನಡೆದು ಸಂತೆಕಟ್ಟೆ ದಾಟಿದರೆ, ಆಚೀಚೆ ನೋಡುವಾಗ



ಬಸ್ಸು ನಿಲ್ದಾಣ. ಅಲ್ಲಿಂದ ಬಸ್ಸಲ್ಲಿ ಕೂತು, ಬಸ್ಸು ಹೊರಟ ಮೇಲೆ ಹದಿನೈದೇ ನಿಮಿಷ. ಬಸ್ಸಿನಿಂದಿಳಿದ ನಂತರ ತಡ ಇಲ್ಲ; ರಸ್ತೆಗಂಟಿಕೊಂಡೇ ಗೋದಕ್ಕನ ಮನೆ ಜಗಲಿ.

ಆದರೆ, ಮಕ್ಕಳನ್ನು ಮೇಯಿಸಿಕೊಂಡು ಬಸ್ಸು ಹತ್ತಿ, ಇಳಿದು, ಎಲ್ಲಿಗಾದರೂ ಹೋಗುವುದೆಂದರೆ ರುಕ್ಮಿಣಿಗೆ ಜೀವ ಬಚ್ಚಿ ಬರುತ್ತಿತ್ತು. ಅವಳ ಅತ್ತೆ ಪಾರ್ತಮ್ಮ ಮಗಳ ಬಾಣಂತನಕ್ಕೆ ಹೋದವರು ಇನ್ನೂ ತಿಂಗಳೊಪ್ಪತ್ತು ಈಚೆ ಬರುವವರಲ್ಲ. ಅಲ್ಲದೆ ಈಗ ಮೂರು ತಿಂಗಳಿಂದ, ನಾಗೇಶನ ಬೆನ್ನಿಗೆ ಬರುವ ಹೊಸ ಜೀವವೊಂದು ಅವಳ ಹೊಟ್ಟೆಯಲ್ಲಿ ಬೆಳೆಯುತ್ತಿತ್ತು. ಗಂಡ ಗೋಪಾಲಕೃಷ್ಣ ಪ್ರಭುವಾದರೋ ಪುರುಸೊತ್ತು ಅಂದರೆ ಏನೆಂದು ಗೊತ್ತಿಲ್ಲದ ಮಹಾರಾಯ. ಬೆಳಿಗ್ಗೆ ಕಾಫಿ ಕುಡಿದು ಜುಬ್ಬ-ಪೈಜಾಮ ಧರಿಸಿ, ತಲೆಗೊಂದು ಬಿಳಿ ಗಾಂಧಿ ಟೊಪ್ಪಿ ಏರಿಸಿ ಅಂಗಡಿಗೆ ಹೋದರೆ, ಮತ್ತೆ ಅವನು ಅಂಗಡಿ ಬಾಗಿಲು ಮುಚ್ಚುವಾಗ ರಾತ್ರಿ ಎಂಟು ಗಂಟೆ ದಾಟುತ್ತಿತ್ತು. ವಾರದ ಏಳೂ ದಿನವೂ ಅಂಗಡಿ ತೆರೆದು ಕೂರುವವನು ಅವನು. ಹೆಚ್ಚೆಂದರೆ, 'ನಂಗೆ ಕರ್ಕರಿ ಮಾಡ್ಬೇಡ. ನೀ ಬೇಕಾರೆ ಹೋಗಿ ಬಾ' ಎನ್ನುವವ. ಆದಿತ್ಯವಾರವೂ, ಅಂಗಡಿ ಒತ್ತರೆ, ವಸ್ತ್ರದ ಗಣಿಕೆ, ಲೆಕ್ಕಪತ್ರ ಎಂದು ಅವನಿಗೆ 'ಮಂಡೆ ಹೋಗುವಷ್ಟು' ಕೆಲಸವಿರುತ್ತಿತ್ತು.

ಹಾಗಾಗಿ, ಅವನ ದಾರಿ ಕಾಯುವ ಪ್ರಶ್ನೆಯಂತೂ ಇರಲೇ ಇಲ್ಲ. ಅಕ್ಕ ಒತ್ತಾಯದಲ್ಲಿ ಹೇಳಿಕಳಿಸಿದ್ದಾಳಲ್ಲ ಎಂದು ಒಂದು ಮಧ್ಯಾಹ್ನ, ಗಂಡನಿಗೆ ಒಂದಷ್ಟು ಅನ್ನ, ದಾಳಿ ತೊವ್ವೆ ಮಾಡಿ, ಅವಡೆ ಬೀಜದ ಉಪ್ಕರಿ ಒಗ್ಗರಿಸಿಟ್ಟು, ನೆರೆಮನೆಯ ಪೈಗಳ ಹೆಂಡತಿ ರಾಧಮ್ಮನನ್ನು ಒಪ್ಪಿಸಿ ಹೊರಡಿಸಿದಳು... ರಾಧಮ್ಮ ಹೊರಟದ್ದೇ, ಅವಳ ಎರಡು ಮಕ್ಕಳೂ ಬಾಲದಂತೆ ಸಜ್ಜಾಗಿ ನಿಂತವು. ಅಂತೂ ದೊಡ್ಡ ಪಟಾಲಂ ಹೊತ್ತುಕೊಂಡೇ ರುಕ್ಮಿಣಿ ಅಕ್ಕನ ಮನೆಗೆ ಬಂದಳು. ಗಣಪತಿ ನೋಡುವುದಕ್ಕಿಂತ ಹೆಚ್ಚಾಗಿ ಅವಳಿಗೆ, ಅಕ್ಕನ ಹತ್ತಿರ ಗೊನ್ನಿಯ ವಿಚಾರ ಮಾತಾಡುವುದಿತ್ತು. ಆವತ್ತೇನೋ, ಅತ್ತೆ ಕೇಳಿದ್ದಕ್ಕೆ ಘಟಕ್ಕಂತ ಬಾಯಿಗೆ ಬಂದ ಉತ್ತರ ಕೊಟ್ಟಿದ್ದಳು. ಈಗ ನಿಜವಾಗಿಯೂ ಗೋದಾವರಿಯ ಮೊರೆ ಹೋಗದೆ ವಿಧಿಯಿರಲಿಲ್ಲ.

ಮನೆ ಬಾಗಿಲಿಗೆ ಕಟ್ಟಿದ ಮಾವಿನೆಲೆಯ ತೋರಣ, ಜಗಲಿಯುದ್ದಕ್ಕೆ ಇಳಿಬಿಟ್ಟ ಕೆಂಪು, ಹಸುರು ಬಣ್ಣದ ಕಾಗದಗಳ ಹೂ ಮಾಲೆ

ನೋಡಿದ್ದೇ, ಬಸ್ಸಿನಿಂದ ಇಳಿಯುವುದಕ್ಕಿಲ್ಲ; ಮಕ್ಕಳ, 'ಗಂಪತಿ ಬಪ್ಪ ಯೆತ್ತಾ, ಉಂಡೊ ಚಕ್ಕಿ ಖತ್ತಾ' (ಗಣಪತಿ ಬರ್ತ್ತಾನೆ, ಉಂಡೆ ಚಕ್ಕುಲಿ ತಿನ್ತಾನೆ) ಎಂಬ ರಾಗ ಸುರುವಾಗಿಯಾಗಿತ್ತು. ರಸ್ತೆಯಿಂದ ಒಳಗೆ ಕಾಲಿಟ್ಟರೆ, ಬಾಗಿಲ ಎದುರೇ, ಮೇಜಿನ ನಾಲ್ಕು ಕಾಲುಗಳಿಗೆ ಕಬ್ಬಿನ ಜಲ್ಲು ಬಿಗಿದು ಮಾಡಿದ ಮಂಟಪದಲ್ಲಿ ಆಸನಾರೂಢ ನಾಗಿದ್ದ ಅಡಿಯೆತ್ತರದ ಬಣ್ಣಬಣ್ಣದ ಗಣಪ ಕಣ್ಣಿಗೆಬಿದ್ದ.

ಗಣಪತಿ ಕೂತ ಮನೆ ಅಂದಮೇಲೆ ಬರು ವವರು ಹೋಗುವವರು ಕೇಳಬೇಕ? ಮಕ್ಕಳು-ಮರಿಗಳು, ಹೆಂಗಸರು, ಮುದುಕರು ಅಂತ ಬಂದು, ಕೈಮುಗಿದು, ಪ್ರಸಾದ ತೆಗೆದುಕೊಂಡು ಹೋಗುವ ಗೌಜಿ, ಒಂದೆಡೆ ಆಚೀಚೆ ಓಡಾಡುವ ಮಕ್ಕಳ ಗಲಾಟೆ, ಮಾತು-ಕತೆ, ಊಟ-ಉಪಚಾರ. ಈ ಎಡೆಯಲ್ಲಿ ಜಗಲಿಯ ಮುಲ್ಲೆಯಲ್ಲಿ ಕಾಲು ಮಡಚಿ ಕುಳಿತಿದ್ದ ಗೋದಾವರಿಯ ಅತ್ತೆಯ, 'ಎಲ್ಲ ತಿಂದ್ರಿಯಾ ಕುಡಿದ್ರಿಯ?' ಅಂತ ವಿಚಾರಿಸುವ ಕ್ಷೀಣ ದನಿ, ಜಗಲಿ ದಾಟಿ ಕೆಳಗಿಳಿಯುವಷ್ಟರಲ್ಲಿ ಗಲಾಟೆ ಯೊಳಗೆ ಮುಳುಗಿ ಇಂಗಿಹೋಗುತ್ತಿತ್ತು. ಕೈಯಲ್ಲಿ ಸದಾ ಜಪದ ಮಾಲೆ ತಿರುಗಿಸುತ್ತ ಮಣ ಮಣ ಸುತ್ತಿದ್ದ ಆಕೆಗೆ ವಾತದ ನೋವಿನಿಂದಾಗಿ ಏನೂ ಕೂಡುತ್ತಿರಲಿಲ್ಲ. ಈಗೆರಡು ವರ್ಷಗಳ ಹಿಂದೆ, ಆಕೆಯ ಗಂಡ ಪಕ್ಷವಾತ ಹಿಡಿದು ಕಾಲವಾದ ಮೇಲೆ ಇನ್ನಷ್ಟು ಲಾಚಾರಾಗಿದ್ದಳು. ಯಾರಾ ದರೂ ಮಾತನಾಡಿಸಿದರೆ ವಾತದ ಕತೆಯನ್ನೇ ತಿರುತಿರುಗಿ ಹೇಳಿಕೊಂಡು ಕಣ್ಣೀರು ಸುರಿಸು



ತ್ತಿದ್ದಳು. ಮೊದಲೆಲ್ಲ ತಾನೇ ಓಡಾಡಿ ಯಜ ಮಾನಿಕೆ ಮಾಡಿಕೊಂಡಿದ್ದ ಮನೆಯಲ್ಲವೇ? ಈಗ ಮೈಯ ತ್ರಾಣದೊಂದಿಗೆ ಮನಸ್ಸಿನ ತ್ರಾಣವೂ ಮುರಿದಿತ್ತು.

ಊಟಕ್ಕೆ ಕುಳಿತ ರುಕ್ಮಿಣಿಗೆ ಊಟವೂ ಮೆಚ್ಚ, ಪಾಯಸವೂ ಸೇರ. ಮನಸ್ಸಿನ ತುಂಬ ಕರಕರಿ ತುಂಬಿತ್ತು. ಗಣಪತಿ ನೋಡಲಿಕ್ಕೆ ಬಂದ ಪರಿಚಿತ ರೊಬ್ಬರು, "ಏನ್ ರುಕ್ಮಿಣಿ ಹೇಗಿದ್ದೀ?" ಎಂದ ವರು, "ನಿಂಗೆ ಎಷ್ಟು ಮಕ್ಕಳು ಈಗ?" ಎಂದು ಕೇಳಿದ್ದರು. ತಾನು ನ್ಯಾಯವಾಗಿ, "ಎರಡು" ಎಂದಿದ್ದಳು. ಅಲ್ಲೆ, ಒಂದು ಕೈಯ್ಯಲ್ಲಿದ್ದ ಚಕ್ಕುಲಿ ಕುರುಕುತ್ತ ಇನ್ನೊಂದರಲ್ಲಿದ್ದ ಶರಬತ್ತು ಕುಡಿಯು ತ್ತಿದ್ದ ನಾಗೇಶ-ಅಷ್ಟು ಸಣ್ಣ ಪೋರನಿಗೆ ಅಧಿಕಪ್ರಸಂಗವಲ್ಲವೇ?-"ಅಲ್ಲ, ಮೂರಲ್ವ ಅಮ್ಮಾ?" ಅನ್ನಬೇಕೇ? ಈ ಮಕ್ಕಳು ಅಂತ ಹೇಳುವುದು; ಅವು ಮರ್ಯಾದೆ ತಗಿಯಲಿಕ್ಕೆ ಒಂದನೇ ಎಂದುಕೊಂಡಳು ರುಕ್ಮಿಣಿ. ಅಬ್ಬ ಆ ಜನ, "ಓ

ಯಾರು? ಆ ಹೆಣ್ಣಿನ್ನ ಇನ್ನು ಇಟ್ಕೊಂಡಿದ್ದಿಯ?'' ಎಂದಿದ್ದರು. ಅಷ್ಟು ಹೇಳಿದ್ದು ಸಾಕಾಗಿತ್ತು, ರುಕ್ಮಿಣಿಯ ಮನಶ್ಯಾಂತಿ ಕೆಡಲು.

ಊಟ ಮುಗಿಸಿದ್ದೇ ರುಕ್ಮಿಣಿಗೆ ತಡೆಯಲಿಲ್ಲ. ''ಗೋದಕ್ಕ, ನಂದು ಒಟ್ಟು ಅವಸ್ಥೆ ಆಯ್ತಲ್ಲ ಮಾರಾಯ್ತಿ'' ಎಂದೆನ್ನುವುದರಲ್ಲಿ ರುಕ್ಮಿಣಿಯ ಕಣ್ಣುತುಂಬಿ ಕೊಳವಾಯಿತು. ಗೋದಾವರಿ ಸಮಾಧಾನಪಡಿಸುತ್ತ, ''ಅಲ್ಲ ರುಕ್ಕ, ಅಂಥದ್ದು ಏನಾಗಿದೆ ಅಂತ ಬೇಕಾಯ್ತಲ್ಲ. ನೀ ಹೇಳಿದರಲ್ವ ನಂಗೆ ಗೊತ್ತಾಗುದು'' ಎಂದು ಕೇಳಿದಳು.

''ಗೊನ್ನಿದು ಒಂದು ವಿಲೇವಾರಿ ಆಗಬೇಕಲ್ಲ ಗೋದಕ್ಕ'', ಕಣ್ಣೀರಿನ ಎಡೆಯಲ್ಲಿ ರುಕ್ಮಿಣಿ ಉಸುರಿದಳು. ರಾಧಮ್ಮನೂ ದನಿ ಸೇರಿಸಿದಳು, ''ರುಕ್ಮಿಣಿಗೂ ಏನ್ ಕೂಡುದಿಲ್ಲ ಗೋದಕ್ಕ. ಈಗ ಮೂರು ತಿಂಗಳು ಬೇರೆ. ಒಂದು ಹೆಣ್ಣನ್ನ ಸಾಕೂದಂದ್ರೆ ಜವಾಬ್ದಾರಿ ಕಾಣಿ. ನಾಳೆ ಪ್ರತಿಯೊಂದಕ್ಕೂ ತೊಂದರೆಯೇ. ನಮ್ಮ ಸಮಾಜದೊಳಗೆ ಮದುವೆ ಮಾಡಿಕೊಡುವುದೆಂದರೆ ಆಟವ? ಗಂಡು ಹುಡುಕಲಿಕ್ಕೆ ಎಲ್ಲಿ ಹೋಗಬೇಕು?''

'''ನನ್ನ ಮಾಮಿಗಂತೂ ಇಪ್ಪತ್ನಾಕು ಗಂಟೆ ಇದೇ ತಲೆಬಿಸಿ'' ಎಂದು ದೂರಿನ ದನಿಯಲ್ಲಿ ಹೇಳುತ್ತ, ಸೊಂಟದಲ್ಲಿ ಸಿಕ್ಕಿಸಿದ ಟುವಾಲಿಗಾಗಿ ಹುಡುಕತೊಡಗಿದಳು.

''ಇಷ್ಟು ದಿನ ಸಾಕಿದಿ. ಈಗ ನಿಂಗೆ ಬೇಡಾಗಿದೆ'' ಎಂದಳು ಗೋದಾವರಿ.

''ನಂಗೇನ್ ಆ ಮಗು ಹೆಚ್ಚಾಗಲಿಲ್ಲ ಗೋದಕ್ಕ. ಕಂಡವರು ಒಂದೊಂದು ಮಾತು ಹೇಳ್ತೊತ್ತಿಗೆ ನಂಗೆ ಕೈಕಾಲು ಬಲವೇ ತಪ್ಪಿದ ಹಾಗೆ ಆಗ್ತದೆ ಮಾರಾಯ್ತಿ. ಈಗ ಹೆಣ್ಣಿಗೆ ಎಂಟೊರ್ಷ ಹೌದ? ಇನ್ನು ನಾಳೆ ದೊಡ್ಡೋಳಾದ್ರೆ ನಾ ಹೇಗೆ ಏಗುವೆ?'' ಎಂದಳು ರುಕ್ಮಿಣಿ ಟುವಾಲಿನಲ್ಲಿ ಕಣ್ಣು ಒರೆಸುತ್ತ.

''ಆಗ ನಾವ್ಯಾರು ಹೇಳಿದ್ರೂ, ಕೇಳಲಿಲ್ಲ ನೀನು. ದೇವ್ರು ಕೊಟ್ಟ ದೇವ್ರ ಕೊಟ್ಟ, ಅಂತ...''

ಇವರ ಮಾತುಕತೆ ಸಾಗುತ್ತಿರುವಾಗಲೇ, ಹೊರಗಿಂದ ಊಂ...ಊಂ... ಅಂತ ನರಕುವ ದನಿ ಕೇಳಿ, ''ಅಯ್ಯೋ ಸುರುವಾಯ್ತು'' ಎಂದು ಎದ್ದಳು ಗೋದಾವರಿ. ರುಕ್ಮಿಣಿಯೂ ಅವಳ ಒಟ್ಟಿಗೆ ಹೊರಗೆ ಬಂದು ನೋಡಿದರೆ, ಮುಲ್ಲೆಯಲ್ಲಿ ಕಾಲು ನೀಡಿ, ಬಗ್ಗಿ ಕುಳಿತಿದ್ದ ಗೋದಾವರಿಯ ಅತ್ತೆಯ ವ್ಯಕ್ತಿತ್ವವೇ ಬದಲಾಗಿಬಿಟ್ಟಿತ್ತು. ಮುಖ ಮೇಲೆತ್ತಿ, ಸರೂತ ಕುಳಿತು, ತಲೆ ಕೂದಲನ್ನು ಹರಡಿಕೊಂಡು, ಕಣ್ಣ ದೃಷ್ಟಿಯನ್ನು ಮೇಲೆ ಕೆಳಗೆ ಹರಿಸುತ್ತ, ಕೈಕಾಲು ಬಡಿಯುತ್ತ ಹೂಂಕಾರಗೈಯುತ್ತಿದ್ದಳು. ''ನಾನೇ ಅಮ್ಮ. ಅಮ್ಮನ ಊರಿನಿಂದ ಬಂದಿದ್ದೇನೆ'' ಎನ್ನುವ ಗರ್ಜನೆಗೆ ಮಕ್ಕಳೆಲ್ಲ ಜಗಲಿ ಹತ್ತಿ ಸುತ್ತುಕಟ್ಟಿ ನೋಡುತ್ತಿದ್ದರು. ಗೋದ ಮಗನನ್ನು ಕಳಿಸಿ, ಗಂಡನನ್ನು, ಮೈದುನರನ್ನು ಕರೆಸಿದಳು. ''ರುಕ್ಕು, ನೀ ಯಾಕ್ಬಂದಿ ಹೇಳು. ನಡಿ ಒಳಗೆ'' ಎಂದು ರುಕ್ಮಿಣಿಯನ್ನು ಒಳಗಟ್ಟಿದಳು. ಗೋದಳ ಅತ್ತೆ ಹಣೆ ತುಂಬ ಕುಂಕುಮ ಹಚ್ಚಿಕೊಂಡಳು. ತಲೆಯ ಮೇಲೆ ಹೂ ಏರಿಸಿಕೊಂಡಳು. ಬೇರೆಯೇ ಗಂಟಲಿನಿಂದ ಹೊರಟ ಬೇರೊಬ್ಬರ ಸ್ವರದಿಂದ ಮಾತಾಡುವ ಆಕೆಯನ್ನು ಮಕ್ಕಳು ನೋಡಿಯೇ ನೋಡಿದರು. ಆಕೆ ನೀರು ಕೇಳಿ, ಒಂದು ಚೊಂಬು ನೀರನ್ನು ಗಟಗಟನೆ ಕುಡಿದದ್ದು ನೋಡಿ ಹೈರಾಣಾದರು.

ದೊಡ್ಡವರು ಸಣ್ಣವರೆನ್ನದೆ ಎಲ್ಲರೂ ಆಕೆಯ ಕಾಲು ಹಿಡಿದರು... 'ಅಮ್ಮ, ದೇವಿ, ಹಾಗೆಲ್ಲ ಮಾಡಬೇಡ' ಅಂದರು. ಒಮ್ಮೆ ಇಲ್ಲಿಂದ ಹೋಗೆಂದು ದೈನ್ಯದಿಂದ ಬೇಡಿ, ಆಕೆ ಹೇಳಿದ್ದಕ್ಕೆಲ್ಲ ಒಪ್ಪಿ, ಕೈಮುಗಿದು ನಿಂತರು. ಅಂತೂ ಇಂತೂ, ಅತ್ತೂ ಕರೆದೂ ಮಾಡಿ, ಏನೇನೋ ಆಶ್ವಾಸನೆ ಕೊಟ್ಟ ಮೇಲೆ ಬಂದಷ್ಟೇ ರಭಸದಲ್ಲಿ ಇಳಿಯಿತು ಆಕೆಯ ಮೇಲಿನ ಆವೇಶ. ಒಟ್ಟೆಯಾದ ಫುಗ್ಗೆಯಂತೆ ಆಕೆ ಸುಸ್ತಾಗಿ, ಚಪ್ಪಟೆಯಾಗಿ ಮಲಗಿಬಿಟ್ಟಳು. ತಲೆಗೆ ನೀರು





ತಟ್ಟಿ, ಗಾಳಿ ಹಾಕಿ ಎಚ್ಚರಿಸಿದ ಮೇಲೆ, ನಿದ್ದೆಯಿಂದ ಎದ್ದವಳಂತೆ ಕಣ್ಣು ತೆರೆದವಳು, ಸುತ್ತಲಿದ್ದವರನ್ನು ನೋಡಿ, "ಎಂಥ? ಎಂಥಾಯ್ತು?" ಎಂದು ಕಣ್ಣೊರಸಿಕೊಂಡು, "ಅಯ್ಯೊ ನನ್ನ ಕರ್ಮ! ಎಷ್ಟೊತ್ತು ಮಲಗಿಬಿಟ್ನೋ. ಹೌದ ಗೋದ, ಒಂದು ಹನಿ ಕಾಪಿ ಮಾಡಿಕೊಂಡು ಬರ್ತೀಯ? ದೊಂಡೆ ಪಸೆ ಎಲ್ಲ ಆರಿಹೋಗಿದೆ" ಎಂದು ತನ್ನ ಎಂದಿನ ಮಿಣ್ಣನೆಯ ದನಿಯಿಂದ ಕೇಳಿದಳು. ಒಂದು ಚೊಂಬು ನೀರು ಕುಡಿದವಳಿಗೆ, ಅದು ಹೇಗೆ ದೊಂಡೆ ಪಸೆ ಆರುವುದಪ್ಪ ಎಂದುಕೊಂಡವು ಮಕ್ಕಳು.

ಮನೆಗೆ ಬಂದ ಮೇಲೂ ಗೋದಾವರಿ ಹೇಳಿದ ಮಾತೇ ರುಕ್ಮಿಣಿಗೆ ನೆನಪಾಗುತ್ತಿತ್ತು. ಗೋದಕ್ಕ ಹೇಳಿದ್ದು ನೂರಕ್ಕೆ ನೂರು ಸತ್ಯ. ಆಗ ತಾನು ಯಾರ ಮಾತು ಕೇಳಿದ್ದೆ? ಗೊನ್ನಿ ಮೊತ್ತಮೊದಲು ಕೈಗೆ ಬಂದಾಗ ರುಕ್ಮಿಣಿ ಯಾರ ಮಾತನ್ನೂ ಕೇಳುವ ಸ್ಥಿತಿಯಲ್ಲಿರಲಿಲ್ಲ. ಅವಳ ಅತ್ತೆಯೇ ಹೇಳಿದ್ದರು, 'ಈಗ ಹೀಗ್ಮಾಡ್ತಾ ಇದ್ದಿ. ಒಂದಿನ ಪಶ್ಚಾತ್ತಾಪ ಪಡಲಿಕ್ಕುಂಟು ಕಾಣು. ಬರೆದಿಟ್ಕೊ ನನ್ಮಾತು' ಎಂದು. ಮದುವೆಯಾಗಿ ಹನ್ನೊಂದು ವರ್ಷ ಮಕ್ಕಳಿಲ್ಲದೆ ಕೊರಗಿದ ರುಕ್ಮಿಣಿಯ ಕಿವಿ ಆಗ ಪೂರ್ಣ ಕೆಪ್ಪಾಗಿತ್ತು. ಆ ಮಗು ಅವಳಿಗೆ ಸಿಕ್ಕಿದ್ದಾದರೂ ಎಲ್ಲಿ? ಅವರ ಮನೆಯ ಗೇಟಿಗೆ ತಾಗಿ ಇದ್ದ ಸಿಮೆಂಟಿನ ಬಾಣಿಯ ಎಡಕಿನಲ್ಲಿ.

ಒಂದು ಬೆಳಗಿನ ಜಾಮ ಸೂರ್ಯನಿನ್ನೂ ಬಾನೊಡೆದು ಹೊರಬಂದಿರಲಿಲ್ಲ. ಮನೆಯದುರಿನ ರಸ್ತೆಯಲ್ಲಿ ಹೋಗುತ್ತಿದ್ದ ಕ್ಷೌರದ ಸಿದ್ದ, 'ಅಮ್ಮಾ, ಅಮ್ಮಾ, ರುಕ್ಮಿಣಿಯಮ್ಮಾ...' ಅಂತ ಬಾಯಲ್ಲಿ ಎಲೆ ಅಡಿಕೆಯ ಗೊಜ್ಜು ತುಂಬಿ ಉಂಟಾದ ವಿಚಿತ್ರ ಸ್ವರದಲ್ಲಿ ಗಟ್ಟಿಯಾಗಿ ಒದರಿದ್ದ. ಬೆಳಗಾಮುಂಚೆ ತನ್ನ ಕ್ಷೌರದ ಗೂಡು ತೆರೆಯಲಿಕ್ಕೆಂದು ಆ ದಾರಿಯಲ್ಲಿ ಎಂದಿನಂತೆ ಹೋಗುತ್ತ, ಬಾಯ ಕೆಂಪು ರಸವನ್ನು ಉಗಿಯಲಿಕ್ಕೆಂದು ಬಗ್ಗಿದವನ ದೃಷ್ಟಿ, ಆ ಗುಲಾಬಿ ಮಾಂಸದ ಮುದ್ದೆಯ ಮೇಲೆ ಬಿದ್ದು ಗಾಬರಿಯಾಗಿ ಕಿರುಚಿದ್ದ. ಕಸ ಬದಿಗೆ ಮಾಡಿ ನೋಡಿದರೆ, ಬಾಣಿಯೆಡೆಯಲ್ಲಿ ಜಗತ್ತಿಗಿನ್ನೂ ಕಣ್ಣು ತೆರೆದಿರದಿದ್ದ ಗೇಣುದ್ದದ ಜೀವ. ಹರಕು ವಸ್ತ್ರದ ಚೂರಿನಲ್ಲಿ ಸುತ್ತಿಟ್ಟ ಮುದ್ದೆಯನ್ನು ರುಕ್ಮಿಣಿ ಎರಡೂ ಕೈಯ್ಯಲ್ಲಿ ಎತ್ತಿಹಿಡಿದಿದ್ದಳು.

ಜನರು ನೂರು ಮಾತಾಡಿದರು. ಹೆತ್ತ ಕಂದನನ್ನು ಎಸೆಯುವ ಕಟು ಹೃದಯಿಗಳು ಯಾರಪ್ಪ ಎಂದು ಮರುಗಿದವರೇ, ಯಾರದಿರಬಹುದು ಎಂಬ ಊಹಾಪೋಹನೆಗಳಿಗೂ ತೊಡಗಿದರು. ರುಕ್ಮಿಣಿ ಕೈಗೆತ್ತಿಕೊಂಡದ್ದು ನೋಡಿ-ಯಾರಾ, ಎಲ್ಲಿಯಾ, ಪ್ರಭುಗಳಿಗೆ ಬೇಡದ್ದು ಎಂದು ಗೊಣಗಿಕೊಂಡವರೂ ಇದ್ದರು. ಪಾರ್ತಮ್ಮನಂತೂ, ಯಾವ ದರಿದ್ರ ರಕ್ತವೋ, ನಮ್ಮ ಮನೆಯೊಳಗೆ ಯಾಕೆ ಬೇಕಿತ್ತು ಎಂದು ಸ್ವಲ್ಪ ಕೂಗಾಡಲಿಲ್ಲ. ರುಕ್ಮಿಣಿ ಮಾತ್ರ ಈ ಲೋಕದಲ್ಲೇ ಇರಲಿಲ್ಲ. 'ದೇವರು ನಂಗೆ ಮೊಗಿನ್ನ ಕೊಟ್ಟ' ಅಂತ ಅವಳದು ಒಂದೇ ರಾಗ.

ಜಂಬು ವಾಸನೆ ಹೊಮ್ಮುತ್ತಿದ್ದ ಪುರುಮಗುವನ್ನು ಒಳಗೆ ತಂದು ನೀರು ಹೊಯ್ದಳು. ಇನ್ನೂ ದಿನ ತುಂಬದ ಆ ಕೂಸಿನ ಬಾಯಿಗೆ ಮಿಳ್ಳೆಯಲ್ಲಿ ಬೆಚ್ಚನೆಯ ಹಾಲನ್ನು ಬಿಟ್ಟಳು. ಕೈಯಿಂದ ಜಾರುತ್ತಿದ್ದ ಪುಟ್ಟ ಮೈಯನ್ನು, ತನ್ನ ಮೆತ್ತನೆಯ ಹಳೆಯ ಸೀರೆಯಲ್ಲಿ ಸುತ್ತಿ, ನಿದ್ದೆ ಮಾಡಿಸಿದಳು. ಕೂಸು ಅವಳದೇ ಆಯಿತು. ಆಗ ಮನೆಯಲ್ಲಿ ಮದುವೆಗಿದ್ದ ಅವಳ ಇಬ್ಬರು ಅತ್ತಿಗೆಂದಿರು ಇದ್ದರು. ರುಕ್ಮಿಣಿಗೂ ಅರೆಯುವುದು, ಹೆರೆಯುವುದು, ಹಾಲು ಕರೆಯುವುದು ಎಂದು ಮನೆ ಕೆಲಸ ಮಾಡಿ ಮಾಡಿ ಉದಾಸೀನ ಹಿಡಿದಿತ್ತು. ಆ ಕೆಲಸಗಳನ್ನು ಒಂದೊಂದಾಗಿ ಅತ್ತಿಗೆಂದರ ಮೇಲೆ ಒರಗಿಸುತ್ತ, ಅವಳು ಮಗುವಿನ ಕೆಲಸದಲ್ಲಿ ಮೈಮರೆತಳು.

ಮನೆಯ ಏಕತಾನತೆಗೆ ಭಂಗ ತಂದ ಗೊನ್ನಿ ಮೊದಮೊದಲು ಅಸಹನೆ ತಂದರೂ, ದಿನಕಳೆದಂತೆ, ರುಕ್ಮಿಣಿಯ ಗಂಡ ಗೋಪಾಲಕೃಷ್ಣ ಪ್ರಭುವಿಗೂ ಅಭ್ಯಾಸವಾಗತೊಡಗಿತು. ಆಚೀಚೆ ಹೋಗುವಾಗ, ಗೊನ್ನಿಯ ಕೆನ್ನೆಗೆ ಬೆರಳಿನ ತುದಿಯಿಂದ ಹೊಡೆದು, 'ಹಚೀ ಹಚೀ' ಎಂದು ಮಾತಾಡಿಸುತ್ತಿದ್ದ. ಹಾಗೆ ನೋಡಿದರೆ ಅವನು ಮನೆಯಲ್ಲಿ ಇರುತ್ತಿದ್ದುದೇ ಕಡಿಮೆ. ಆಗಿನ್ನೂ ಅವನು ಅಂಗಡಿ ಇಟ್ಟಿರಲಿಲ್ಲ. ಬೆಳಗಾದರೆ ವಸ್ತ್ರದ ಮೂಟೆಯನ್ನು ತಲೆಯ ಮೇಲೆ ಹೇರಿಕೊಂಡು, ಹಳ್ಳಿ ಹಳ್ಳಿಗಳ ಸಂತೆಗೆ ಮಾರಾಟಕ್ಕೆ ಹೊರಡುತ್ತಿದ್ದ. ಒಮ್ಮೆ ಕೋಟೀಶ್ವರ ಜಾತ್ರೆಯಲ್ಲಿ ವಸ್ತ್ರ ಮಾರಾಟಕ್ಕೆ ಹೋದವ, ಬರುವಾಗ, ಮಗುವಿಗೆಂದು ಚೌಕುಳಿ ಚೌಕುಳಿಯ ಕೆಂಪು ಫ್ರಾಕು ತೊಟ್ಟ ಒಂದು ಬಟ್ಟೆಯ ಬೊಂಬೆ ಮತ್ತು ಕಿಣಿ ಕಿಣಿ ಸದ್ದು ಮಾಡುವ ಸ್ಟೀಲಿನ ರಂಗಾಣಿ ತಂದಿದ್ದ.

ಹೀಗೆ ಗೊನ್ನಿಯ ಪ್ರವೇಶವಾಗಿ ವರ್ಷ ಕಳೆಯುವುದರೊಳಗೆ, ರುಕ್ಮಿಣಿ ಬಸುರಿಯಾದದ್ದು ಒಂದು ಮಹಾ ವಿಶೇಷ. ಹನ್ನೆರಡು ವರ್ಷಗಳಿಂದ ಕಾದ ಸಂಭ್ರಮಕ್ಕೆ ಸಂತಸಗೊಂಡ ಎಲ್ಲರೂ, ಗೊನ್ನಿಯ ಕಾಲ್ಗುಣ ಎಂದರು. ಅದೇ ವರ್ಷ ರುಕ್ಮಿಣಿಯ ಅತ್ತಿಗೆಯಂದಿರಿಗೂ ಒಳ್ಳೆಯ ನೆಂಟಸ್ತಿಕೆ ಬಂದು ಮದುವೆಯಾಯ್ತು. ಅದೂ ಗೊನ್ನಿಯ ಲಕ್ಷಣದಿಂದ ಎಂದಾಯಿತು.

ಸಣ್ಣ ಮಕ್ಕಳನ್ನು ಆರೈಕೆ ಮಾಡುತ್ತ, ಆಡಿಸುತ್ತ, ಅತ್ತಿಗೆಂದಿರು ಮದುವೆಯಾಗಿ ಹೋದ ಮೇಲೆ ಮನೆಕೆಲಸದಲ್ಲೂ ಅತ್ತೆಗೆ ನೆರವಾಗುತ್ತ, ಅತ್ತ ಆಗಷ್ಟೆ ಸಂತೆಕಟ್ಟೆಯ ಎದುರು ಹತ್ತಡಿ ಚದರದ ವಸ್ತ್ರದಂಗಡಿಯಿಟ್ಟ ಗಂಡನಿಗೂ ಸಹಾಯ ಮಾಡುತ್ತ ಇದ್ದ ರುಕ್ಮಿಣಿಗೆ, ಗೊನ್ನಿಯ ಕಡೆ ನೋಡಲಿಕ್ಕೂ ಪುರುಸೊತ್ತು ಇಲ್ಲದಂತಾಗುತ್ತಿತ್ತು. ಕೈಯ್ಯಲ್ಲಿ ನಾಲ್ಕು ಕಾಸು ಬಂತೆನ್ನುವುದರ ಹಿಂದೆಯೇ ಕೆಲಸ, ಜವಾಬ್ದಾರಿಗಳೂ ಇಮ್ಮಡಿಯಾಗಿದ್ದವು. ಬೆನ್ನು ಬೆನ್ನಿಗೇ ಎರಡು ಮಕ್ಕಳು ಬೇರೆ. ಈ ಮಧ್ಯ ಮನೆಯನ್ನು ಹಿಗ್ಗಿಸುವ ಕೆಲಸವೂ ನಡೆದಿತ್ತು. ಎದುರಿನ ಸಪೂರದ ಜಗಲಿ, ಮತ್ತೆರಡು ಕೋಣೆಯಷ್ಟೇ ಇದ್ದ ಮನೆಗೆ ಚಚ್ಚೌಕದ ಮುಖಮಂಟಪ ಕಟ್ಟಿಸಿದರು. ಹಿಂದಿನಿಂದ ಮತ್ತೊಂದು ಕೋಣೆಯೂ ಸೇರಿತು.

ಅಂಗಡಿಯಿಟ್ಟ ಮೇಲೆ, ಪೇಟೆಯ ಮಧ್ಯದ ವೆಂಕಟ್ರಮಣ ದೇವಳದ ಕಾರ್ಯಕ್ರಮಗಳಿಗೆ ಹೋಗಿಬರುವದೂ ಹೆಚ್ಚಾಯಿತು. ಕೊಂಕಣಿ ಮಾತಿನ ಆತ್ಮೀಯ ವಾತಾವರಣ, ನಾಲ್ಕು ಜನ ಜಾತಿಬಾಂಧವರ ಒಡನಾಟ ರುಕ್ಮಿಣಿಗೂ ಹಿತವೆನಿಸುತ್ತಿತ್ತು. ಆದರೆ ದೇವಳದಲ್ಲಿ ನಡೆಯುವ ಸಪ್ತಾಹದ ಅಖಂಡ ಭಜನೆಯಲ್ಲೋ, ತೇರಬ್ಬದ ಊಟದಲ್ಲೋ, ಗೊನ್ನಿಯ ಬಗ್ಗೆ ಸಿಗುವ ಸೂಕ್ತ ಸಲಹೆಗಳಿಗೇನೂ ಕೊರತೆಯಿರಲಿಲ್ಲ. ಮೆಲ್ಲಮೆಲ್ಲ ರುಕ್ಮಿಣಿಯ ಮನಸ್ಸು ಹದಗೆಡುತ್ತ ನಡೆದದ್ದು ಹೀಗೆ. ಇತ್ತ, ರುಕ್ಮಿಣಿಯ ಚೊಚ್ಚಲ ಬಾಣಂತನದ ಸಮಯವೇ ಸುರುವಾದ ಗೊನ್ನಿಯ ಹೆಬ್ಬರಳು ಊಜುವ ಚಾಳಿ ಬೆಳೆಯುತ್ತ ಹೋಯಿತು. ಕೆಂಪು ಚೌಕುಳಿ ಅಂಗಿಯ ಬೊಂಬೆಯನ್ನು ಬಗಲಲ್ಲಿ ಚಚ್ಚಿಕೊಂಡು, ಬೆಟ್ಟು ಚೀಪುವ ಅವಳನ್ನು ನೋಡಿದಷ್ಟು ಸಲ, ಎಲ್ಲರೂ, 'ಕೈ ತೆಗಿ ನೋಡುವ' ಎಂದು ಗದರುವವರೇ. ಗೊನ್ನಿಗೆ ಮಾತ್ರ ಕಣ್ಣು ತಪ್ಪಿಸಿಯಾದರೂ ಕೈ ಊಜಿದರೇ ತೃಪ್ತಿ.

ಗೋದ ದೊಡ್ಡನ ಮನೆಯಿಂದ ಬಂದ ಎರಡು ದಿನಕ್ಕೆ, ಹಳೇ ಆಟ ಆಡಿ ಆಡಿ ಬೇಜಾರು ಎಂದು ಮಕ್ಕಳು ಯಾರೋ ದನಿ ತೆಗೆದಾಗ, 'ಹೊಸ ಆಟ ಆಡುವ' ಎಂದಿದ್ದ ರಾಧಮ್ಮನ ಮಗ ಸೀನ. ''ಮೈ ಮೇಲೆ ಬರುವ ಆಟ ಆಡುವ'' ಎಂದು ಹೇಳಿ ಅವನು ಬಾಯಿ ತೆಗೆಯುವುದರೊಳಗೆ, ದೊಡ್ಡ ಕಣ್ಣು ಮಾಡಿ ನೋಡುತ್ತಿದ್ದ ಗೊನ್ನಿ, ಗರಗರ ಕಣ್ಣು ತಿರುಗಿಸಲು ಸುರುವೇ. ಕೈಕಾಲು ನೀಡಿಯಾಯ್ತು, ಪಟಪಟ ಬಡಿದಾಯ್ತು.



ಮಾಲತಿಯಂತೂ ಬಾಯಿಗೆ ಕೈ ಅಡ್ಡವಿಟ್ಟು ಕುಲುಕುಲು ನೆಗಾಡಿದಳು. ಅದನ್ನು ನೋಡಿ ತಮ್ಮ ನಾಗೇಶನೂ, ''ಗೊನ್ನಿನ್ನ ಕಾಣಯೋ, ಗೊನ್ನಿನ್ನ ಕಾಣ'' ಅಂತ ನಗುತ್ತ ಕುಪ್ಪಳಿಸಿದ. ಗೊನ್ನಿ ಕೂದಲು ಬಿಚ್ಚಿ, ತಲೆ ತಿರುಗಿಸಲು ಆರಂಭಿಸಿದ್ದೇ, ಸೀನ ಜಾಗೃತನಾದ. ''ಹೇ ಎಲ್ಲ ಸುರು ಮಾಡಿ. ನೀ ನೀರು ತಾ. ನೀ ಕುಂಕುಮ ತಾ'' ಅಂತ ಆದೇಶ ಕೊಡತೊಡಗಿದ. ಮತ್ತೆಲ್ಲ ಕಾರ್ಯಪ್ರವರ್ತರಾದರು. ಕ್ಷಣಮಾತ್ರದಲ್ಲಿ ಅಲ್ಲೊಂದು ಹೊಸ ಆಟ ಉದ್ಭವಿಸಿದ್ದೆಂದರೆ ಹಾಗೆ.

''ನಾನೇ ಅಮ್ಮ, ನನಗೆಲ್ಲರೂ ಅಡ್ಡ ಬೀಳಿರಿ'' ಎಂದು ಗೊನ್ನಿ ಕಳಕಿದಾಗ, ನಾಗೇಶನಿಗೆ ತಡೆಯಲಿಕ್ಕಾಗಲಿಲ್ಲ. ''ನೀ ಅಮ್ಮನಾ? ನೀ ಗೊನ್ನಿ ಅಲ್ಲನ?'' ಅಂತ ಕಚಗುಳಿ ಇಟ್ಟಂತೆ ನೆಗಾಡಲು ಸುರು. ಸೀನ, ''ಏ ನಾಗು, ಸುಮ್ಮನಿರ'' ಎಂದು ಗದರಿಸಿ, ''ಒಂದು ಚೊಂಬು ನೀರು ತಾ. ಹೋಗು ಮಾಣಿ'' ಎಂದದ್ದೇ ತಡ, ಅವನ ಆ ನಗೆ ಎಲ್ಲಿ ಮಾಯವಾಯಿತೋ. ನೀರಿನ ಚೊಂಬು ಹಿಡಿದು ಬರುವಾಗ ನಾಗೇಶನ ಮೋರೆಯಲ್ಲಿ ಒಂದು ಕಾಳು ನಗೆಯೂ ಇರಲಿಲ್ಲ. ಗೊನ್ನಿಯ ಎದುರು ನೀರಿನ ತಂಬಿಗೆ ಇಟ್ಟು, ಮಾಲತಿ ಹೇಳಿಕೊಟ್ಟಂತೆ, ''ಅಮ್ಮ, ನೀರು ಕುಡಿ ತಾಯೇ'' ಎಂದು ಕೈ ಜೋಡಿಸಿ ನಿಂತ.

ಮಕ್ಕಳಿಗೆ 'ಅಮ್ಮನ ಆಟದ' ರುಚಿ ಹತ್ತಿತು. ಅದರಲ್ಲಿರುವ ನೂತನ ಸಾಧ್ಯತೆಗಳು ಮಕ್ಕಳನ್ನು ಮೋಡಿ ಮಾಡಿದವು. ಪುರುಸೊತ್ತು ಆದಾಗಲೆಲ್ಲ, ಬೇರೆ ಆಟ ಸಾಕಾದಾಗಲೆಲ್ಲ, ಅಮ್ಮನ ಆಟ ಆಡುವ ಅಂತ ಸುರುಮಾಡಿಬಿಡುತ್ತಿದ್ದರು.

ಇತ್ತ ರುಕ್ಮಿಣಿಗೆ ಮಾತು ಕೊಟ್ಟಂತೆ, ಗೋದಾವರಿ ಬಾಯಿ, ಗಣಪನ ವಿಸರ್ಜನೆಯಾದ ನಾಲ್ಕೇ ದಿನಕ್ಕೆ ಬಂದಿಳಿದಳು. ಮಂಗಳೂರಿನಲ್ಲಿರುವ ತನ್ನ ಅತ್ತಿಗೆಯ ಹತ್ತಿರ ವಿಚಾರಿಸಿ, ಅಲ್ಲಿನ ಅನಾಥಾಶ್ರಮದ ಬಗ್ಗೆ ತುದಿಯಿಂದ ಕಡೆವರೆಗೆ ಮಾಹಿತಿ ಪಡೆದು ಬಂದಿದ್ದಳಷ್ಟೇ ಅಲ್ಲ, ಗೊನ್ನಿಯನ್ನು ಅಲ್ಲಿ ಸೇರಿಸುವ ವ್ಯವಸ್ಥೆಯನ್ನೂ ಮಾಡಿ ಬಂದಿದ್ದಳು. ಅಲ್ಲಿ ಬಿಟ್ಟರೆ ಯಾವ ರಗಳೆಯೂ ಇಲ್ಲ. ನಿಂಗೆ ಕೈ ತೊಳಕೊಂಡ ಹಾಗೆ ಆದೀತು ಎಂದೆಲ್ಲ ರುಕ್ಮಿಣಿಗೆ ಅರೆದು ಹೊಯ್ದಂತೆ ತಿಳಿಹೇಳಿದಳು.

ಗೋದಾವರಿಯ ಮಾತು ಕೇಳುತ್ತ, ಕೇಳುತ್ತ ರುಕ್ಮಿಣಿ ಗೊಳ್ಳನೆ ಅಳಲಿಕ್ಕೇ ಸುರು.

''ಶ್ಶೈ, ಈಗ ಏನಾಯ್ತೀಗ?'', ಎಂದಳು ಗೋದಾವರಿ ಕಂಗಾಲಾಗಿ.

''ಇಷ್ಟೊರ್ಷ... ಸಾಕಿ... ಈಗ... ಎಲ್ಲಿಗೋ... ಹೇಗೆ ಅಕ್ಕ ನೀನೆ ಹೇಳು.'' ಅವಳ ಅರ್ಧ ಮಾತು ಬಾಯಲ್ಲಿ ಉಳಿದರೆ, ಉಳಿದರ್ಧ ಕಣ್ಣಿಯಿಂದ ಇಳಿಯುತ್ತಿದ್ದ ಕಣ್ಣೀರಲ್ಲಿ ಅದ್ದಿ ಒದ್ದೆಯಾದವು.

''ಇದು ಒಳ್ಳೆ ಪಂಚಾತಿಕೆ ಆಯ್ತಲ್ಲ ಈ ರುಕ್ಕಂದು. ನೀ ಹೇಳಿದಿ ಅಂತ್ಹೇಳಿ ನಾ ಇಷ್ಟೆಲ್ಲ ಮಾಡಿದೆ. ಈಗ ಕಂಡರೆ ನೀ ಉಪರಾಟ ಹೇಳಲಿಕ್ಕೆ ಸುರು ಮಾಡಿದ್ದೀ. ನಿನ್ನನ ಕಟ್ಕಂಡು ನಾ ಪಟ್ಟ'', ಗೋದಾವರಿಗೆ ಸಿಟ್ಟು ಬರುವುದು ಬಾಕಿ.

''ನಿಂಗೆ ಅರ್ಥ ಆಗುದಿಲ್ಲ'' ಎಂದು ರುಕ್ಮಿಣಿ ಕಣ್ಣನ್ನು ಸೆರಗಿನಿಂದ ತಿಕ್ಕಿ ಒರೆಸಿಕೊಂಡು, ''ಹೋಗಲಿ ಬಿಡು'' ಎಂದವಳು, ''ಯಾವಾಗ ಕರ್ಕಂಡು ಹೋಗುವ ಹಾಗಾದ್ರೆ?'' ಎಂದು ಕೆಂಪು ಕಣ್ಣುಗಳಿಂದ ಅಕ್ಕನನ್ನು ನೋಡುತ್ತ ಕೇಳಿದಳು. ಆ ತಿಂಗಳು ಕಳೆದು, ಮಳೆ ಸ್ವಲ್ಪ ಹಿಂದಾದ ಕೂಡಲೇ, ಗೋದಾವರಿ ಬಂದು ಗೊನ್ನಿಯನ್ನು ಕರೆದುಕೊಂಡು ಹೋಗುವುದೆಂದು ನಿರ್ಧಾರವಾಯಿತು. ಗೋದಾವರಿ ಆಚೆ ಹೋದದ್ದೇ, ರುಕ್ಮಿಣಿಯಿಂದ ರಾಧಮ್ಮ, ರಾಧಮ್ಮನಿಂದ ಸೀನ-ಹೀಗೆ ಸಾಗಿದ ಸುದ್ದಿ ಗೊನ್ನಿಯ ಕಿವಿಗೆ ಬೀಳಲು ತಡವಾಗಲಿಲ್ಲ.

ನಾಗೇಶನಂತೂ, "ನೀ ಮನೆ ಬಿಟ್ಟು ಹೋತಿಯ ಗೊನ್ನಿ?" ಎಂದು ಕೇಳಿದ್ದೂ ಆಯ್ತು.

ಗೊನ್ನಿ, "ನಂಗೇನ್ ಗೊತ್ತು?" ಎಂದು ಅವನಿಗೆ ಹೇಳಿ, ಬಲಗೈಯಲ್ಲಿ ತನ್ನ ಹಳೆ ಬೊಂಬೆಯನ್ನು ಮೈಗೊತ್ತಿಕೊಂಡಿದ್ದಂತೆ, ಎಡಗೈ ಹೆಬ್ಬೆಟ್ಟನ್ನು ಬಾಯೊಳಗಿರಿಸುತ್ತ, ಮುಲ್ಲೆಯರಸಿ ಓಡಿದಳು. ಇಷ್ಟು ವರ್ಷಗಳಲ್ಲಿ ಆ ಹಳೆ ಬೊಂಬೆಯ ಬಣ್ಣವೆಲ್ಲ ಮಾಸಿ, ಮುಖದಲ್ಲಿ ಕಲೆಗಳಾಗಿ, ಕೈಕಾಲುಗಳು ಸಡಿಲಗೊಂಡು ನೇಲುತ್ತಿದ್ದವಾದರೂ, ಆ ರದ್ದಿ ಬೊಂಬೆಯನ್ನು ಚಚ್ಚಿಕೊಂಡು ಕೊಂಬು ಬಾಯಿಗೆ ಹಾಕಿದರೇ ಅವಳಿಗೆ ಮನಸ್ಸಮಾಧಾನ. ಆ ಬೊಂಬೆಯ ನಂತರ ಬಂದ ಮತ್ತೆರಡು ಗೊಂಬೆಗಳು-ಕುಂದಾಪುರ ತೇರಬ್ಬದಲ್ಲಿ ಕೊಂಡುಕೊಂಡ, ಒತ್ತಿದರೆ 'ಪೀಂ' ಎನ್ನುವ ಗುಲಾಬಿ ಪ್ಲಾಸ್ಟಿಕ್ ಬೊಂಬೆ ಒಂದು; ಇನ್ನೊಂದು ಉಡುಪಿ ಪರ್ಯಾಯದಿಂದ ತಂದ ಬಣ್ಣಬಣ್ಣದ ಮರದ ಬೊಂಬೆ-ಸಾಕಷ್ಟು ಒಳ್ಳೆಯ ಅವಸ್ಥೆಯಲ್ಲಿ ಇದ್ದುವಾದರೂ, ಅವಳಿಗೆ ಮಾತ್ರ ಹಳೆಯದೇ ಬೇಕು. ಒಂದು ಸರ್ತಿ, ಪಾರ್ತಮ್ಮ ಹಳೆ ಸಾಮಾನಿನೊಟ್ಟಿಗೆ ಆ ರದ್ದಿ ಬೊಂಬೆಯನ್ನು ಬಿಸಾಡಲು ಹೋದಾಗ, ಗೊನ್ನಿ ಭೂಮಿ ಆಕಾಶ ಒಂದಾಗುವಂತೆ ರಂಪಾಟ ಮಾಡಿ, ಮತ್ತೆ ರುಕ್ಮಿಣಿಯ ಮಧ್ಯಸ್ತಿಕೆಯಲ್ಲಿ ಅದನ್ನು ವಾಪಸ್ಸು ಪಡೆದಿದ್ದಳು.

ಆಶ್ವೀಜ ಮಾಸ ಮುಗಿಯುತ್ತ ಬಂದು, ಮಳೆಯ ಹೊಡೆತ ಸ್ವಲ್ಪ ಕಡಮೆಯಾಗುತ್ತ ನಡೆದಿತ್ತೆನ್ನುವಾಗ, ರುಕ್ಮಿಣಿಯ ಪ್ರಕೃತಿ ಕೆಡುತ್ತ ಸಾಗಿತು. ಪಾರ್ತಮ್ಮನ ಗೈರುಹಾಜರಿಯಲ್ಲಿ ಅವಳಿಗೆ ಕೆಲಸವೂ ಜಾಸ್ತಿಯಾಗಿತ್ತು. ನೀರಲ್ಲಿ ಓಡಿಯಾಡಿ ಒಡೆದು ಸಿಬಿರು ಬಿಡುತ್ತಿದ್ದ ಪಾದಗಳಿಗೆ, ರಾತ್ರಿ ಮಲಗುವಾಗ ವ್ಯಾಸಲೀನು ಹಚ್ಚಿ ತಿಕ್ಕಿಕೊಳ್ಳುತ್ತಾಳಾದರೂ, ಒಮ್ಮೊಮ್ಮೆ ನಿದ್ದೆ ಕಣ್ಣಿನಲ್ಲಿ, ಕೆಲವೊಮ್ಮೆ ಎಚ್ಚರಿರುವಾಗಲೂ ಪಾದದಡಿಯನ್ನು ಕರಕರ ಕೆರೆದುಕೊಳ್ಳುತ್ತಿದ್ದಳು. ಮತ್ತೆ ಅಲ್ಲಿ ರಕ್ತ ಸಿಡಿಯುವಷ್ಟಾಗಿ, ಕಾಲನ್ನು ನೆಲಕ್ಕೆ ಊರದಷ್ಟು ಸೆಳೆತ ಸುರುವಾಗಿ, "ಅಯ್ಯೋ ರಾಮ ರಾಮಾ, ಯಾರಿಗೆ ಬೇಕಪ್ಪ ಈ ಜನ್ಮ"





ಎಂಬ ಅರ್ಥವಿಲ್ಲದ ಗೋಳು ಮಾತುಗಳನ್ನು ಉಸುರತೊಡಗುತ್ತಿದ್ದಳು. ರಾತ್ರಿಯಿಡೀ ನಿದ್ದೆ ಬರಲಿಲ್ಲವೆಂದು, ಎದ್ದದ್ದು ಬಚ್ಚಲು ಮನೆಗೆ ಹೋಗಿ ಬಂದು ಮಾಡುತ್ತಿದ್ದಳು. ಮತ್ತೆ ಮಧ್ಯಾಹ್ನದವರೆಗೆ ದಮ್ಮು ಕಟ್ಟಿ ಕೆಲಸ ಮಾಡಿ, ಮಧ್ಯಾಹ್ನದ ಸೆಕೆಗೆ, ನಡುಕೋಣೆಯ ತಣ್ಣಗಿನ ನೆಲದಲ್ಲಿ, ಮಡಚಿದ ತೋಳಿನ ಮೇಲೆ ತಲೆಯಿಟ್ಟು, ಒಂದರಗಳಿಗೆ ಕಣ್ಣು ಬಾಡಿಸಿ ಬಿದ್ದುಕೊಳ್ಳುತ್ತಿದ್ದಳು... ಆಗೆಲ್ಲ ಗೊನ್ನಿ, ಅವಳ ಕಾಲನ್ನು ತನ್ನ ತೊಡೆಯ ಮೇಲೆ ಎತ್ತಿರಿಸಿ, ದೊರಗು ದೊರಗಾಗಿ ಬಿರುಕು ಬಿಟ್ಟ ಪಾದದ ಹಿಮ್ಮಡಿಗಳಿಗೆ ತೆಳ್ಳಗೆ ಮುಲಾಮು ಹಚ್ಚುತ್ತಿದ್ದಳು.

ಈ ಮಧ್ಯೆ ರುಕ್ಮಿಣಿಗೆ ಎದೆ ಸುಟ್ಟು ಬರುವುದೂ ಜಾಸ್ತಿಯಾಗಿತ್ತು. ಮುಂಚಿನ ಎರಡು ಬಸಿರಲ್ಲೂ ಹೀಗೆ ಎದೆ ಉರಿಯುತ್ತಿತ್ತಾದರೂ, ಈ ಸಲ ಮೇಲಿಂದ ಮೇಲೆ ಹೀಗಾಗಿ, ಊಟವೂ ಸೇರದಂತಾಗಿ, ಅನ್ನ ಕಲಸಿ, ಕಲಸಿ, ಅರ್ಧ ಊಟದಲ್ಲಿ ಎದ್ದು, ಕಲಸಿದ ಅನ್ನವನ್ನು ಕಲಗಚ್ಚಿಗೆ ಸುರಿದುಬಿಡುತ್ತಿದ್ದಳು. ಗೋಪಾಲಕೃಷ್ಣ ಉಡುಪಿಗೆ ಹೋಗಿ ಪಾರ್ತಮ್ಮನನ್ನು ಕರೆದುಕೊಂಡೇ ಬಂದ. ''ರುಕ್ಕ, ಇದೆಂತ ಮಾಡ್ಕೊಂಡಿ ಮಾರಾಯ್ತಿ, ನಿಂದು ಗುರ್ತ ಸಾ ಸಿಕ್ಕುದಿಲ್ಲಲ್ಲ. ದಿನ ತುಂಬ್ತಾ ಬರುವಾಗ ಪುಟು ಪುಟು ಆಗುದು ಬಿಟ್ಟು, ಎಲುಚರ್ಮ ಆಗಿದ್ದಿಯಲ್ಲ, ಅರ್ಥ ಉಂಟೋ?'' ಅಂತ ಪಾರ್ತಮ್ಮ ಮರುಗಿದರು.

ಅವರಿಗೆ ಉತ್ತರ ಕೊಡುವಷ್ಟು ಪುರುಸೊತ್ತು ರುಕ್ಮಿಣಿಗೆ ಇದ್ದರೆ ಆಯ್ತು. ಗೋದಾವರಿ ಬರಲಿಕ್ಕೆ ಉಳಿದದ್ದು ಎಂಟೇ ದಿನಗಳು. ಗೊನ್ನಿಯನ್ನು ಕಳಿಸುವ ತಯಾರಿ ಆಗಬೇಕು ಎಂದು ಅಟ್ಟದಲ್ಲಿದ್ದ ತಗಡಿನ ಪೆಟ್ಟಿಗೆಯನ್ನು ತೆಗೆದು, ಚೆನ್ನಾಗಿ ಒರೆಸಿ, ತಳದಲ್ಲಿ ಹಳೆ ವೃತ್ತಪತ್ರಿಕೆಯೊಂದನ್ನು ಹಾಸಿ, ಗೊನ್ನಿಯ ಅಂಗಿ, ಚಡ್ಡಿ, ಪೆಟಿಕೋಟುಗಳನ್ನು ಕೈಯ್ಯಲ್ಲಿ ಒತ್ತಿ ಒತ್ತಿ ಮಡಚಿ ತುಂಬಿಸಿದಳು. ಮನೆಕೆಲಸದ ನಡುವೆಯೂ ಏನೇನೋ ನೆನಪಾಗಿ, ಸಾಬೂನು ಕರಡಿಗೆಯನ್ನೋ, ಹಣಿಗೆಯನ್ನೋ ತಂದು ಪೆಟ್ಟಿಗೆಯೊಳಗೆ ಜೋಪಾನವಾಗಿ ಇಡುತ್ತಿದ್ದಳು. ಹಾಗೇ ಒಂದೊಂದು ಸಲ, ಕೆಲಸದ ಆಯಾಸಕ್ಕೋ, ಉದಾಸೀನಕ್ಕೋ, ಅದೇ ಪೆಟ್ಟಿಗೆಯ ಮೇಲೆ ಕೈ ಊರಿ, ಅಂಗೈಗೆ ತಲೆಯಾನಿಸಿ, ಸುಮ್ಮನೆ ಕುಳಿತುಬಿಡುತ್ತಿದ್ದಳು. 'ಏನಾಯ್ತ ರುಕ್ಕ?' ಎಂದು ಪಾರ್ತಮ್ಮನೆಲ್ಲಾದರೂ ಕೇಳಿದರೆ, 'ನಂಗೆ ಎಂತಾಗಿದೆ ದಾಡಿ' ಎಂದುಬಿಡುತ್ತಿದ್ದಳು. ನಾಗೇಶನೋ, ಮಾಲತಿಯೋ ಬಂದು, 'ಎಂತ ಆಯ್ತಮ್ಮ?' ಎಂದೋ, 'ಈ ಪೆಟ್ಟಿಗೆ ಯಾರಿಗೆ? ಗೊನ್ನಿಗಾ?' ಎಂದೋ ಕೇಳಿದರಂತೂ, 'ಆಚೆ ಹೋಗ್ರೀರ, ಚಡಿ ಕೊಡ್ಬೇಕ?' ಎಂದು ಸಿಟ್ಟಿಗೇಳುತ್ತಿದ್ದಳು. ಗೊನ್ನಿ ಮಾತ್ರ ಒಂದೇ ಒಂದು ಸಲವೂ, ಆ ಪೆಟ್ಟಿಗೆಯ ಆಸುಪಾಸಿಗೇ ಬಂದಿರಲಿಲ್ಲ. ತನಗೂ ಅದಕ್ಕೂ ಸಂಬಂಧವೇ

ಇಲ್ಲದಂತೆ ಆದಷ್ಟು ದೂರವೇ ಇದ್ದುಬಿಟ್ಟಿದ್ದಳು.

ಹೀಗೇ ಗೊನ್ನಿ ತನ್ನ ಪಾಲಿನ ಕೆಲಸಗಳಲ್ಲಿ, ಆಟಗಳಲ್ಲಿ ಪಾಲ್ಗೊಳ್ಳುತ್ತ, ಎಡೆ ಎಡೆಯಲ್ಲಿ ಹೆಬ್ಬೆಟ್ಟು ಊಜಿಕೊಂಡು ಇರುವಾಗಲೇ ಒಂದು ದಿನ ಯಾರೂ ಎಣಿಸಿರದ ಆ ಸಂಗತಿ ನಡೆದದ್ದು. ಅವತ್ತು, ಮಧ್ಯಾಹ್ನ ಕಳೆದು ಸಂಜೆಯಾಗುವ ಹೊತ್ತಿಗೆ, ಗೊನ್ನಿ ಅಂಗಳದ ನೇಲೆಯಲ್ಲಿದ್ದ ಒಣಗಿದ ವಸ್ತ್ರಗಳನ್ನು ಹೊತ್ತುಕೊಂಡು ಮನೆಯೊಳಗೆ ಬರುತ್ತಿದ್ದಳು. ವಸ್ತ್ರದ ಮೂಟೆಗೇ ಎರಡು ಸಪೂರ ಕಾಲು ಬಂದಂತೆ ನಡೆದುಕೊಂಡು ಅಂಗಳದಿಂದ ನಡುಮನೆಗೆ ಬರುತ್ತಿದ್ದರೆ, ಕಾಲಿಗೆ ವಸ್ತ್ರ ಎಡಕಿ ಧುಡುಂ ಅಂತ ಮುಗ್ಗರಿಸಿ ಬಿದ್ದುಬಿಟ್ಟಳು. ನೇಲುತ್ತಿದ್ದ ಲಂಗದ ಲಾಡಿಗೋ, ಬನಿಯನ್ನಿನ ಕೈಗೋ ಅವಳ ಕಾಲು ಸಿಕ್ಕಿ, ಇಡೀ ಮೂಟೆ ಚಲ್ಲಾಪಿಲ್ಲಿ. ಬಿದ್ದವಳಿಗೆ ಫಕ್ಕನೆ ಏಳುವುದಾಗಲಿಲ್ಲ. 'ಅಮ್ಮಾ...' ಎಂದು ಕೀಂಚಲು ಸ್ವರದಲ್ಲಿ ಕಿರುಚಿದ್ದು ಕೇಳಿ, ಅಲ್ಲೇ ಬೆಂಚಿನ ಮೇಲೆ ಕುಳಿತು, ಗೊನ್ನಿಯ ಹಳೆ ಅಂಗಿಗಳಿಗೆ ಗುಬ್ಬಿ ಹೊಲಿಯುತ್ತಿದ್ದ ರುಕ್ಮಿಣಿ, ''ಎಂಥ ಹೆಣೆ ನಿಂದು ವೇಷ. ಏಳಲ್ಲಿ'' ಎಂದು ಗದರಿದಳು.

ಅಷ್ಟೇ. ಗೊನ್ನಿಗೆ ಅದೇನಾಯ್ತೋ. ಕೈಕಾಲು ಚಾಚಿ ನಡುಗಿಸುತ್ತ, ಕಣ್ಣು ತಿರುಗಿಸಲು ಸುರು. ಕೂದಲು ಬಿಚ್ಚಿ ಕುಳಿತು, 'ನಾನೇ ಅಮ್ಮ' ಎನ್ನತೊಡಗಿದಳು. ''ಏ ಗೊನ್ನಿ ಆಟ ಸುರುಮಾಡಿದಿಯ?'' ಎಂದ ನಾಗೇಶನೂ ಮತ್ತೆ ಅವಳ ಆವೇಶದ ಪರಿ ನೋಡಿ ಸ್ವರ ಮೂಳಿ ಹೋದವನಂತೆ ಬಾಯಿಬಿಟ್ಟು ನಿಂತ. ಒಣಗಿದ ಬನಿಯನ್ನು, ರವಕೆ, ಬೈರಾಸ, ಕೈವಸ್ತ್ರಗಳು ಅವಳ ಕಾಲ ತುಳಿತಕ್ಕೆ ಅತ್ತಿತ್ತ ಹಾರತೊಡಗಿದವು. ಈಗ ರುಕ್ಮಿಣಿಗೂ ಕೈ ಕಾಲು ಬಿಡುವಂತಾಯಿತು. ''ಮಾಮೀ, ಮಾಮೀ, ಇಲ್ಲಿ ನೋಡಿ'' ಎಂದು ಏರು ಸ್ವರದಲ್ಲಿ ಅತ್ತೆಯನ್ನು ಕೂಗಿ ಕರೆದಳು. ಹಿಂದಿನ ಮನೆಯಿಂದ ರಾಧಮ್ಮನೂ ಓಡಿ ಬಂದರು. ಅಂಗಡಿಯಿಂದ ಗೋಪಾಲಕೃಷ್ಣನೂ ಧಾವಿಸಿಬಂದ. ಎಲ್ಲರೂ ಗೊನ್ನಿಯ ಕಾಲಿಗೆ ಬಿದ್ದು, ಒಮ್ಮೆ ಹೋಗು ತಾಯೇ ಎಂದು ಬೇಡಿಕೊಂಡದ್ದಾಯಿತು. ಮಕ್ಕಳಂತೂ ಅರೆ ಕುತೂಹಲ, ಅರೆ ಗಾಬರಿಯಲ್ಲಿ ಅಲ್ಲಲ್ಲಿ ನಿಂತಿದ್ದವು.

ಗೊನ್ನಿಯ ಮುಖಕ್ಕೆ ನೀರೆರೆಚಿ, ಅವಳು ಎದ್ದದ್ದೇ, ನಾಗೇಶನಿಗೆ ತಡೆಯಲಿಲ್ಲ. ''ಎಂಥ ದನ ಗೊನ್ನಿ, ನೀ ಆಟಕ್ಕೆ ಮಾಡಿದ್ದಾ ಅಲ್ವ?'' ಅಂತ ಕೇಳಿಯೇಬಿಟ್ಟ. ಲಂಗ ಎತ್ತಿ ಮುಖ ಒರೆಸಿಕೊಳ್ಳುತ್ತಿದ್ದ ಗೊನ್ನಿ, ಗೋಳಿಕಣ್ಣುಗಳಿಂದ ಅವನನ್ನು ದಿಟ್ಟಿಸಿ ಅಲ್ಲಿಂದೆದ್ದು ಹೋದಳೇ ವಿನಃ, ಹಾಂ ಹೂಂ ಅನ್ನಲಿಲ್ಲ. ನಾಗೇಶ ಪೆಚ್ಚಾದ. ರುಕ್ಮಿಣಿಗೆ ಮಾತ್ರ ತಲೆ ಬೆಚ್ಚಗಾಯಿತು. ''ದೇವ ದೇವಾ. ಇದೆಂಥ ಗ್ರಾಚಾರ ಮಾಮಿ? ಇಷ್ಟು ಸಣ್ಣದಕ್ಕೆ ಆದೆಲ್ಲಿಂದ ಈ ರೋಗ ಬಂತು ಹೇಳಿ'' ಎಂದು ಗರ ಬಡಿದವಳಂತೆ ಕುಳಿತುಬಿಟ್ಟಳು. ''ನೀ ಬಸುರಿ ಹೆಣ್ಣು, ತಲೆಬಿಸಿ ಮಾಡಬೇಡ'' ಎಂದು ಸಮಾಧಾನಪಡಿಸುತ್ತಿದ್ದರಾದರೂ ಸ್ವತಃ ಪಾರ್ತಮ್ಮನಿಗೂ ದಿಕ್ಕುತೋಚದಂತಾಗಿತ್ತು. ರಾಧಮ್ಮ ಬಂದವರು, ''ಅದಕ್ಕೆ ಉಪಾಯ ನಾ ಹೇಳ್ತೆ. ಶುಕ್ರವಾರ ದಿನ ಅಮ್ಮನ ಹಾಡಿ ದೇವಸ್ಥಾನಕ್ಕೆ ಹೋಗಿ ಕೇಳ್ಕಂಡು ಬಂದ್ರೆ, ಎಲ್ಲ ಸಸೂತ್ರ, ಪ್ರಶ್ನೆಗೆ ಉತ್ತರ ಗೊತಾಗ್ತದೆ'' ಎಂದು ಸಲಹೆ ಇತ್ತರು.

ಅಮ್ಮನ ಹಾಡಿಯ ಕಾರ್ಣಿಕದ ಬಗ್ಗೆ ಸಾಕಷ್ಟು ಕೇಳಿದ್ದ ಪಾರ್ತಮ್ಮನಿಗೂ ಅದು ಸಮವೆಂದು ಕಂಡಿತು. ಅಂಗಡಿಯ ಕೆಲಸಕ್ಕೆ ತೊಂದರೆಯೆಂದೆನಿಸಿದರೂ ಗೋಪಾಲಕೃಷ್ಣನಿಗೂ ಒಪ್ಪದೆ ವಿಧಿಯಿರಲಿಲ್ಲ. ರುಕ್ಮಿಣಿಗೆ ಮಾತ್ರ ಅಷ್ಟೊಂದು ಉಮೇದಾಗಲಿಲ್ಲ. ಅಮ್ಮನ ಹಾಡಿಯ ಮಹಿಮೆಯ ಬಗ್ಗೆ ಅವಳೂ ಕೇಳಿದ್ದೇ; ದೇವಳದ ಉತ್ಪತ್ತಿಯಲ್ಲಿ ಶಾಲೆ, ಕಾಲೇಜು, ಆಸ್ಪತ್ರೆಗಳನ್ನು ನಡೆಸುತ್ತಿದ್ದ ಅಲ್ಲಿನ ಧರ್ಮದರ್ಶಿಗಳ ವಿದ್ಯಾರ್ಹತೆ, ಆಧುನಿಕ ಮನೋಭಾವದ ವ್ಯಕ್ತಿತ್ವವೂ







ಸುತ್ತಮುತ್ತ ಊರುಗಳಲ್ಲಿ ಸಾಕಷ್ಟು ಹೆಸರು ಮಾಡಿತ್ತು. ಆದರೆ, ಅಂಗ್ಯ ತೋರಿಸಿ ಅವಲಕ್ಷಣ ಹೇಳಿಸಿಕೊಂಡಂತಾದರೆ ಎಂದು ಅವಳ ಮನಸ್ಸು ಡೋಲಾಯಮಾನ ಸ್ಥಿತಿಯಲ್ಲಿತ್ತು. ಅಂತೂ ಈ ಹೆಳೆಯಲ್ಲಿ ಗೋದಕ್ಕ ಬರುವುದು ನಾಲ್ಕು ದಿನದ ಮಟ್ಟಿಗಾದರೂ ಮುಂದೆ ಹೋಯಿತಲ್ಲ, ಅಷ್ಟಾದರೆ ಅಷ್ಟು ಎಂದು ಮನಸ್ಸಿನಲ್ಲೇ ಸಮಾಧಾನ ಮಾಡಿಕೊಂಡಳು. ಮುಂದಿನ ಶುಕ್ರವಾರ ಪಾರ್ತಮ್ಮ, ಗೋಪಾಲಕೃಷ್ಣ ಮತ್ತು ರುಕ್ಮಿಣಿ, ಸಣ್ಣವೆರಡು ಮಕ್ಕಳನ್ನು ರಾಧಮ್ಮನ ಸುಪರ್ದಿಯಲ್ಲಿ ಬಿಟ್ಟು, ಗೊನ್ನಿಯನ್ನು ಕರೆದುಕೊಂಡು ಅಮ್ಮನ ಹಾಡಿಗೆ ಹೊರಟರು. ರಾಧಮ್ಮನ ಗಂಡ ಅಮ್ಮಣ್ಣ ಪೈಗಳೂ ಜತೆಗೂಡಿದರು. ಅವರಿಗೆ ಅಮ್ಮನ ಹಾಡಿಯ ಪೂಜೆಯ ಮಂಜಯ್ಯ ಭಟ್ಟರದು ಒಳ್ಳೆಯ ಪರಿಚಯವಂತೆ.

ದೇವಸ್ಥಾನ ತಲಪಿದವರು, ಅಮ್ಮನಿಗೆ ಹಣ್ಣುಕಾಯಿ ಮಾಡಿಸಿ, ಜಗಲಿಯಲ್ಲಿ ಕುಳಿತರು. ಪ್ರಶ್ನೋತ್ತರ ಸುರುವಾಗಲು ಗಂಟೆ ತಡವಿತ್ತು. ಅಮ್ಮಣ್ಣ ಪೈಗಳು ಮತ್ತು ಮಂಜಯ್ಯನವರು ಮಾತಾಡಿ ಪರಸ್ಪರ ವಿಷಯ ಸಂಗ್ರಹಿಸಿದರು. 'ತ್ಚು ತ್ಚು' ಎನ್ನುತ್ತ ಮಂಜಯ್ಯನವರು, ಗೊನ್ನಿಯ ಬಗ್ಗೆ-ಪುರುಮಗು ಸಿಕ್ಕಿದಂದಿನಿಂದ ಅನಾಥಾಶ್ರಮದವರೆಗಿನ-ಸಮಸ್ತ ಚರಿತ್ರೆಯನ್ನೂ ಕೇಳಿ ತಿಳಕೊಂಡರು. ''ಇಲ್ಲೇ ನಿಲ್ಲಿ ಏನಡ್ಡಿಲ್ಲ. ಎಲ್ಲ ಸರಿಯಾತ್ತು ಏನಡ್ಡಿಲ್ಲ. ಇವತ್ತಿನ ದಿನ ನೀವು ಎರಡನೆಯವರು. ಬೇಗ ಆಗುತ್ತಪ್ಪ, ಏನಡ್ಡಿಲ್ಲ'' ಎಂದು ಅವರಿಗೆ ಆಶ್ವಾಸನೆ ಇತ್ತು, ಉಳಿದ ಭಕ್ತಾದಿಗಳೊಡನೆಯೂ ಅಷ್ಟಷ್ಟು ಹೊತ್ತು ಮಾತಾಡಿದ ಮಂಜಯ್ಯನವರು, ಶ್ರೀನಿವಾಸ ಆರಾಧ್ಯರನ್ನು ಕರೆತರಲು ಒಳನಡೆದರು. ಸರಿಯಾಗಿ ಆರು, 'ಉಢಾಯ್' ಎಂದು ಹೊಡೆಯುವಾಗ, ಧರ್ಮದರ್ಶಿ ಶ್ರೀನಿವಾಸ ಆರಾಧ್ಯರು ದೇವಳಕ್ಕೆ ಕಾಲಿಡುವರೆಂದೂ, ಅದಕ್ಕೆ ಸರಿಯಾಗಿ ಪಾತ್ರಿಗೆ ಮೈಮೇಲೆ ಬರುವುದೆಂದೂ ಮಂಜಯ್ಯನವರಿಂದ ಪಡೆದ ಮಾಹಿತಿಯನ್ನು ಅಮ್ಮಣ್ಣ ಪೈಗಳು ಗೋಪಾಲಕೃಷ್ಣನಿಗೆ ವರ್ಗಾಯಿಸಿದರು.

ಆರೂ ಬಾರಿಸಿತು. ಧರ್ಮದರ್ಶಿಗಳ ಆಗಮನವೂ ಆಯಿತು. ಅವರ ಹಿಂದೆ ಪಾತ್ರಿಯೂ ಬಂದನೇ. ಅಂಗಳಕ್ಕೆ ಕಾಲಿಡುವಾಗಲೇ ಪಾತ್ರಿಗೆ ಮೈ ನಡುಕ ಸುರುವಾಗಿತ್ತು. ಸೆರಗು ಹೊದ್ದು, ಭಯಭಕ್ತಿಯಲ್ಲಿ ಕೈ ಜೋಡಿಸಿ ನಿಂತ ಪಾರ್ತಮ್ಮ, ರುಕ್ಮಿಣಿಗೆ ಸನ್ನೆಯಲ್ಲೇ ಧೈರ್ಯ ಹೇಳುತ್ತಿದ್ದರು. ಮನೆ ಬಿಟ್ಟಲ್ಲಾಗಾಯ್ತು, ಗೊನ್ನಿಯ ಕೈ ಹಿಡಿದೇ ಇದ್ದ ರುಕ್ಮಿಣಿ, ಈಗ ಎರಡೂ ಕೈಯಿಂದ ಅವಳ ಭುಜವನ್ನು ಬಳಸಿ ಹಿಡಿದಂತೆ ಕೈ ಜೋಡಿಸಿ ನಿಂತಳು. ಬೆಳ್ಳಗೆ, ಕಾಯಿಕಡಿಯಂತಹ ಧೋತಿ, ಶಾಲು ಧರಿಸಿ ಬಂದ ಧರ್ಮದರ್ಶಿಗಳನ್ನು ದೂರದಿಂದಲೇ ನೋಡಿದ್ದ ರುಕ್ಮಿಣಿ, ''ನನ್ನ ಮಗಳನ್ನು ಕಾಪಾಡಿಯಪ್ಪ'' ಎಂದು ಮನಸ್ಸಿನೊಳಗೇ ಬೇಡಿಕೊಂಡಳು. ಗೊಜ ಗೊಜ ಎಂದು ತೊದಲಿದ ಪಾತ್ರಿಯ ಮಾತುಗಳು ಮನುಷ್ಯಾದವನಿಗೆ ಅರ್ಥವಾಗುವ ಭಾಷೆಯಲ್ಲಿ ಇರಲಿಲ್ಲ. ಅವನಿಗೆ ಸರಿಯಾಗಿ ಮಾತಾಡಲಿಕ್ಕೇ ಬರುವುದಿಲ್ಲವೋ, ಮೈಮೇಲೆ ಬಂದವ್ವರಿಂದ ಹಾಗೋ, ರುಕ್ಮಿಣಿ ದಂಪತಿಗಳಿಗೆ ಒಂದೂ ಗೊತ್ತಾಗಲಿಲ್ಲ. ಆಶ್ಚರ್ಯವೆಂದರೆ ಶ್ರೀನಿವಾಸ ಆರಾಧ್ಯರಿಗೆ ಮಾತ್ರ ಕೂಲಂಕಶವಾಗಿ ಒಂದಕ್ಷರ ಬಿಡದೆ ಅರ್ಥವಾದಂತಿತ್ತು. ಅವರು ಸ್ಪಷ್ಟವಾಗಿ, ಸಂಸ್ಕೃತಮಯ ಕನ್ನಡದಲ್ಲಿ, ಆ ಪಾತ್ರಿಯ ನುಡಿಗಳನ್ನು ತರ್ಜುಮೆ ಮಾಡಿ ಹೇಳಿದರು. ಪಾತ್ರಿಯ ಕೇವಲ ಎರಡು ನಿಮಿಷಗಳ 'ಗೊಜ ಗೊಜ'ಕ್ಕೆ ಪೂರ್ತಿ ಇಪ್ಪತ್ತು ನಿಮಿಷಗಳ ಅರ್ಥ ಹೇಳಿದ ಧರ್ಮದರ್ಶಿಗಳನ್ನು ಎಲ್ಲರೂ ಕೊಂಡಾಡುವವರೇ.

ಒಟ್ಟಾರೆ ಅವರು ಹೇಳಿದುದರ ತಾತ್ಪರ್ಯ ಹೀಗಿತ್ತು: ''ಮಗುವನ್ನು ಮನೆಯಿಂದ ಕಳಿಸುವುದು ಅಮ್ಮನ ಹಾಡಿ ದೇವಿಗೆ ಏನೇನೂ ಇಷ್ಟವಿಲ್ಲ. ಅಮ್ಮನವರು ಸಿಟ್ಟಿಗೆದ್ದಿದ್ದಾಳೆ. ಕೂಸು

ಬಂದ ಮೇಲೆ ನಿಮಗೆ ಶುಭವಾಗಿದೆ, ಮನೆಯಲ್ಲಿ ಸುಖ ಸಮೃದ್ಧಿ ಹೆಚ್ಚಿದೆ, ಕಲ್ಯಾಣವಾಗಿದೆ. ಮಗುವನ್ನು ಹೊರಗಟ್ಟುವುದೆಂದರೆ ನಾಶದ ದಾರಿಗೆ ಕಾಲಿಟ್ಟಂತೆ. ಮನೆಗೆ ಬಂದ ಲಕ್ಷ್ಮಿ ಅವಳು. ಹೊರಗೆ ಹಾಕಬೇಡಿ. ಮನೆಮಗಳಂತೆ ಸಾಕಿರಿ. ಮುಖ್ಯವಾಗಿ ಶಾಲೆಗೆ ಕಳಿಸಿ. ಒಳ್ಳೆಯ ವಿದ್ಯಾಭ್ಯಾಸ ಕೊಡಿಸಿರಿ-ಇದೇ ಅಮ್ಮ ನಿಮಗೀಯುವ ಆದೇಶ. ಅಮ್ಮನಿಗೆ ಸಂತೋಷವಾಗಬೇಕಾದರೆ ಅಮ್ಮ ನಿಮಗಿತ್ತ ಈ ಮಗಳನ್ನು ನಿಮ್ಮ ಮಗಳಂತೆ ನೋಡಿಕೊಳ್ಳಿರಿ.'' ಇದಕ್ಕೆಲ್ಲ ಅಮ್ಮನ ಪಾತ್ರಿ, ಮಂಡೆ ಆಡಿಸುತ್ತಿದ್ದಂತೆ, ತನಗೆ ಒತ್ತಿ ನಿಂತ ಗೊನ್ನಿಯನ್ನು ಬಳಸಿಕೊಂಡೇ ಇದ್ದ ರುಕ್ಮಿಣಿ, ಅವಳನ್ನು ಇನ್ನಷ್ಟು ಹತ್ತಿರ ಎಳೆದುಕೊಂಡಳು. ಪ್ರಸಾದ ಕೊಡುವಾಗ ಆರಾಧ್ಯರು, ''ಇವತ್ತಿನಿಂದ ನಿನ್ನ ಹೆಸರು ಭುವನ, ಭುವನೇಶ್ವರಿ, ಗೊತ್ತಾಯ್ತ?'' ಎನ್ನುತ್ತ ಆಶೀರ್ವಚನ ನೀಡಿದರು.

ಈಗ ಭುವನೇಶ್ವರಿಯು, ಬಗಲಲ್ಲಿರುವ ಉದ್ದ ಲಾಡಿಯ ಚೀಲವನ್ನು ಸರಿಮಾಡಿಕೊಳ್ಳುತ್ತ, ಮಾಲತಿ ಮತ್ತು ನಾಗೇಶರ ಕೈ ಹಿಡಿದು ರಸ್ತೆ ದಾಟಿಸುತ್ತ, ಮೆಟ್ಟಿನ ಟಪಟಪ ಸದ್ದಿನೊಂದಿಗೆ ಮೆಟ್ಟಿಲು ಹತ್ತುತ್ತ, ಶಾಲೆಗೆ ಹೋಗುತ್ತಿದ್ದಾಳೆ. ಮುಖದ ತುಂಬ ಹಾರಾಡುತ್ತಿದ್ದ ಅವಳ ಒಣ ಕೂದಲುಗಳು ಈಗ ಹೇಳಿದ ಮಾತು ಕೇಳುತ್ತವೆ. ರುಕ್ಮಿಣಿಯ ದೇಹಪ್ರಕೃತಿಯೂ ಪಾರ್ತಮ್ಮನ ಆರೈಕೆಯಲ್ಲಿ ಸಾಕಷ್ಟು ಸುಧಾರಿಸಿದೆ. ಕಾಲು ನೋವು ಪೂರ್ಣ ಗುಣವಾಗಿದ್ದರೆ, ಎದೆ ಸುಟ್ಟು ಬರುವುದು ಅವಳಿಗೆ ಮರೆತೇ ಹೋದಂತಾಗಿದೆ. ಮುಖ, ಮೈ ತುಂಬಿಕೊಂಡು ಉರುಟುರುಟಾಗಿರುವ, ರುಕ್ಮಿಣಿಯು ಬೆಳಿಗ್ಗೆ ಎದ್ದವಳೇ, ಭುವನಳ ಕೂದಲಿಗೆ ತೆಂಗಿನೆಣ್ಣೆ ನ್ಯಪ್ಪಳಿಸಿ, ಕೀಸಿ ಬಾಚಿ, ಒಪ್ಪ ಮಾಡಿ ಕುದುರೆ ಬಾಲ ಕಟ್ಟಿಬಿಡುತ್ತಾಳೆ. ಹಿರಿಯಕ್ಕನ ಮುಖ ಹೊತ್ತು, ಮಕ್ಕಳನ್ನು ಸಂಭಾಳಿಸಿಕೊಂಡು, ಶಾಲೆಯ ಎತ್ತರೆತ್ತರದ ಮೆಟ್ಟಿಲುಗಳನ್ನು ಏರುವಾಗ ಭುವನಳ ಕಣ್ಣಬೊಂಬೆಗಳು ಹಣತೆಯ ದೀಪದ ಕುಡಿಗಳಂತೆ ಹೊಳೆಯುತ್ತಿರುತ್ತವೆ.



ತಳದಲ್ಲಿ ಹಕ್ಕಿ [illegible]

ಮಿತ್ರಾ ವೆಂಕಟ್ರಾಜ್.



ಪತಿ ವೆಂಕಟ್ರಾಜರೊಂದಿಗೆ ಮಿತ್ರಾ











# ದೊಡ್ಡೇರಿ ವೆಂಕಟಗಿರಿರಾವ್

# ಅವಳ ಮನಸ್ಸು





ಕತೆ, ಕಾದಂಬರಿ, ಕವಿತೆ, ಹಾಡು, ಪ್ರವಾಸ, ಪ್ರಸವ ವಿಜ್ಞಾನ, ಲೈಂಗಿಕ ಶಿಕ್ಷಣ, ಛಾಯಾಚಿತ್ರಕಲೆ, ಚಿತ್ರಲೇಖನ ಇವೆಲ್ಲ ಬರೆವಣಿಗೆಯಲ್ಲಿ ಸಿದ್ಧಹಸ್ತರಾಗಿ, ವಿಭಿನ್ನ ಕ್ಷೇತ್ರಗಳಲ್ಲಿ ಅಪೂರ್ವಸಿದ್ಧಿ ಸಾಧಿಸಿರುವ ಡಾ॥ ದೊಡ್ಡೇರಿ ವೆಂಕಟಗಿರಿ ರಾವ್ ಕಳೆದ ಅರವತ್ತು ವರ್ಷಗಳಿಂದ ಹಳ್ಳಿಗಾಡಿನಲ್ಲಿದ್ದುಕೊಂಡು, ವೈದ್ಯಕೀಯ ಸೇವೆ ಸಲ್ಲಿಸುತ್ತಾ, ಒಂದಿಗೇ ಮೇಲೆ ಕಾಣಿಸಿದ ಎಲ್ಲ ಸಾಧನೆಗೈದವರು. ಇಂದಿನವರೆಗೆ ಅವರ ಹನ್ನೊಂದು ಕಾದಂಬರಿ, ನಾಲ್ಕು ಕಥಾಸಂಗ್ರಹಗಳು, ಚಿತ್ರಕಲೆ ಮತ್ತು ವೈದ್ಯಕೀಯ ವಿಜ್ಞಾನಕ್ಕೆ ಸಂಬಂಧಿಸಿದ ಹಲವು ಗ್ರಂಥಗಳು ಪ್ರಕಟವಾಗಿವೆ. ಬಿಳಿ ದಾಸವಾಳದಂತಹ ಭಾವತೀವ್ರ ಬರೆವಣಿಗೆಗೆ ಕೆಂಪು ಕೇಸರದ ಚಿಂತನೆ ಬೆರೆಸುವ ರಾವ್ ಅವರ ಶೈಲಿ ಪಾರದರ್ಶಕ. ಅವರ 'ಸಂಪ್ರದಾನ', 'ದೃಷ್ಟಿದಾನ' ಕಾದಂಬರಿಗಳು ಅತೀವ ಜನಪ್ರಿಯತೆ ಗಳಿಸಿದವು. 'ಅವದಾನ' ಕಾದಂಬರಿ ಕಣಗಾಲರ ಕೈಗೆ ಸಿಕ್ಕಿ 'ಅಮೃತ ಘಳಿಗೆ' ಚಲನಚಿತ್ರವಾಯಿತು. ಸಾಹಿತ್ಯದಷ್ಟೇ ಛಾಯಾಚಿತ್ರಕಲೆಯ ಮೇಲೂ ಅಪೂರ್ವ ಹಿಡಿತ, ಹೆಸರು ಸಾಧಿಸಿರುವ ದೊಡ್ಡೇರಿ ವೆಂಕಟಗಿರಿರಾವ್‌ರ 'ಭಾವಾಭಿವ್ಯಂಜಕ ಛಾಯಾಚಿತ್ರಕಲೆ' (1997) ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದೆ. ದೇಶವಿದೇಶಗಳ ಪ್ರವಾಸ ಇವರ ಕ್ಯಾಮರಾಕಣ್ಣಿನ ಹವ್ಯಾಸಗಳಲ್ಲೊಂದು. ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ (1996) ಮತ್ತು ಕರ್ನಾಟಕ ರಾಜ್ಯ ಪ್ರಶಸ್ತಿ (1982) ಪಡೆದಿರುವ ಡಿ.ವಿ. ರಾವ್, ಈಗ, ಎಂಬತ್ತೆಂಟರ ಇಳಿವಯಸ್ಸಿನಲ್ಲೂ ಸಾಹಿತ್ಯ, ಕಲೆ ಸಂಸ್ಕೃತಿಯ ಕುರಿತ ತಮ್ಮ ಆಸ್ಥೆಯನ್ನು ಚುರುಕಾಗಿಟ್ಟುಕೊಂಡಿದ್ದಾರೆ.

1946ರಲ್ಲಿ ಪ್ರಕಟಗೊಂಡ ಅವರ ಈ ಕತೆ, ತನ್ನ ರಮ್ಯತೆ, ಲಘು ವಿನೋದ, ಅನಿರೀಕ್ಷಿತ ಕೊನೆ ಮತ್ತು ಸರಳ ಚಿತ್ರವತ್ತಾದ ಶೈಲಿಯಿಂದ ಆಧುನಿಕವಾಗಿದೆ.




ಅವಳಿಗೆ ಆ ದಿನ ಅಸಾಧ್ಯ ಸಿಟ್ಟು ಬಂದಿತ್ತು. 'ನಾಯಿ ಬಾಲ ಎಷ್ಟಾದರೂ ಡೊಂಕೇ...' ಛೀ, ಛೀ, ತನ್ನ ಸ್ವಾಮಿಯನ್ನು ನಾಯಿ ಬಾಲಕ್ಕೆ ಹೋಲಿಸಿದೆನಲ್ಲಾ ಎಂದು ಅವಳಿಗೆ ಫಕ್ಕನೆ ಅರಿವಾಗಿ, ಮನಸ್ಸು ಸ್ವಲ್ಪ ಬೆಚ್ಚಿತು. ಎದುರಿನಲ್ಲಿದ್ದ ಅವರ ಫೋಟೋಕ್ಕೆ ಎರಡೂ ಹಸ್ತ ಜೋಡಿಸಿ ನಮಸ್ಕರಿಸಿ, ಕಿವಿ ಮುಟ್ಟಿಕೊಂಡಳು.

ಆ ದಿನ ಬೆಳಿಗ್ಗೆ ಅವರು ಆಸ್ಪತ್ರೆಗೆ ಡ್ಯೂಟಿ ಮೇಲೆ ಹೊರಡುವಾಗ, ಮಧ್ಯಾಹ್ನ ಊಟಕ್ಕೆ ಮನೆಗೆ ಬನ್ನಿ ಎಂದು ಎರಡೆರಡು ಬಾರಿ ತಾನು ಹೇಳಿದ್ದರೂ, ಅವರು ಐದು ಗಂಟೆ ಹೊಡೆದು ಎಷ್ಟೋ ಹೊತ್ತಾದರೂ ಸಹ ಬಂದಿಲ್ಲ. ಯಾರಿಗೆ ತಾನೆ ಸಹಿಸಲಾದೀತು? ಬಾಚಿದ್ದ ತಲೆಯನ್ನು ಮತ್ತೊಮ್ಮೆ ನೇವರಿಸಿಕೊಂಡಳು. ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತ, ತನ್ನ ರೂಪ ವೈಶಿಷ್ಟ್ಯದ ಕಡೆ ಮನಸ್ಸನ್ನು ಎಳೆಯಲು ಪ್ರಯತ್ನಿಸಿದಳು. ಆದರೆ ಬೇಸರಿಸಿದ ಮನಸ್ಸು ಪುನಃ ಅವಳನ್ನು ಅವರ ಕಡೆಗೇ ಸೆಳೆಯಿತು.

''ಹುಟ್ಟುಗುಣ ಕಟ್ಟಿಗೆಯಿಂದ ಹೊಡೆದರೆ ಹೋದೀತೆ? ಯಾವಾಗಲೂ ತಮ್ಮದೇ ತಮ್ಮದು. ಗಂಡಸರಿಗೇನು, ಯಾರಾದರೂ ಸ್ನೇಹಿತರು ಅನಿಸಿಕೊಂಡವರು ಸಿಕ್ಕೇಸಿಗುತ್ತಾರೆ. ಯಾವುದಾದರೂ ಹೋಟಲು ಅಥವಾ ಮನೆಯಲ್ಲಿ ಕಾಫಿ ಕುಡಿಯುತ್ತಾರೆ. ಮನೆಗೇ ಯಾಕೆ ಬರಬೇಕು, ಹುಂ.''

ಏನೋ ಹೊಸ ವಿಚಾರ ಮನಸಿನಲ್ಲಿ ಭಾಸವಾದಂತೆ, ಕನ್ನಡಿಯನ್ನು ಎತ್ತಿ ಬೇರೆ ಕಡೆ ಇಟ್ಟಳು.

''ನನ್ನೊಡನೆ ಮಾತಾಡುತ್ತಿದ್ದರೆ ಎಷ್ಟು ಸೊಗಸಾದೀತು? ಮೊದಲಾಗಿದ್ದರೆ, 'ಹೊಸದರಲ್ಲಿ

ಆಗಸ ಗೋಣ ಎತ್ತಿ ಎತ್ತಿ ಒಗೆದ' ಎನ್ನೋ ಹಾಗೆ ಹತ್ತಿರ ಹತ್ತಿರ ಇರುತ್ತಿದ್ದರು. ಈಗ ನನ್ನ ಸಂಗಡ ಮಾತಾಡಿದರೆ ಎಲ್ಲಿ ಅಷ್ಟು ಸೊಗಸು, ಸೊಂಪು ಆಗಿರುತ್ತೆ'' ಎಂದುಕೊಳ್ಳುತ್ತ ರೂಮಿನಿಂದ ಹೊರಗೆ ಬಂದಳು. ಹೊರಜಗಲಿಗೆ ಹೋಗಿ ಹತ್ತನೆ ಸಲ ರಸ್ತೆಯ ಅತ್ತಿತ್ತ ನೋಡಿದಳು. ಯಾರು ಬರುವುದೂ ಕಾಣಲಿಲ್ಲ. ಥಟ್ಟನೆ ಅರಿವು ಮೂಡಿತು. ಅವರು ಬಂದರೆ ಮೋಟಾರ್ ಸೈಕಲ್ ಶಬ್ದ ಕೇಳುವುದಿಲ್ಲವೆ? ಏನು ನಡೆದು ಬರುತ್ತಾರೆಯೆ? ಈ ಆಲೋಚನೆ ಬಂದು, ತಾನು ಹತ್ತು ಬಾರಿ ಹೊರಗೆ ಬಂದು ಅತ್ತಿತ್ತ ನೋಡಿದುದರ ಅರಿವಾಗಿ, ತನ್ನಷ್ಟಕ್ಕೆ ತಾನೆ ನಕ್ಕು ಒಳಗೆ ಹೋದಳು.



ಮನಸ್ಸಿನ ರೀತಿಯೇ ಬಹಳ ವಿಚಿತ್ರ. ಒಬ್ಬೊಬ್ಬರದು ಒಂದೊಂದು ತರಹ. ಕಾರಣ ಇದ್ದೂ ಅಥವಾ ಇಲ್ಲದೆಯೊ ಬೇಸರ ಉಂಟಾಗುವುದುಂಟು. ಒಮ್ಮೆ ಬೇಸರಕ್ಕೆ ಮನಸ್ಸು ಕೊಟ್ಟರೆ ಸರಿ, ಅದೇ, ಮನಸ್ಸನ್ನು ಜಿಗಣೆ ಹಿಡಿದ ಹಾಗೆ ಹಿಡಿಯುತ್ತೆ. ಇಲ್ಲಸಲ್ಲದ ಯೋಚನೆ ಬರುತ್ತದೆ. ಅವಳೇನೂ ಇದಕ್ಕೆ ಹೊರತಾದವಳಲ್ಲ. ಅವಳ ಮನಸ್ಸಿನ ಸ್ಥಿತಿಯೂ ಹಾಗೇ ಆಗಿತ್ತು. ಇಷ್ಟು ಹೊತ್ತಾದರೂ ಮನೆಗೆ ಬರಲಿಲ್ಲವಲ್ಲ ಎಂದು ತನ್ನಷ್ಟಕ್ಕೇ ಹೇಳಿಕೊಂಡಳು. ಒಮ್ಮೆ ಆವರಿಸಿದ ಬೇಸರ ಕ್ಷಣ ಕ್ಷಣಕ್ಕೂ ಹೆಚ್ಚಿತು.

ಹಿಂದೆ ಇದೇ ತರಹ ನಿರಾಸೆ, ಕಾಯುವುದು ಎರಡು ಬಾರಿ ಬಂದಿತ್ತು. ಕೆಲವು ದಿನಗಳ ಹಿಂದೆ ಒಮ್ಮೆ, ಅವರಿಗೆ ಚೀನೀಕಾಯಿ ಕಡುಬು ಇಷ್ಟ ಎಂದುಕೊಂಡು ಅದನ್ನು ಮಾಡಿದ್ದಳು. ಸಂಜೆಯಾದರೂ ಬಾರದಿದ್ದುದು ಕಂಡು ಕಪೋಲಗಳ ಮೇಲೆ ಕಣ್ಣೀರಿನ ಹನಿಗಳು ಬಿದ್ದಿದ್ದವು. ಆದರೆ ಅಂದು ಇಷ್ಟೊಂದು ಬೇಸರ ಆಗಿರಲಿಲ್ಲ. ನಿರಾಸೆ ಆಗಿರಲಿಲ್ಲ. ಏಕೆಂದರೆ ಅವಳ ಮನಸ್ಸಿನ ಓಟ ಹಾಗಿತ್ತು.

''ಏನೋ ಕೆಲಸ ತುಂಬಾ ಇದೆಯೋ ಏನೋ, ಅಥವಾ ಯಾವುದಾದರೂ ಹಳ್ಳಿಗೆ ಹೋಗಿದ್ದಾರೆಯೊ ಅಥವಾ ಕ್ಲಿನಿಕ್‌ನಲ್ಲಿ ಪೇಶಂಟ್ಸ್ ಹೆಚ್ಚಿದ್ದಾರೇನೊ, ಅವರನ್ನೆಲ್ಲಾ ಬಿಟ್ಟು ಕಡುಬು ಹಳಸುತ್ತೆ ಎಂತ ಮನೆಗೆ ಬರಲಾದೀತೆ''

-ಯೋಚನೆ ಬಂದು ಸಮಾಧಾನ ಉಂಟಾಗಿತ್ತು.

ಆದರೆ ಈ ದಿನ ಹಾಗಲ್ಲ. ಮನಸ್ಸಿನ ಚಿಂತನೆ ಬೇರೊಂದು ದಾರಿ ಹಿಡಿದಿತ್ತು. ಆ ಮುಹೂರ್ತದಲ್ಲಿ ಅವಳು ಅದನ್ನು ಗುರುತಿಸಿಕೊಂಡು ಸಮಾಧಾನಪಡಲಾಗಲಿಲ್ಲ. ಅವರು ಗೆಳೆಯರೊಡನೆ ಕೂಡಿಕೊಂಡು, ಎಲ್ಲೋ ಹೋಟಲಲ್ಲಿ ತಿಂದು, ಯಾರ ಜೊತೆಗಾದರೂ ಇಸ್ಪೀಟು ಆಡುತ್ತ ಕುಳಿತಿರಬಹುದು ಎಂಬ ಯೋಚನೆಯು, ಹೇಗೋ ಅನಿರೀಕ್ಷಿತವಾಗಿ, ಅವಳ ಮನಸ್ಸನ್ನು ಬಲವಾಗಿ ಹಿಡಿದಿದೆ. ಸರಿ, ಮುಂದೆ ಪ್ರತಿಕ್ಷಣ ಕ್ಷಣಕ್ಕೂ ಬರುವ ಯೋಚನೆಗಳೆಲ್ಲಾ ಅದಕ್ಕೆ ಪುಷ್ಟಿ ಕೊಡುತ್ತವೆ. ಏನಾದರೂ ಅಗತ್ಯವಾದ ಕೆಲಸ ಇದ್ದೀತು, ಮುಗಿದ ಕೂಡಲೆ ಬಂದಾರು ಎಂಬ ಸಮಾಧಾನದ ಯೋಚನೆ ಸುಳಿದೇ ಇಲ್ಲ.

ಹೊತ್ತು ಜಾರಿದಂತೆ ಸಿಟ್ಟು ಏರತೊಡಗಿತು. ಬಾಚಿದ್ದ ತಲೆಯನ್ನು ಕೆರೆದುಕೊಳ್ಳಲೇ ಅನ್ನಿಸಿತು. ಏತಕ್ಕಾಗಿ ಗಂಟೆಗಟ್ಟಲೆ ಕಷ್ಟಪಟ್ಟು ಕುಂಕುಮದ ಬೊಟ್ಟನ್ನು ಅಂದವಾಗಿ ಇಟ್ಟುಕೊಂಡೆ ಅನಿಸಿತು. ಕುಂಕುಮ ಇಡುವುದು ಮುತ್ತೈದೆಯ ಲಕ್ಷಣವಂತೆ. ಹಿರಿಯರು ಹೇಳಿಟ್ಟ, ಅಳಿಸಲಾಗದ ಲಕ್ಷಣ ರೇಖೆ. ಹೌದು, ಆದರೆ ಅದು ಅಷ್ಟೇ ಅಲ್ಲದೆ ಅವರ, ಜನರ, ಸಮಾಜದ ಕಣ್ಣನ ಸೆಳೆಯುವುದೂ ಅಲ್ಲವೆ ಅನ್ನಿಸಿತು.



ಎದಿರುಮನೆಗೆ ಹೋಗಿ ಹರಟೆ ಹೊಡೆಯೋಣ ಎಂದರೆ ಅದೂ ಸರಿಯಾಗಲಾರದು, ಮನಸ್ಸನ್ನು ಬೇರೆ ಕಡೆ ತಿರುಗಿಸಲಾರದು. ಅವರಾದರೂ ಇದಕ್ಕೆ ಸರಿಹೊಂದುವವರೆ, ಸುತರಾಂ ಇಲ್ಲ. ಅವರಿಗೆ ತಮ್ಮದೇ ತಮ್ಮದು. ತಾವು ಮಾತಾಡುವಾಗ ಬೇರೊಬ್ಬರಿಗೆ ಉಸಿರೆತ್ತಲೂ ಬಿಡುವುದಿಲ್ಲ. ನೋಡಿ, ನನ್ನಲ್ಲಿ ಇಷ್ಟು ಸೀರೆ ಇದೆ, ಚಂದದ ಫರ್ನಿಚರ್ ಮಾಡಿಸಿದೇವೆ ಎಂದು ತಮ್ಮ ಮನೆಯ ಕ್ಯಾಟಲಾಗನ್ನೆ ಓದುತ್ತಾರೆ. ತಾನು ಇರುವ ಇಂತಹ ದುಮ್ಮಾನ ಮನಸ್ಥಿತಿಯಲ್ಲಿ ಅದನ್ನೆಲ್ಲಾ ಕೇಳುವುದು ಅಸಾಧ್ಯ, ಅಸಹನೀಯ.

ಒಮ್ಮೆಗೆ ಮಿಂಚು ಮಿಂಚಿದಂತೆ ಯೋಚನೆಯೊಂದು ಹೊಳೆಯಿತು. ತವರು ಮನೆಗೆ ಹೋಗಿಬಿಡೋಣ ಎಂದು! ಅದಕ್ಕೇನೂ ಕಷ್ಟಪಡಬೇಕಿಲ್ಲ. ಮೂರು ಬೀದಿ ದಾಟಿದರೆ ನಾಲ್ಕನೆಯದರಲ್ಲಿ, ಮೊದಲನೆಯದೆ ತೌರು ಮನೆ. ಇವರು ಬರಬೇಕು, ಖಾಲಿ ಮನೆ ನೋಡಿ ಬೇಸ್ತು ಬೀಳಬೇಕು. ಪಾಠ ಕಲಿಯಬೇಕು. ಎಂಥ ಯೋಚನೆ! ಹೇಗೆ ಥಟ್ಟನೆ ಹೊಳೆಯಿತು!

ಆದರೆ ಅವಳ ಮನೋಗತಿಯೆ ಒಂದು ತರಹೆ. ಅದು ಸದಾ ಸ್ಥಿಮಿತದಲ್ಲಿ ಇರಲಾರದು. ಅದು ಅವಳಿಗೆ ತಿಳಿಯದ ವಿಚಾರ ಏನಲ್ಲ. ಅಲ್ಲದೆ ತನಗೆ ಹಿಡಿತ ಸಾಲದು ಎಂಬುದೂ ತಿಳಿದಿದೆ. ಅದೇ ಗೊಂದಲ ಎಬ್ಬಿಸುವ ಕಾರಣ. ತವರು ಮನೆಗೆ ಹೋಗುವ ವಿಷಯದ ಕುರಿತು ಗೊಂದಲ ಏನಿರಲಿಲ್ಲ. ಆದರೆ ಅವಳಿಗೇ ತಿಳಿಯದ ಒಂದು ಸ್ವಭಾವ ಇತ್ತು. ಸಿಟ್ಟಿಗೂ ಬೇಸರಕ್ಕೂ, ಸಂತೋಷಕ್ಕೂ ಕಾರಣವೇ ಬೇಡ. ಅವು ಬರಲೂ ತಡವಿಲ್ಲ, ಹೋಗಲೂ ತಡವಿಲ್ಲ!!

ತವರುಮನೆಗೆ ಹೋಗಬೇಕೆಂಬ ವಿಚಾರ ಒಂದು ಕ್ಷಣ ಹಿತ ಅನಿಸಿತು. ಆದರೆ ಮರುಕ್ಷಣ ಚಿಂತನೆ ಬೇರೆ ಕಡೆ ತಿರುಗಿತು. ಅದೂ ವಿಚಿತ್ರವಾದುದೇ. ಜೊತೆಗೆ ತಾನಿಲ್ಲದಾಗ ತನ್ನ ಗಂಡನ ನಡೆನುಡಿ, ಹಾವಭಾವ ಹೇಗಿದ್ದೀತು? ತಾನು ಕಂಡಿಲ್ಲವಲ್ಲ.

ಅಷ್ಟರಲ್ಲೆ ದೂರದಿಂದ ಅವರ ಮೋಟಾರು ಸೈಕಲ್ ಶಬ್ದ ಕೇಳಿಸಿತು. ಹೋ! ಬಂದೇಬಿಟ್ಟರು. ಅವಳ ಕಟ್ಟಕಡೆಯ ಯೋಚನೆ ಕಾರ್ಯರೂಪಕ್ಕೆ ಇಳಿಯಬೇಕಿತ್ತು. ಕೂಡಲೆ ಅವಳು ಪಕ್ಕದ ಟೀಪಾಯ್ ಮೇಲಿದ್ದ ಪುಸ್ತಕದಿಂದ ಒಂದು ಬಿಳಿ ಹಾಳೆ ಹರಿದು, ಅಲ್ಲಿದ್ದ ಪೆನ್ಸಿಲ್‌ನಿಂದ ಬರೆದಳು, ''ನನಗೆ ಬೇಸರ ಆದುದರಿಂದ ತವರುಮನೆಗೆ ಹೋಗುತ್ತೇನೆ''. ಕನ್ನಡಿಯ ಪಕ್ಕ ಅವರಿಗೆ ಕಾಣುವಂತೆ ಇಟ್ಟಳು. ಅವರು ಬಂದೊಡನೆ ಕನ್ನಡಿ ನೋಡುವ ಪದ್ಧತಿ.

ಹೊರಬಾಗಿಲು ನೂಕಿದ ಶಬ್ದ ಕೇಳಿತು. ತಟ್ಟನೆ, ಪಕ್ಕದಲ್ಲಿದ್ದ ಮಂಚದ ಅಡಿಗೆ ನುಸುಳಿದಳು. ಹಾಳು ಮಂಚ. ಎಷ್ಟು ತಗ್ಗು. ಸ್ಪ್ರಿಂಗುಗಳು ಬೆನ್ನಿಗೇ ತಾಗುತ್ತವೆ. ಮನಸ್ಸು ಕಿವಿಗಳೆರಡೂ ಅವರ ಕಡೆಗೇ ಕೇಂದ್ರೀಕೃತವಾಯಿತು. ಉಸಿರು ಕೂಡಾ ಜೋರಾಗಿ ಬಿಡುವಂತಿಲ್ಲ.

ಅವರು, 'ತುಮನೆ ಮುಝುಕೊ ಹಸನಾ ಸಿಖಾಯ' ಎಂದು ಗೊಣಗುತ್ತ ರೂಮಿನೊಳಗೆ ಬಂದುದು ಗೊತ್ತಾಯಿತು. ಅವರ ಇಜಾರದ ಮೊಣಕಾಲಿನ ಕೆಳಭಾಗ, ಕಾಲುಚೀಲ ಮಾತ್ರ ಕಾಣುತ್ತಿದೆ. ಮನಸ್ಸಿನಲ್ಲೇ ಮಂಚವನ್ನು ಬೈದುಕೊಂಡಳು.

ಬಹುಶಃ, ಅವರು ತನ್ನ ಚೀಟಿಯನ್ನು ಓದಿ, ಸಿಟ್ಟಿನಿಂದ ಹರಿದುಹಾಕಿರಬಹುದು ಎಂದುಕೊಂಡಳು. ಪರಪರ ಎಂಬ ಸಣ್ಣ ದನಿ ಕೇಳಿಸಿತ್ತು. ಅವರ ಮುಖವನ್ನು ನೋಡೋಣ ಎಂದರೆ, ಸ್ವಲ್ಪ ಮುಂದಕ್ಕೆ ಜರುಗಿ, ಮಂಚದ ಅಂಚಿನಿಂದ ಹೊರಕ್ಕೆ ತಲೆಹಾಕಬೇಕಲ್ಲ? ಅದು ಸರಿಯಲ್ಲ ಅನ್ನಿಸಿತು. ಎಷ್ಟಾದರೂ ಮನಸ್ಸು ಮರ್ಕಟ ಎಂದು ಹೇಳುತ್ತಾರಲ್ಲ, ಅಷ್ಟರಲ್ಲಿ ಅವರ



ಕಾಲುಗಳು ಮಂಚದ ಕಡೆಗೇ ಬರುವುದು ಕಾಣಿಸಿತು. ಎಚ್ಚರಿಕೆಯಿಂದ, ಸದ್ದು ಮಾಡದೆ, ಬೆನ್ನು ಮೇಲಾಗಿ, ಕಾಲು ನೀಡಿ ಮಲಗಿದಳು. ಗಟ್ಟಿಯಾಗಿ ಉಸಿರು ಬಿಡುವಂತಿಲ್ಲವಲ್ಲ.

ಅನಿರೀಕ್ಷಿತ! ಅವರು ಮಂಚದ ಮೇಲೆ ಧೊಪ್ಪಂತ ಕುಳಿತುಕೊಳ್ಳಬೇಕೆ!! ಮಂಚವು ಕೊಂಚ ತಗ್ಗಿತು. ತನ್ನ ಬೆನ್ನ ಮೇಲೆ ಭಾರ ಬಿದ್ದಿತು. ಬೆರಳೆಣಿಕೆಯಷ್ಟು ನಿಮಿಷ ಮಾತ್ರ, ಅವರು ಮೇಲೆದ್ದರು. ತನ್ನ ಬೆನ್ನ ಮೇಲಿನ ಭಾರ ಕಡಿಮೆ ಆದಂತಾಯಿತು. ಗೊರ್ ಎಂಬ ಶಬ್ದ ಯಾವುದು, ಬಹುಶಃ ಮಂಚದ ಪಕ್ಕದ ಸ್ಪ್ರಿಂಗೇ ಇರಬೇಕು ಎಂದುಕೊಂಡಳು. ಕತ್ತು ತಿರುಗಿಸಿ ಹೊರಗೆ ನೋಡಿದಳು. ಎಷ್ಟು ಚಪಲ ಈ ಮನಸ್ಸಿನದು ಎಂದುಕೊಂಡಳು. ಎಚ್ಚರಿಕೆಯಿಂದ ಸ್ವಲ್ಪ ಮುಂದೆ ಜರುಗಿ, ತಲೆ ಎತ್ತದೆ, ಒಂದು ಪಕ್ಕದಿಂದ ಹಣಕಿದಳು. ಕನ್ನಡಿಯ ಮುಂದೆ ಅವರು ನಿಂತಿದಾರೆ. ಬಹುಶಃ ತಲೆಗೂದಲನ್ನು ಬ್ರಶ್ ಮಾಡಿಕೊಳ್ಳುತ್ತಿರಬೇಕು. ತಾನು ಇಟ್ಟಿದ್ದ ಕಾಗದ ಓದಿದರೋ ಇಲ್ಲವೋ, ಮುಂದೆ ಬಾಗಿ ನೋಡುವಂತಿಲ್ಲ. ಅವರು ಸರಕ್ಕನೆ ಹಿಂತಿರುಗಿದರು. ತಾನೂ ಸರಕ್ಕನೆ ತಲೆ ಹಿಂದೆ ತಂದುಕೊಂಡಳು. ಅವರು ಸಿಳ್ಳೆ ಹಾಕುತ್ತ ರೂಮಿನ ಬಾಗಿಲ ಕಡೆ ನಡೆದರು.

''ಬೈರಾ ಮನೆ ಕಡೆ ಜೋಕೇನೊ. ನಾನು ಕ್ಲಬ್ಬಿಗೆ ಹೋಗಿ ಬರುತ್ತೇನೆ'' ಎಂದು ಕೂಗಿ ಹೇಳಿದುದೂ, ಹೊರಬಾಗಿಲು ಧಡಾರನೆ ಹಾಕಿದುದೂ ಕೇಳಿಸಿತು. ಅರೇ ಬೈರ ಯಾವಾಗ ಬಂದ ಅನಿಸಿತು. ಈಗ ಅವಳಿಗೆ ನಿಜವಾಗಿಯೂ ಅಳು ಬರುವಂತಾಯಿತು. ತಾನಿಲ್ಲದಿದ್ದರೂ ಬೇಸರ ಪಡದೆ, ಖುಷಿಯಿಂದ ಸಿಳ್ಳೆ ಹಾಕುತ್ತ ನಡೆದರಲ್ಲಾ, ಕ್ಲಬ್ಬಿನ ಕಡೆಗೆ ಅನಿಸಿತು. ಎಲ್ಲ ಒಂದೆ, ನಾಯಿ ಬಾಲ ಅಂದುಕೊಂಡಳು.

ಅವಳು ಮಂಚದಡಿಯಿಂದ ಮೆಲ್ಲನೆ ತೆವಳಿಕೊಂಡು ಮೇಲೆದ್ದಳು. ಹರಡಿದ್ದ ತಲೆಕೂದಲನ್ನು ತಾನರಿಯದಂತೆ ಸರಿಪಡಿಸಿಕೊಳ್ಳುತ್ತ ಕನ್ನಡಿ ಬಳಿ ಬಂದಳು. ಅದರ ಮೇಲೆ ತೂಗಾಡುತ್ತಿದ್ದ ಕಾಗದದಲ್ಲಿ ಕೆಂಪು ಅಕ್ಷರಗಳು ಕಂಡವು. ಅರೆ! ತಾನು ಬರೆದುದು ಕಪ್ಪು ಮಸಿಯಲ್ಲಿ. ಅದನ್ನು ತಟ್ಟನೆ ತೆಗೆದುಕೊಂಡು ಓದಿದಳು.

''ಸಾ!.......... ಮಂಚದಡಿಗಿಂತ ಮಂಚದ ಮೇಲೆ ಸುಖವಾಗಿರುತ್ತದೆ ಕಣೇ'' ಎಂದು ಬರೆದಿತ್ತು. ಕನ್ನಡಿಯ ಮತ್ತೊಂದು ಭಾಗದ ಮೊಳೆಯ ಮೇಲೆ ಎರಡು ಚೆನ್ನದ ಬಳೆಗಳು ನೇತಾಡುತ್ತಿದ್ದವು. ತಟ್ಟನೆ ಕೈ ನೀಡಿ ತೆಗೆದುಕೊಂಡಳು. ಹಿಂದೆ ಮುಂದೆ ತಿರುಗಿಸಿ ನೋಡಿದಳು. ಬಂಗಾರದ ಬಳೆ ಹೌದು. ಒರೆಹಚ್ಚಿ ನೋಡಬೇಕಿಲ್ಲ. ತನಗೆ ತಿಳಿಯದೆ?

ಮನಸ್ಸಿನ ಭಾರ ಇಳಿಯಿತು. ಅವರದು ಈ ಬಂಗಾರದಂತಹದೇ ಮನಸ್ಸು ಎಂದುಕೊಂಡಳು. ಸಂತೋಷವಾದರೂ, ''ಅವರು ಹಾಗೇ ಹೋದರಲ್ಲ. ಕಾಫಿ ಕುಡೀಲಿಲ್ಲವಲ್ಲ, ಹೊಸ ಕೋಡುಬಳೆಯ ರುಚಿಯನ್ನೂ ನೋಡಲಿಲ್ಲವಲ್ಲ'' ಎಂದು ಅವಳ ಮನಸ್ಸಿನಲ್ಲಿ ಕೊರೆಯ ತೊಡಗಿತು. ಬಳೆಗಳನ್ನು ಕೈಲಿ ಹಿಡಿದುಕೊಂಡೇ ಮಂಚದ ಮೇಲೆ ಕುಳಿತಳು.



[illegible]



# ರಾಜಶೇಖರ ಹತಗುಂದಿ

# ಬೆಟ್ಟಕ್ಕೆ ಚಳಿ




ಪ್ರೊ. ಪಾಟೀಲರು ತಲೆ ಮೇಲೆ ಕೈಹೊತ್ತು ಚಿಂತಾಕ್ರಾಂತರಾಗಿ ಕುಳಿತಿದ್ದರು. ನಾಲ್ಕೈದು ದಿನಗಳಿಂದ ಅವರ ತಲೆಯೆಂಬುದು ಯುದ್ಧಭೂಮಿಯಾಗಿ ಪರಿಣಮಿಸಿತ್ತು. ಕಣ್ಣಿನ ಎವೆ ಮುಚ್ಚಿದರೆ ಸಾಕು, ಗಾಢ ನಿದ್ದೆಯನ್ನು ಆವಾಹಿಸಿಕೊಳ್ಳುತ್ತಿದ್ದ ಅವರಿಗೆ ಸುಖನಿದ್ರೆ ಎನ್ನುವುದು ಮರೀಚಿಕೆಯಾಗಿತ್ತು. ಪ್ರೊ. ಜೆ.ಜೆ. ಪಾಟೀಲ ಎಂದೇ ಪ್ರಸಿದ್ಧಿ ಪಡೆದಿದ್ದ ಅವರ ಕ್ರಾಂತಿಕಾರಿ ಭಾಷಣ ಕೇಳಿದ ಪುಡಾರಿಗಳು ಬೆಚ್ಚಿ ಬೀಳುತ್ತಿದ್ದರು. ಪಾಟೀಲರ ಭಾಷಣವೆಂದರೆ ಎಲ್ಲೆಡೆ ಮನೆ ಮಾತಾಗಿತ್ತು. ಅಂತಹ ವಾಗ್ಮಿ ಮಾತು ಕಳೆದುಕೊಂಡು ಮೌನವಾಗಿದ್ದರು.

ಖುರ್ಚಿಯಲ್ಲಿ ಗುಬ್ಬಚ್ಚಿಯಂತೆ ಮುದುಡಿ ಕೂತಿದ್ದ ಪಾಟೀಲರು, ಕುಂತ ನಿಲುವು ಬದಲಿಸಿದರು. ಆರೂವರೆ ಅಡಿಯ ಆಜಾನುಬಾಹು ದೇಹದ ಅವರಲ್ಲಿ ನಿಟ್ಟುಸಿರು ಬಿಡಲೂ ತ್ರಾಣವಿರದಂತಾಗಿತ್ತು. ಜೀವನದಲ್ಲಿ ಮೊದಲ ಬಾರಿಗೆ ಅವರು ಮಾನಸಿಕವಾಗಿ ಕುಗ್ಗಿದ್ದರು. ತಮ್ಮ ಮಗ ರಕ್ಷಿತ ಅಂತರಜಾತಿಯ ವಿವಾಹವಾದಾಗಲೂ



ಅವರು ಈ ಬಗೆಯಲ್ಲಿ ಕುಗ್ಗಿರಲಿಲ್ಲ. ಮಗನ ಆಯ್ಕೆಗೆ ಸಮ್ಮತಿ ನೀಡಲು ತಮ್ಮ ಹೆಂಡತಿ ನಿರಾಕರಿಸಬಹುದೆಂಬ ಪಾಟೀಲರ ನಿರೀಕ್ಷೆ ಸುಳ್ಳಾಗಿತ್ತು. ತಮಗಿಂತಲೂ ಒಂದು ಸ್ತರ ಮೇಲಿರುವ 'ಜಾತಿಯ' ಹುಡುಗಿಯನ್ನು ಆಯ್ಕೆ ಮಾಡಿಕೊಂಡ ಮಗನ ಜಾಣ್ಮೆಯನ್ನು ಹೆಂಡತಿ ಕೊಂಡಾಡಿದಾಗ, ಪಾಟೀಲರು ದಿಗಿಲು ಮತ್ತು ಸಂತೋಷ ಎರಡೂ ಅನುಭವಿಸಿದ್ದರು.

ಸಾಫ್ಟ್‌ವೇರ್ ಇಂಜಿನಿಯರಿಂಗ್‌ನಲ್ಲಿ ಪದವಿ ಪಡೆದಿದ್ದ ಮಗ-ಸೊಸೆ ವಿದೇಶಕ್ಕೆ ಹೋಗುವುದು ಪ್ರೊ. ಪಾಟೀಲರ ಹೆಂಡತಿಗೆ ಸುತರಾಂ ಇಷ್ಟವಿರಲಿಲ್ಲ. ಮಗ, ಸೊಸೆ ತಮ್ಮ ಮಾತು ಮೀರಿದರಲ್ಲ ಎಂಬ ಕೊರಗು ಅವರ ಹೆಂಡತಿಯಲ್ಲಿ ಕೊರೆಯುತ್ತಿತ್ತಾದರೂ, ಕೈಗೆ ಬಂದ ಮಕ್ಕಳು ಎಲ್ಲಾರು ಇರ್‍ಲಿ, ಛಲೋ ಇದ್ರ ಸಾಕು ಎಂದು ಬರಬರುತ್ತಾ ಸಮಾಧಾನ ತಂದುಕೊಂಡಿದ್ದರು. ಮಗ-ಸೊಸೆ ವಿದೇಶಕ್ಕೆ ಹೋದದ್ದರ ಬಗ್ಗೆಯಾಗಲಿ, ಅಂತರಜಾತಿ ವಿವಾಹವಾದದ್ದರ ಬಗ್ಗೆಯಾಗಲಿ ಪಾಟೀಲರಿಗೆ ಅಸಮಾಧಾನವೇನೂ ಆಗಿರಲಿಲ್ಲ. ಹಾಗೆ ನೋಡಿದರೆ, ಮಗ ಬೇರೆ ಜಾತಿಯ ಹುಡುಗಿಯೊಂದಿಗೆ ಮದುವೆಯಾದದ್ದು ಅವರ ವರ್ಚಸ್ಸು ಹೆಚ್ಚುವಂತೆ ಮಾಡಿತ್ತು. ಕ್ರಾಂತಿಕಾರಿ ಭಾಷಣಕ್ಕೆ ಹೆಸರಾದ ಅವರು, ಇತ್ತೀಚಿನ ದಿನಗಳಲ್ಲಿ, ಮಾತು ಮತ್ತು ಕ್ರಿಯೆ ಒಂದಾಗಬೇಕೆಂದೂ, ನಮ್ಮ ನಮ್ಮ ಮಕ್ಕಳನ್ನು ಜಾತಿಯ ಸಂಕೋಲೆಯಿಂದ ಬಿಡಿಸಿ ಹೊರತರಬೇಕೆಂದೂ ಹೇಳಿ, ತಮ್ಮ ಮಗ ಅಂತರಜಾತಿ ವಿವಾಹವಾದದ್ದನ್ನು ಉಲ್ಲೇಖಿಸಿ, ಪುಳಕಿತರಾಗಿ, ಅಪಾರ ಅಭಿಮಾನಪಡುತ್ತಿದ್ದರು.

ಆದರೆ ಈಗ ಖುರ್ಚಿಯಲ್ಲಿ ಮುದುಡಿ ಕೂತ ಪಾಟೀಲರು, ತಮ್ಮೆದುರು ದುತ್ತೆಂದು ಎದುರಾದ ಹೊಸ ಸಮಸ್ಯೆಗೆ ಕಂಗಾಲಾಗಿ ಹೋಗಿದ್ದರು. ಮಗನ ಜಾಣ ಆಯ್ಕೆ ಅವರಿಗೆ ವರ್ಚಸ್ಸು, ಖ್ಯಾತಿ ಹೆಚ್ಚಿಸಲು ನೆರವಾಗಿದ್ದರೆ, ಮಗಳ ನಿರ್ಧಾರ ಮನದ ನೆಮ್ಮದಿ ಕೆಡಿಸಿತ್ತು. ಅವರ ಹೆಂಡತಿ ನಾಗಮ್ಮನವರಂತೂ, ''ನೀವು ಮಗಳ ಮಾತೀಗಿ ಒಪ್ಪಿ ಆ ಸಂಬಂಧ ಬೆಳೆಸಿದರೆ ನನ್ನ ಹೆಣಾ ಕಾಣಬೇಕ್ತಾದೆ'' ಅಂತ್ಹೇಳಿ ಗಾಬರಿ ಹುಟ್ಟಿಸಿದ್ದರು.

... ಟೇಬಲ್ ಮೇಲೆ ಅಸ್ತವ್ಯಸ್ತವಾಗಿ ಹರಡಿಕೊಂಡಿದ್ದ ಪುಸ್ತಕಗಳತ್ತ ಪಾಟೀಲರ ದೃಷ್ಟಿ ಹರಿಯಿತು. ಮನದೊಳಗೆ, 'ನಂಗೆ ಯಾಕ್ ಹಿಂಗಾಗಲಿಕ್ಹತ್ಯಾದು, ಪುಸ್ತಕ ಓದಲಿಕ್ಕ ಶುರು ಮಾಡಿದರ ಚಿಂತಿ ಮರ್‍ತುಹೋಗ್ತಿತ್ತು. ಆದರೀಗ ಯಾವ ಪುಸ್ತಕ ಹಿಡಿದರೂನೂ ಅಕ್ಷರಗಳು ಕಣ್ಣಾಗ ಮೂಡ್ತಿಲ್ಲ. ತಲ್ಯಾಗ ಇಳೀತಿಲ್ಲ' ಎಂದು ವ್ಯಥೆಪಟ್ಟರು. ಅಡಿಗೆ ಮನೆಯಿಂದ ಗಂಗಾಳ ತಂಬಿಗಿ ಬಿದ್ದ ಸಪ್ಪಳ ಕೇಳಿಬಂತು. ಟೇಬಲ್ ಮೇಲೆ ಕೈಯಿಟ್ಟು ಎದ್ದು ನಿಂತರು. ಹೋಗಲೋ ಬೇಡವೋ ಅಂತ ಕ್ಷಣ ಹೊತ್ತು ಆಲೋಚಿಸಿ, ''ಥೂ ಹಾಳಾದ ಬೆಕ್ಕಿನ ಕಾಟ ಸಾಕಾಯಿತು'' ಎಂದು ಖುರ್ಚಿಯಲ್ಲೇ ಕೂತರು.

ಟೇಬಲ್ ಮೇಲೆ ಮುಂಗೈ ಊರಿ, ಗದ್ದಕ್ಕೆ ಅಂಗೈ ಆನಿಸಿ ಕೂತ ಪಾಟೀಲರ ದೃಷ್ಟಿ ನೀಟಾಗಿ ಜೋಡಿಸಿಟ್ಟ ಪುಸ್ತಕಗಳತ್ತ ಹರಿಯಿತು. ಒಂದೊಂದೇ ಪುಸ್ತಕದ ಮೇಲೆ ಕಣ್ಣಾಡಿಸಿದರು. ತಮಗಿರುವ ಓದಿನ ಗೀಳಿನ ಬಗ್ಗೆ ತಾವೇ ಆಶ್ಚರ್ಯಪಟ್ಟರು. ಅವರಿಗೆ ಓದಿನ ಹಾದಿ ಸಿಕ್ಕಿದ್ದೇ ಪವಾಡಸದೃಶ ರೀತಿಯಲ್ಲಿ. ಪ್ರೊ. ಜೆ.ಜಿ. ಪಾಟೀಲರ ಅಪ್ಪ ಗುರುಲಿಂಗಪ್ಪಗೌಡರು ಇನ್ನೂರು ಎಕರೆ ಜಮೀನಿನ ಮಾಲಿಕರಾಗಿದ್ದರು. ಮನೆಯಲ್ಲಿ ಸಂಪತ್ತು ಕಾಲು ಮುರಿದುಕೊಂಡು ಬಿದ್ದಿತ್ತು. ಅವರು ಏಳು ಗೇಣಿನ ಕುದುರೆ ಮೇಲೆ



ಕುಂತು, ಹೊಲಕ ಹೋಗಿ, ಮನೀಗಿ ಬಂದರೇನೇ ಊರ ಜನ ಬೆಕ್ಕಸ ಬೆರಗಾಗಿ ನೋಡುತ್ತಿದ್ದರಂತೆ.

ಹೀಗಿದ್ದರೂ ಗುರುಲಿಂಗಪ್ಪಗೌಡರು ದರ್ಪದ ಗೌಡಕಿ ಮಾಡಿದವರಲ್ಲ. ಎದ್ದು ಕಾಣುವ ಹಾಗೆ ಹಣೆಮೇಲೆ ಮೂರು ಬಟ್ಟ ವಿಭೂತಿ ಹಚ್ಚಿಕೊಂಡು, 'ನಿನ್ನೊಳಗು ನೀ ತಿಳಕೋ...' ಎಂದು ಗುಣುಗುತ್ತಲೇ ಸಂಸಾರ ಮಾಡಿದವರು. ಪೂಜೆ-ಪುನಸ್ಕಾರ, ನೇಮ-ನಿಷ್ಠೆ ಎಲ್ಲಾ ಮಾಡ್ತಿದ್ದ ಅವರು, ತನ್ನ ಮಗಾ ತನ್ನಂಗೇ ಹಳ್ಳಿಗೌಡಾಗಿ ಉಳೀಬಾರದು ಅಂತ ಅನಕೊಂಡವರು. ಏಳು ಹೆಣ್ಣು, ಒಂದು ಗಂಡಿನ ತಂದೆಯಾಗಿದ್ದ ಅವರು, ತಮ್ಮ ಮಗ ಜಗನ್ನಾಥನನ್ನು ಕಲಬುರ್ಗಿಯಲ್ಲಿಟ್ಟು ಆಸ್ಥೆಯಿಂದಲೇ ಓದಿಸಿದ್ದರು. ಪರೀಕ್ಷೆ ಪಾಸಾಗಲೆಂದು ನಗರಕ್ಕ ಓದಲು ಬಂದ ಜಗನ್ನಾಥ, ಓದುವ ಹುಚ್ಚಿನ ಗೆಳೆಯರ ಸಹವಾಸದಲ್ಲಿ ಪುಸ್ತಕ ಓದುವುದನ್ನು ಉಸಿರಾಗಿಸಿಕೊಂಡಿದ್ದ. ಮುಂದೆ ಎಂ.ಎ.ಪಿ.ಎಚ್.ಡಿ. ಮುಗಿಸಿ, ವಿಶ್ವವಿದ್ಯಾಲಯದಲ್ಲಿ ಕಲಿಸುವ ನೌಕರಿ ಪಡೆದು, ಖ್ಯಾತ ಸಮಾಜ ವಿಜ್ಞಾನಿಯೂ ಎನಿಸಿಕೊಂಡರು. ಹೀಗಾಗಿ, ಜಗನ್ನಾಥ, ಪ್ರೊ. ಜೆ.ಜೆ. ಪಾಟೀಲ ಹೆಸರಲ್ಲಿ ಜನಮನದಲ್ಲಿ ಚಿರಪರಿಚಿತರಾದರು.

ಪುಸ್ತಕಗಳ ಮೇಲೆ ಹರಿದಾಡಿದ ಕಣ್ಣುಗಳು ದಣಿದವು. ಪಾಟೀಲರು ಕ್ಷಣ ಹೊತ್ತು ಕಣ್ಣು ಮುಚ್ಚಿದರು. ಕಣ್ಣಲ್ಲಿ ಮೂಡಿದ್ದು, ಹಠ ಹಿಡಿದು ಕೂತ ಹೆಂಡತಿ ಮತ್ತು ಮಗಳ ಚಿತ್ರವೇ. ಮಗಳು ಶಿಲ್ಪಾಳ ನಿರ್ಧಾರ ತಮ್ಮ ಭಾಷಣಕ್ಕಿಂತಲೂ ಕ್ರಾಂತಿಕಾರಿಯಾದದ್ದು ಎಂದು ಬೆಚ್ಚಿಬಿದ್ದರು. ಮನದೊಳಗಿನ ಸಂಘರ್ಷ ಮತ್ತಷ್ಟು ಹೆಚ್ಚಾಯಿತು. 'ಆದದ್ದಾಯಿತು, ಒಪ್ಪಿಗೆ ಕೊಡ್ಲೇನು?' ಎಂದು ಒಂದು ಕ್ಷಣ ಅಂದುಕೊಂಡರು. ಅದರ ಹಿಂದೆಯೇ 'ಅದೆಲ್ಲ ಆಗದ ಮಾತು' ಎನ್ನುವುದನ್ನು ಸಮರ್ಥಿಸುವ ವ್ಯಾವಹಾರಿಕ ಬದುಕಿನ ನಿದರ್ಶನಗಳು ಹರಿದುಬರತೊಡಗಿದವು.

ಗದ್ದಕ್ಕೆ ಆನಿಸಿ ಹಿಡಿದ ಕೈ ತೆಗೆದು ನೇರ ಕೂತರು. ತಲೆ ಕೆಳಗೆ ಮಾಡಿ ಕೈಗಡಿಯಾರ ನೋಡಿಕೊಂಡರು. ಗಡಿಯಾರ ನಿಂತಂತಿತ್ತು. ಕಿವಿಗೆ ಹಿಡಿದು ಪರೀಕ್ಷಿಸಿದರು. ಟಿಕ್‌ಟಿಕ್ ಸದ್ದು ಕೇಳುತ್ತಿರಲಿಲ್ಲ. ಮುಖ ಮೇಲೆತ್ತಿ ಗೋಡೆ ಗಡಿಯಾರ ನೋಡಿದರು; ಐದೂ ಹದಿನೈದಾಗಿತ್ತು. ಕಿಟಕಿಯ ಪರದೆ ಸರಿಸಿ ಹೊರಗೆ ಕಣ್ಣು ಹಾಯಿಸಿದರೆ, ಕತ್ತಲೆ ಕರಗುತ್ತಿರುವಂತೆ ಭಾಸವಾಯಿತು. ಇನ್ನೂ ಚುಮುಚುಮು ಬೆಳಕು ಹರಿದಿರಲಿಲ್ಲ.

ಪ್ರೊ. ಪಾಟೀಲರು ಇಡೀ ರಾತ್ರಿ ಜಾಗರಣೆ ಮಾಡಿದ್ದರು. ಕಣ್ಣಿಗೆ ಕಣ್ಣು ಹತ್ತಲಾರದಷ್ಟು ರಾತ್ರಿಯಿಡೀ ಎಚ್ಚರವಿದ್ದುದು ಇತ್ತೀಚಿನ ದಿನಗಳಲ್ಲಿ ಇದು ಪ್ರಥಮ ಬಾರಿ. ನಿನ್ನೆ, ಮೊನ್ನೆ, ಆಚೆಮೊನ್ನೆ ಒಂದಷ್ಟಾದರೂ ನಿದ್ರೆ ಮಾಡಿದ್ದರು. 'ಅಜೀರ್ಣದಿಂದಾಗಿ ನಿದ್ದೆ ಬರುತ್ತಿಲ್ಲವೇ?' ಎಂದು ತರ್ಕಿಸಿದರು. ಆದರೆ, ನಿನ್ನೆ ರಾತ್ರಿ, ಒಂದು ಕಪ್ಪು ಹಾಲು ಕುಡಿದದ್ದು ಬಿಟ್ಟು ಮತ್ತೇನನ್ನೂ ಸೇವಿಸಿರಲಿಲ್ಲ.

ನಿನ್ನೆ ರಾತ್ರಿಯಂತೂ ಹೆಂಡತಿ ಮತ್ತು ಮಗಳ ರಂಪ ಅತಿಗೆ ಹೋಗಿತ್ತು. ಸಿಟ್ಟಿಗೆದ್ದ ಹೆಂಡತಿ, ಮಗಳಿಗೆ ಬಾಯಿಗೆ ಬಂದಂತೆ ಬೈದು, ಮುಖ ಮೂರಿ ಎನ್ನದೇ ಥಳಿಸಿದ್ದಳು. ಬಿಡಿಸಲು ಹೋಗಿ ಏಟು ತಿಂದ ಪಾಟೀಲರಿಗೂ, ಚೆನ್ನಾಗಿ ಬೈದು ದೂರ ತಳ್ಳಿದ್ದಳು. ಏನೋ ಹೇಳಲು ಹೋಗಿ ರಂಪಕ್ಕೆ ಹಾದಿ ಮಾಡಿಕೊಟ್ಟಿದ್ದರು. ಹೆಂಡತಿ ಮಾತ್ರ ಗಟ್ಟಿ ಧನಿಯಲ್ಲಿ, "ಇಕೀ ಹೀಂಗಾಗಲಿಕ್ಕೆ ನೀವೇ ಕಾರಣ. ನಿಮ್ಮಂತವರ ಭಾಷಣ ಕೇಳೇ ಇಕಿ ಹಾದಿ ಬಿಟ್ಟದ್ದು" ಎಂದು ಪಾಟೀಲರನ್ನೇ ಗುರಿ ಮಾಡಿದ್ದಳು.

ಹೆಂಡತಿ ಮೊದಲಿನಿಂದಲೂ ಹಾಗೆಯೇ: ಅವಳನ್ನು ತಮ್ಮ ಹಾದಿಗೆ ತರಬೇಕೆಂದು ಪಾಟೀಲರೂ ಏನೆಲ್ಲಾ ಪ್ರಯತ್ನ ಮಾಡಿದ್ದರು. ಮದುವೆಯಾದ ಶುರುವಾತಿನಲ್ಲೇ, ಜಗುಲಿ ಮೇಲಿನ ದೇವರುಗಳನ್ನು ಮಾಳಿಗೆ ಮೇಲೆ ಎಸೆದಿದ್ದರು.

ಅವಳ ದೈವಭಕ್ತಿಯನ್ನು ವ್ಯಂಗ್ಯವಾಡಿ ಬಹಳ ದಿನಗಳವರೆಗೆ ಬುದ್ಧಿಹೇಳಿ ನೋಡಿದರು. ಯಾವುದೂ ನಾಟಲಿಲ್ಲ. ಬದಲಿಗೆ ಪಾಟೀಲರ ಹೆಂಡತಿಯ ದೈವಭಕ್ತಿ ಇಮ್ಮಡಿಸಿತ್ತು. ಮದುವೆಯಾದ ಮೇಲೆ ಪಾಟೀಲ ದಂಪತಿಗಳಿಗೆ ನಾಲ್ಕೈದು ವರ್ಷ ಮಕ್ಕಳಾಗಿರಲಿಲ್ಲ. ಕಂಡ ಕಂಡ ದೇವರಿಗೆ ಹರಕೆ ಹೊತ್ತು, ವ್ರತ, ನೇಮ, ನಿಷ್ಠೆ, ಉಪವಾಸದಲ್ಲಿ ಮಗ್ನರಾಗುತ್ತಿದ್ದ ಅವರ ಹೆಂಡತಿಗೆ ಕೊನೆಗೊಮ್ಮೆ ಮಕ್ಕಳಾದಾಗ, 'ಇದೆಲ್ಲ ನನ್ನ ದೈವಭಕ್ತಿಯ ಫಲ' ಎಂದು ಸಮರ್ಥಿಸಿಕೊಂಡು, ಆ ಕುರಿತು ಗಂಡ ಎಂದೂ ಚಕಾರ ಎತ್ತದ ಹಾಗೆ ಮಾಡಿದ್ದಳು.

ಹಿಂದಿನ ರಾತ್ರಿಯ ಘಟನೆಯಿಂದ ಪ್ರೊ. ಪಾಟೀಲರಿಗೆ ತೀವ್ರ ಅವಮಾನವೆನಿಸಿದಂತಾಗಿತ್ತು. ಮಗಳಿಗೆ ಬುದ್ಧಿವಾದ ಹೇಳಲು ಯತ್ನಿಸಿದರಾದರೂ ನೇರ ಹೇಳಲು ಧೈರ್ಯ ಸಾಕಾಗಿರಲಿಲ್ಲ. ಆದರೂ ಸುತ್ತಿ, ಬಳಸಿ, 'ನಿನ್ನ ನಿರ್ಧಾರ ತಪ್ಪು' ಎನ್ನುವ ಅರ್ಥದಲ್ಲೇ ಮನವರಿಕೆ ಮಾಡಿ ಕೊಡಲು ಹೆಣಗುತ್ತಿದ್ದರು. ಹಾಗೆ ಮಾಡುವಾಗಲೆಲ್ಲ ಅವರ ಮಾತುಗಳೇ ಅವರನ್ನು ಅಣಕಿಸುತ್ತಿದ್ದವು. ಪಾಪ ಮಗಳು ಮಾತ್ರ ತುಟಿ ಬಿಚ್ಚಿರಲಿಲ್ಲ. ಪಾಟೀಲರಿಗೆ ಬಾಯಿ ಒಣಗಿದಂತೆನಿಸಿ ಟೇಬಲ್ ಮೇಲಿದ್ದ ತಂಬಿಗೆಯಿಂದ ಗ್ಲಾಸ್‌ನಲ್ಲಿ ನೀರು ಹಾಕಿಕೊಂಡು ಗಟಗಟ ಕುಡಿದರು. ತಂಬಿಗೆ, ಗ್ಲಾಸ್‌ಗಳನ್ನು ಮೊದಲಿನಂತೆ ಟೇಬಲ್ ಮೇಲಿಟ್ಟು, ಎದ್ದು ನಿಲ್ಲಲು ಯತ್ನಿಸಿದರು. ಯಾಕೋ ಮನಸ್ಸಾಗಲಿಲ್ಲ.

'ಪಕ್ಕದ ರೂಮಿನಲ್ಲಿ ಮಲಗಿರುವ ಹೆಂಡತಿ, ಮಗಳು ನನ್ನ ಹಾಗೆಯೇ ನಿದ್ದೆಗೆಟ್ಟಿದ್ದಾರೋ ಇಲ್ಲಾ, ಗಾಢ ನಿದ್ರೆಯಲ್ಲಿದ್ದಾರೋ' ಎಂದು ಯೋಚಿಸಿದರು. ಆ ರೂಮಿನಿಂದ ಯಾವ ಮಿಸುಕಾಟದ ಸದ್ದೂ ಕೇಳುತ್ತಿರಲಿಲ್ಲವಾದದ್ದರಿಂದ ನಿದ್ದೆ ಮಾಡುತ್ತಿರಬೇಕೆಂದುಕೊಂಡರು. ಹಾಗೆ ನೋಡಿದರೆ, ಅಷ್ಟೊತ್ತಿನವರೆಗೆ ಪ್ರೊ. ಪಾಟೀಲರ ಗಮನ ಪಕ್ಕದ ರೂಮಿನೆಡೆಗೆ ಹರಿದಿರಲೇ ಇಲ್ಲ. ಎಂ.ಎ. ಇಂಗ್ಲಿಷಿನಲ್ಲಿ ತನಗೆ ಸಹಪಾಠಿಯಾಗಿದ್ದ ದಲಿತ ಯುವಕನನ್ನು, ಅದೂ ಬಡ ದಲಿತನನ್ನು ಪ್ರೀತಿಸಿ ಮದುವೆಯಾಗಲು ಮುಂದಾಗಿರುವ ಮಗಳ ನಿರ್ಧಾರ, ಅದಕ್ಕೆ ಪ್ರತಿಯಾಗಿ ಚಂಡಿಯಂತೆ ವಿರೋಧಿಸುತ್ತಿರುವ ಹೆಂಡತಿ, ಆ ಕಾರಣಕ್ಕೇ ರಣರಂಗವಾಗಿರುವ ಮನೆ ಅವರನ್ನು ಹಿಡಿದು ನಿಲ್ಲಿಸಿದ್ದವು. ಪರಿಹಾರಗೊಳ್ಳದ ದ್ವಂದ್ವದಲ್ಲಿ ಸಿಲುಕಿ, ವಿಲಿ ವಿಲಿ ಒದ್ದಾಡುತ್ತಿರುವ ಪಾಟೀಲರ ಗಮನ ಬೇರೆಡೆಗೆ ಹರಿಯಲು ಸಾಧ್ಯವೇ ಇರಲಿಲ್ಲವೆನ್ನುವಷ್ಟು ಏಕಾಗ್ರವಾಗಿ ರೂಮಿನ ಮೌನದಲ್ಲಿ ಒಂದಾಗಿದ್ದರು.

ಈಗ ಹೊರಗೆ ಬೆಳಕು ಹರಿಯತೊಡಗಿದಂತೆ ಅವರಲ್ಲಿನ ಆತಂಕ, ಉದ್ವೇಗ ಹೆಚ್ಚತೊಡಗಿತು. ಬೆಳಕನ್ನು ಎದುರಿಸುವುದೇ ಪ್ರೊ. ಪಾಟೀಲರಿಗೆ ಹಿಂಸೆಯೆನಿಸತೊಡಗಿತು.



ಪುಸ್ತಕಗಳ ಮೇಲೆ ಹರಿದಾಡಿದ ಕಣ್ಣುಗಳು ದಣಿದವು. ಪಾಟೀಲರು ಕ್ಷಣ ಹೊತ್ತು ಕಣ್ಣು ಮುಚ್ಚಿದರು. ಕಣ್ಣಲ್ಲಿ ಮೂಡಿದ್ದು ಹಠ ಹಿಡಿದು ಕೂತ ಹೆಂಡತಿ ಮತ್ತು ಮಗಳ ಚಿತ್ರವೇ.

ರಾಜಶೇಖರ ಹತಗುಂದಿ





# ಸಹ-ಮತ

## 'ದಾಂಪತ್ಯ ನಿಷ್ಠೆ'ಯ ಪರಿಕಲ್ಪನೆ ಬದಲಾಗುತ್ತಿದೆಯೇ?

'ಸಾಸ್', 'ಪಲ್‌ಛಿನ್' ನಂತಹ ಟೆಲಿ ಸೀರಿಯಲ್‌ಗಳು, ಖುಷ್ವಂತ್ ಸಿಂಗ್, ಶೋಭಾ ಡೇ, ಪ್ರತಿಮಾ ಬೇಡಿಯಂಥವರ ಬಹಿರಂಗ ಹೇಳಿಕೆಗಳು, ಮೇಲ್ಮಧ್ಯಮ ವರ್ಗದವರ ಪಳಪಳ ಟೀಪಾಯಿ ಪತ್ರಿಕೆಗಳ ಚಾಡಿ ಕಾಲಂಗಳು, ಸದಾ ಸುದ್ದಿಯಲ್ಲಿರುವ 'ಚಮಕ್' ಪ್ರತಿಷ್ಠಿತರ ಜೀವನ ಶೈಲಿಗಳು, ಅದ್ಭುತ ರಮ್ಯ ಊಹಾಪೋಹಗಳು... ಇವೆಲ್ಲಾ 'ವಿವಾಹ ಬಾಹಿರ ಸಂಬಂಧ'ಗಳ ಕುರಿತು ಮಧ್ಯಮ ವರ್ಗದ ಮನಸ್ಸಿನಲ್ಲಿ ಎಬ್ಬಿಸುವ 'ಮಾಯಾ ಕೋಲಾಹಲ' ಸೂಕ್ಷ್ಮವಾದದ್ದು. ನೈತಿಕತೆ, ವ್ಯಕ್ತಿಗತ ಆಯ್ಕೆ, ಅನಿರ್ಬಂಧಿತ ಸ್ವಾತಂತ್ರ ಮತ್ತು ಕೌಟುಂಬಿಕ ಹೊಣೆಗಾರಿಕೆಗಳ ಕುರಿತು ವಿವಿಧ ಪ್ರಶ್ನೆಗಳನ್ನು ಎತ್ತುವಂಥದ್ದು.

'ದಾಂಪತ್ಯ ನಿಷ್ಠೆ'ಯ ಪರಿಕಲ್ಪನೆಗಳು ಬದಲಾಗುತ್ತಿವೆಯೆ?

'ಬಹುಪತಿತ್ವ/ಪತ್ನಿತ್ವ ಅಥವಾ ಮುಕ್ತ ಸಖ್ಯ' ಒಂದು ಹೊಸ ಮೌಲ್ಯವಾಗಿ ರೂಪುಗೊಳ್ಳುತ್ತಿದೆಯೆ? ಅಥವಾ ಇದೆಲ್ಲ, ಮಾಧ್ಯಮಗಳು ಸುದ್ದಿ ಹುರಿಯುವ ಗರಮ್ ಮಸಾಲೆಯ ಸದ್ದುಗಳೆ?

ಎಲ್ಲರನ್ನೂ ಒಂದಲ್ಲ ಒಂದು ಸಲ, ಒಂದಲ್ಲ ಒಂದು ರೀತಿಯಲ್ಲಿ ಕಾಡುವ ಈ ದಾಂಪತ್ಯ ನಿಷ್ಠೆ (fidelity)ಯ ಪರಿಕಲ್ಪನೆ ಕುರಿತ 'ವಿಚಾರ ಸಂಗಮ'ದಲ್ಲಿ ಹತ್ತು ಸೂಕ್ಷ್ಮಜ್ಞರು ಚುರುಕಾಗಿ ಪಾಲ್ಗೊಂಡಿದ್ದಾರೆ.

ನಿಮ್ಮ ಪ್ರತಿಸ್ಪಂದನವನ್ನು ಎದುರು ನೋಡುತ್ತೇವೆ.

# ಸಡಿಲ ಲಾಡಿಯ ಕುರುಹು



**ನಾಗೇಶ ಹೆಗಡೆ**

ಚುರುಕಾದ ಸಂವೇದನೆಯ ಬಹುಮುಖಿ ಲೇಖಕ. 'ಪ್ರಜಾವಾಣಿ' ಬಳಗದ ನುರಿತ ಸಂಪಾದಕೀಯ ಹಿರಿಯ. ಪರಿಸರ ತಜ್ಞ.

ನಮ್ಮ ಪ್ರತಿಯೊಂದು ಕ್ರಿಯೆಯೂ 'ಶಿಕ್ಷೆ' ಮತ್ತು 'ಪುರಸ್ಕಾರ' ಎಂಬೆರಡು ಸಂಗತಿಗಳನ್ನು ಆಧರಿಸಿರುತ್ತವೆ ಎಂದು ಖ್ಯಾತ ಮನೋವಿಜ್ಞಾನಿ ಬಿ.ಎಫ್. ಸ್ಕಿನ್ನರ್ ಪ್ರತಿಪಾದಿಸಿದ್ದ. ಗಂಡನಿಂದ ಸಿಗುವ ದೈಹಿಕ ಶಿಕ್ಷೆಗಿಂತ, ಮಿಂಡನಿಂದ ದೊರಕುವ ಅಪ್ಪುಗೆ-ಆನಂದವೇ ಹೆಚ್ಚೆಂದು ಬಗೆದಾಗ ಬಜಾರಿಯರು ರೂಪುಗೊಳ್ಳುತ್ತಾರೆ; ಪರಪತ್ನಿಯಿಂದ ಸಿಗುವ ತೃಪ್ತಿಗಿಂತ, ಸಮಾಜದೆದುರು ಮುಖ ತಗ್ಗಿಸಬೇಕಾದ ಹಿಂಸೆಯೇ ಕ್ರೂರವೆಂದು ಅನಿಸಿದಾಗ ಏಕಪತ್ನೀ ವ್ರತಸ್ಥರು ಕಾಣಸಿಗುತ್ತಾರೆ. ಶಿಕ್ಷೆ ಮತ್ತು ಪುರಸ್ಕಾರ ನಂನಮ್ಮ ವಂಶವಾಹಿಗಳಲ್ಲೇ ಅಂತಸ್ಥವಾಗಿರಬಹುದು. ಕೆಲವು ಪ್ರಭೇದಗಳ ವಾನರಗಳಲ್ಲಿ ಏಕಪತ್ನೀವ್ರತ ಇದೆ. ಕ್ರೌಂಚಪಕ್ಷಿಗಳಲ್ಲೂ ಇದೆ. ಪತ್ನಿ ಜತೆಯಲ್ಲಿದ್ದಾಗ ನಮ್ಮಲ್ಲೂ ಇದೆ.

ಆಧುನಿಕ ಜೀವನಶೈಲಿ ಎಂಬಮಾತ್ರಕ್ಕೆ ಎಲ್ಲರೂ ಸಡಿಲವಾಗುವುದಿಲ್ಲ. ಸಡಿಲ ಲಾಡಿಗಳ ಕುರುಹು ನಮ್ಮ ಸಂಸ್ಕೃತಿಯ ಬೇರುಗಳಲ್ಲೂ ಬೇಕಾದಷ್ಟಿವೆ. ಪುರಾತನ 'ಧ್ವನ್ಯಾಲೋಕ'ದಲ್ಲಿ ಬರುವ ಒಂದು ಪ್ರಸಂಗವನ್ನು ನನ್ನ ಸಂಸ್ಕೃತ ಮಿತ್ರ ವಿಶ್ವಾಸ್ ಒಂದು ಕಥೆಯಲ್ಲಿ ಹೇಳಿದ್ದಾರೆ. ಅದರಲ್ಲಿ ಬರುವ ಶ್ಲೋಕದಲ್ಲಿ, ಗೃಹಿಣಿಯೊಬ್ಬಳು ಹೇಳುತ್ತಾಳೆ, ''ಅತ್ತೆ ಅಲ್ಲಿ ಗಾಢವಾಗಿ ನಿದ್ರಿಸುತ್ತಾಳೆ; ನಾನು ಇಲ್ಲಿ ಮಲಗುತ್ತೇನೆ. ಹೇ ಪಥಿಕನೇ, ಹಗಲಲ್ಲೇ ಚೆನ್ನಾಗಿ ನೋಡಿಕೊಂಡಿರು. ಕತ್ತಲಲ್ಲಿ ಕುರುಡಾಗಿ ನಮ್ಮ ಶಯ್ಯೆಗೆ ಬಂದು ಮಲಗೀಯ!''

ಆಗ, ಸಾಂಕೇತಿಕವಾಗಿ, 'ಧ್ವನಿ'ಯಲ್ಲಿ ಹೇಳಿದ್ದು ಈಗ ವಯಾಗ್ರಾ, ಗರ್ಭ ನಿರೋಧಕ ಗುಳಿಗೆ, ಮತ್ತು ಮಾಧ್ಯಮ ಕ್ರಾಂತಿಯಿಂದಾಗಿ ಬಹಿರಂಗವಾಗಿ ಪ್ರಚಲಿತ/ಪ್ರಚೋದಿತವಾಗುತ್ತಿದೆ. ಈಗಲೂ ಸ್ಕಿನ್ನರ್‌ನ ಶಿಕ್ಷೆ ಮತ್ತು ಪುರಸ್ಕಾರಗಳೇ ನಮ್ಮ ವರ್ತನೆಯ ಅಡಿಪಾಯಗಳಾಗಿವೆ. ಸಂಸಾರದಲ್ಲಿ ಸಂತಸ, ನೆಮ್ಮದಿಯೇ ಪುರಸ್ಕಾರವೆಂದಾದರೆ ಎಂಥ ಚಪಲಚಿತ್ತರೂ ತಮ್ಮ 'ಲಿಬಿಡೊ'ವನ್ನು ಹತ್ತಿಕ್ಕಿಕೊಳ್ಳುವ ಶಿಕ್ಷೆ ಅನುಭವಿಸುತ್ತಾರೆ.

'ನೀವು ಅದನ್ನು ಅನುಭವಿಸುವ ಬಗೆ ಹೇಗೆ' ಎಂದು ಕೇಳಿದ್ದೀರಿ, ನಮ್ಮ ನಿಜ ಹೆಸರನ್ನೂ ಜತೆಗೆ ಫೋಟೋವನ್ನೂ ಹಾಕುತ್ತೇವೆಂದು ಹೆದರಿಸಿ! ಮಾನ್ಯ ಸಂಪಾದಕರೇ, ನೀವು ಅದೆಂಥ ಪ್ರಾಮಾಣಿಕ ಅನಿಸಿಕೆ



ಗೀತಾ ಸಾಳುಂಕೆ

ಪಡೆಯುತ್ತೀರೊ ಗೊತ್ತಿಲ್ಲ. ಆದರೂ ಹೇಳ್ತೇನೆ ಕೇಳಿ. ನಾವು ಇಂಗ್ಲಂಡಿನಲ್ಲಿ ಮೂರು ತಿಂಗಳು ಹನಿಮೂನ್ ಮಾಡಿದವು. ನನ್ನಾಕೆ, (ಗಗನಸಖಿ) ತನ್ನ ಡ್ಯೂಟಿಗೆಂದು ಪರ ಪುರುಷರ ಜತೆ ವಾರಕ್ಕೆ ನಾಲ್ಕು ದಿನ ನ್ಯೂಯಾರ್ಕ್‌ನಲ್ಲಿ ಇದ್ದಾಗ, ನಾನೊಬ್ಬನೇ ಗಂಡು, ಇತರ ಮೂವರು ಗಗನ ಸಖಿಯರ ಜತೆ ಆಟವಾಡಿಕೊಂಡು ಇರುತ್ತಿದ್ದೆ. (ಮತ್ತೇನೂ ಕುಚೋದ್ಯ ಮಾಡಿಲ್ಲವಲ್ಲ ಎಂಬ ಖೇದ ಈಗ ಇದೆ ಅನ್ನೋದು ಬೇರೆ) ನಮ್ಮಿಬ್ಬರ ಬಾಳುವೆಯಲ್ಲಿ ಯಾವ ಗಂಡಾಗುಂಡಿಯೂ ಆಗಿಲ್ಲ.

ಈ ಚರ್ಚೆಯನ್ನು ಆರಂಭಿಸಿ ನೀವು, (ಸಂಪಾದಕರು) ನಮ್ಮಂಥ ಮಧ್ಯಮ ವರ್ಗದ ಮೇಲೆ ಇನ್ನೊಂದು ಹೊಣೆಗಾರಿಕೆಯ ಚಪ್ಪಡಿ ಎಳೆಯುತ್ತಿದ್ದೀರಿ. ನಮ್ಮ ಸಮಾಜದ ಕೆಳವರ್ಗದ ಜನರಲ್ಲಿ ಕೂಡಿಕೆ, ಅನ್ಯಪತ್ನಿ ಸಂಬಂಧ ಹಾಸುಹೊಕ್ಕಾಗಿವೆ. ಈಚೆಗೆ ಮುಂಬೈಯ ಉಚ್ಚವರ್ಗದಲ್ಲೂ 'ಭಾರ್ಯಾ ಬದಲಿ' (ವೈಫ್ ಸ್ವಾಪಿಂಗ್) ಎಂಬುದು ಹೊಸ ಕ್ರೀಡೆಯಾಗಿ ಬೆಳೆಯುತ್ತಿದೆ ಎಂದು 'ಇಂಡಿಯಾ ಟುಡೇ' ವರದಿ ಮಾಡಿತ್ತು. ದಾಂಪತ್ಯ ನಿಷ್ಠೆ ಕೆಳವರ್ಗದಲ್ಲೂ ಇಲ್ಲ, ಮೇಲೂ ಇಲ್ಲ ಎಂದಮೇಲೆ ನಮಗೆ ಮಾತ್ರ ಇಂಥ ನೈತಿಕತೆ ಯಾಕಿದೆಯೊ?

ಸದ್ಯ, ನಮ್ಮ ವಿಲಾಸವನ್ನೇನೂ ಪ್ರಕಟಿಸುತ್ತಿಲ್ಲವಲ್ಲ, ಬಚಾವಾದೆವು ಬಿಡಿ!





**ಇಕ್ಬಾಲ್ ಅಹ್ಮದ್**

ಕಳೆದ ಮೂರು ದಶಕಗಳಿಂದ 'ಬಾಲ ರಂಗಭೂಮಿ'ಯ ಉಳಿವಿಗಾಗಿ ಹೆಣಗುತ್ತಿರುವ ರಂಗ ನಿರ್ದೇಶಕ. 'ನೀನಾಸಂ', ಭೋಪಾಲ್ ಎಲ್ಲ ಅಲೆದು ಈಗ ಬೆಂಗಳೂರಲ್ಲಿ ನೆಲೆ ಅರಸುತ್ತಿರುವ ಕಲೆಗಾರ.

## ಮನಸ್ಸೆಂಬ ಗೇರ್‌ಬಾಕ್ಸ್

ಮುದ್ದು ತಂಗಿ ಬೆಳೆದು ದೊಡ್ಡವಳಾಗಿದ್ದಾಳೆ. ಹಿಂದೆಲ್ಲಾ ಅವಳನ್ನು ಎತ್ತಿ ಮುದ್ದಾಡಿದಂತೆ, ಚೆಲ್ಲಾಟವಾಡಿದಂತೆ ಈಗ ಮಾಡಲಾಗದು. ಇದು ನಾವು ಪ್ರಜ್ಞಾಪೂರ್ವಕವಾಗಿಯೇ ತಿಳಿದು ಅಳವಡಿಸಿಕೊಂಡ ನಡವಳಿಕೆ. ತಾಯಿ/ತಂದೆ, ಅಣ್ಣ/ತಂಗಿ, ನೆರೆಯವರ ಪತ್ನಿ/ಪತಿ, ಹೀಗೆ ಎಲ್ಲ ಸಂಬಂಧಗಳೂ, ನಡಾವಳಿಗಳೂ ನಮ್ಮ ಮನಸ್ಸಿನಲ್ಲೇ ರೂಪುಗೊಂಡವು. ಎಚ್ಚರದಿಂದ ನಿಯಂತ್ರಿಸಲ್ಪಟ್ಟವು. ಪ್ರಾಣಿ, ಸಸ್ಯಲೋಕದಲ್ಲಿ ಇಂಥ ಕಟ್ಟುಪಾಡುಗಳೆಲ್ಲಾ ಇಲ್ಲ. ಮನಸ್ಸಿನಲ್ಲಿ ಗೇರ್‌ಬಾಕ್ಸ್ ಇಟ್ಟುಕೊಂಡು ಯುಕ್ತ, ಸಮಾಜ ಮಾನ್ಯ, ಸಾಮರಸ್ಯ ಕಾಪಾಡುವ ವರ್ತನೆಗಳಿಗೆ ತಕ್ಕಂತೆ ಗೇರ್ ಬದಲಾಯಿಸುವುದೇ ವಿಹಿತ. ಸ್ವೇಚ್ಛಾಚಾರ, ಚಂಚಲ ವರ್ತನೆಯ ಪರವಾದ ವಾದ(ಗಳು), ವಿವೇಚನಾಯುಕ್ತ ಆಯ್ಕೆಯಿಂದಲೇ ಮನುಷ್ಯ ಅವನ್ನೆಲ್ಲ ದಾಟಬಲ್ಲ ಎಂಬ ಭೀರುತನದ ಮುಂದೆ ಶಕ್ತಿಗುಂದುತ್ತವೆ.

"ನನಗೆ ಕೊಲ್ಲಬೇಕು ಅನ್ನಿಸುತ್ತದೆ, ಅದಕ್ಕೆ ಕೊಲ್ಲುತ್ತೇನೆ" ಎಂಬಂಥ ತರ್ಕವೇ ಮುಕ್ತ ಸಂಬಂಧಗಳ ವೈಭವೀಕರಣದ ಹಿಂದಿದೆ.

## ವಿ. ಎನ್. ಲಕ್ಷ್ಮೀನಾರಾಯಣ

ಕತೆಗಾರ, ಸ್ವಪ್ನವಾದಿ ವಿಮರ್ಶಕ, ಮೈಸೂರಿನ
'ಶಾರದಾ ವಿಲಾಸ ಕಾಲೇಜ'ನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕ



# ಸಾಮಾಜಿಕವಾಗಿ ಅಪಾಯಕಾರಿಯಲ್ಲದ ಆ 'ನಿಷ್ಠೆ'!

ದಾಂಪತ್ಯ ನಿಷ್ಠೆಯ ಅರ್ಥದ ಹುಡುಕಾಟ ನನಗೆ ಮಹಾಭಾರತದ ನೇರಳೆ ಹಣ್ಣಿನ ಪ್ರಸಂಗವನ್ನು ನೆನಪಿಗೆ ತರುತ್ತದೆ.

ಯಾವುದೇ ಬಗೆಯ ಸ್ನೇಹ, ಪರಸ್ಪರರ ಬಗೆಗಿನ ನಿಷ್ಠೆಯನ್ನು ಬಯಸುತ್ತದೆ. ದಾಂಪತ್ಯವು ಸಾಮಾಜಿಕ ಮತ್ತು ಕೌಟುಂಬಿಕ ಸಂಬಂಧಗಳೊಂದಿಗೆ ತೆಕ್ಕೆ ಹಾಕಿಕೊಂಡಿರುವ, ಗಂಡು-ಹೆಣ್ಣಿನ ನಡುವಿನ ಸ್ನೇಹವೇ. ಉಳಿದ ಬಗೆಯ ಸ್ನೇಹಗಳಲ್ಲಿರುವಂತೆ, ವಿರೋಧ-ಭಿನ್ನಾಭಿಪ್ರಾಯಗಳ ನಡುವೆಯೂ ಪ್ರೀತಿ, ಗೌರವಗಳನ್ನೊಳಗೊಂಡ ದಾಂಪತ್ಯ ನಿಷ್ಠೆ ಸಾಧ್ಯ ಎಂದು ನನ್ನ ನಂಬಿಕೆ. ಇದಕ್ಕೆ ಧಕ್ಕೆಯೊದಗುವುದು ಇವೆರಡರ ಅಭಾವದಲ್ಲಿ.

ಕೌಟುಂಬಿಕ ಮತ್ತು ಸಾಮಾಜಿಕ ನೆಮ್ಮದಿಗಳ ಮೇಲೆ ಪರಿಣಾಮ ಬೀರುವ ಶಕ್ತಿ ದಾಂಪತ್ಯ ನಿಷ್ಠೆಗಿದೆ. ಆದ್ದರಿಂದ ಇದಕ್ಕೆ ನೀತಿ-ನೈತಿಕತೆಯ ಹಂಗಿದೆ. ಧರ್ಮ ನಿಷ್ಠೆ ಮತ್ತು ಅಧ್ಯಯನ ನಿಷ್ಠೆ ಮುಂತಾದುವು ದಾಂಪತ್ಯ ನಿಷ್ಠೆಯೊಂದಿಗೆ ಘರ್ಷಿಸಿ, ಕೌಟುಂಬಿಕ ನೆಮ್ಮದಿಯನ್ನು ಕೆಡಿಸಬಲ್ಲವಾದರೂ, ಸಾಮಾಜಿಕವಾಗಿ ಅವು 'ಅಪಾಯಕಾರಿ'ಯಲ್ಲವಾದ್ದರಿಂದ ಅವುಗಳ ಬಗ್ಗೆ ಸಮಾಜದ ವಿರೋಧವಿಲ್ಲ.

ಗಂಡು-ಹೆಣ್ಣಿನ ಸಂಬಂಧ ಮೂಲತಃ ಎರಡು ಬಗೆಯದು. ತಾಯಿ-ಮಗನ ಸಂಬಂಧ, ತಂದೆ-ಮಗಳ ಸಂಬಂಧ. ಇವನ್ನು ವೈಪರೀತ್ಯಗಳೆಂದು (Complexes) ಅರ್ಥೈಸಬಾರದು ಎಂದು ನನ್ನ ಕೋರಿಕೆ. ಉಳಿದ ಎಲ್ಲಾ ಸಂಬಂಧಗಳು ಈ ಮೂಲ ಸಂಬಂಧಗಳ ಬಳಸು ರೂಪಗಳು ಮಾತ್ರ. ಈ ಮೂಲ ಸಂಬಂಧಗಳಲ್ಲಿ ಭಾವನಾತ್ಮಕ ತೊಡಕುಗಳನ್ನು ಹೊಂದಿರುವವರು, ದಾಂಪತ್ಯ ನಿಷ್ಠೆಯನ್ನು ಏರ್ಪಡಿಸಿಕೊಳ್ಳುವುದಾಗಲಿ, ಉಳಿಸಿಕೊಳ್ಳುವುದಾಗಲಿ ಕಷ್ಟ. ದಾಂಪತ್ಯ ನಿಷ್ಠೆಯನ್ನು ಕಾಯ್ದುಕೊಳ್ಳಲಾಗದವರ ಸಮಸ್ಯೆಯೆಂದರೆ, ತಾಯಿ-ತಂದೆಯಿಂದ ಪಡೆದ ಪ್ರೀತಿ-ಭದ್ರತೆಗಳನ್ನು ಒದಗಿಸಿಕೊಡಬಲ್ಲವರಿಗಾಗಿ ದಾಂಪತ್ಯದ ಆಚೆ ಹುಡುಕುವ ಪ್ರಯತ್ನ. ಇದರ ನಿರ್ವಹಣೆ, ಕಲೆ-ಸಾಹಿತ್ಯಗಳಲ್ಲಿ 'ಮುಕ್ತ ಸಂಬಂಧ'ಗಳ ಹುಡುಕಾಟವೆಂಬಂತೆ ಚಿತ್ರಿತವಾಗಿ, ಸಹಜೀವಿಗಳ, 'ದೊಡ್ಡವರ' 'ಸಮ್ಮತಿ'ಯನ್ನು ಬಯಸುವ ಯತ್ನವಾಗುತ್ತದೆ. ಸಾಮಾಜಿಕ ಮತ್ತು ಕೌಟುಂಬಿಕ ನೆಲೆಗಳಲ್ಲಿ 'ಲಂಪಟತನ'ವೆನಿಸಿ ಟೀಕೆಗೆ ಒಳಗಾಗುತ್ತದೆ. ನೀವು ಬಳಸುವ 'ಸಿದ್ಧಪ್ರಸಿದ್ಧ', 'ಜಾಣಉಕ್ತಿ', 'ಚಮಕ್', 'ಮಾಯಾಕೋಲಾಹಲ' ಮುಂತಾದ ಶಬ್ದಗಳು, 'ವಿವಾಹೇತರ ಸಂಬಂಧ'ದ ಬಗೆಗಿನ ನಿಮ್ಮ ಗಾಢ ನೈತಿಕತೆಯನ್ನು, ಅಸಮ್ಮತಿಯನ್ನು ಧ್ವನಿಸುತ್ತವೆ.

ನನ್ನ ದಾಂಪತ್ಯ ನಿಷ್ಠೆಯನ್ನು ಬದಲಿಸಬೇಕೆನ್ನಿಸುವಂಥ ಅಥವಾ ಅದನ್ನು ಪರೀಕ್ಷೆಗೊಡ್ಡುವಂಥ ಪ್ರಸಂಗ ನನಗೆ ಈವರೆಗೆ ಎದುರಾಗಿಲ್ಲ.



ಮಮತಾ ಜಿ. ಸಾಗರ

ಕವಿ, ಚಿಂತಕಿ. ಹೈದರಾಬಾದಿನಲ್ಲಿ ಹವ್ಯಾಸಿ ಪತ್ರಕರ್ತೆ.

# ದಾಂಪತ್ಯ ನಿಷ್ಠೆ= ಹೆಣ್ಣಿನ ನಿಷ್ಠೆ ?

ದಾಂಪತ್ಯ ನಿಷ್ಠೆ ಅಂದಕೂಡಲೆ ಹೊಳೆಯುವುದು ಅದಕ್ಕೆ ನೇರವಾಗಿ ಸಂಬಂಧಿಸಿದ ಕೆಲವು associationಗಳು. ಪಾತಿವ್ರತ್ಯ, ಅನೈತಿಕವಲ್ಲದ ಸಂಬಂಧ, ಗಂಡ-ಹೆಂಡಿರ ಮಗು ಗಂಡನಿಗೆ ಸೇರಿದ್ದೋ ಅಲ್ಲವೋ ಎನ್ನುವ ಪ್ರಶ್ನೆ ಇತ್ಯಾದಿ. ಸಾಮಾಜಿಕ ಮನ್ನಣೆಯ ಸರಹದ್ದಿನ ಆಚೆ ಈಚೆ ಕಾಣಸಿಕೊಳ್ಳುವ ಈ ಮಾನದಂಡಗಳನ್ನು ನೈತಿಕತೆ ಮತ್ತು ನಿಷ್ಠೆಯ ಅಡಿಪಾಯದ ಮೇಲೆ ನಿರ್ಮಾಣ ಮಾಡಲಾಗಿರುತ್ತದೆ. ಈ ನಿಷ್ಠೆ-ನೈತಿಕತೆಯ ಪ್ರಶ್ನೆ ಹುಟ್ಟಿಕೊಳ್ಳುವುದು ಯಾಕೆ? ಕೆಲವು ವಿಷಯಗಳನ್ನು ಹತೋಟಿಯಲ್ಲಿಡುವುದಕ್ಕಾಗಿ!(?) ಹತೋಟಿ ಅಂದ ತಕ್ಷಣ ಎರಡು ಗುಂಪುಗಳು; ಒಂದರ ಮೇಲೆ ಇನ್ನೊಂದರ ಹತೋಟಿ ಅನ್ನುವುದಂತೂ ಸ್ಪಷ್ಟ. ದಾಂಪತ್ಯಕ್ಕೊಳಗಾಗುವುದು ಗಂಡು, ಹೆಣ್ಣು ಎಂಬ ಎರಡು ಗುಂಪಿಗೆ ಸೇರಿದವರು. ಇಲ್ಲಿ ಮೂರ್ತವಾಗಿ ಕಾಣುವುದು ದೈಹಿಕ ಸಂಬಂಧ ಹಾಗೂ ಅದಕ್ಕೆ ಸಂಬಂಧಿಸಿದ ಹಕ್ಕುಗಳು. ವಿಭಿನ್ನ ಸಾಮಾಜಿಕ ಒತ್ತಡಗಳಿಗೆ ಒಳಗುಪಡಿಸಲಾಗುವ ಹೆಣ್ಣಿನ ದೇಹವು, ದಾಂಪತ್ಯವೆಂಬ ಅಮೂರ್ತ ವಲಯದಲ್ಲಿ, ಪ್ರಧಾನವಾಗಿ ಹಿಂಸೆಯನ್ನು ಸ್ವೀಕರಿಸುವ ದಡದಲ್ಲಿ ಇರುತ್ತದೆ. ಬಸಿರು, ಹೆರಿಗೆ ಹಾಗು ಬಾಣಂತನದ ಸಮಯದಲ್ಲಿ ಹೆಣ್ಣಿನ ದೇಹವು ದೈಹಿಕ ಹಾಗು ಮಾನಸಿಕ ಒತ್ತಡಗಳನ್ನು ಅನುಭವಿಸಿದ್ದರೂ ಸಹ, ಅದರ ನಿಷ್ಠೆಯನ್ನು ನಿರ್ಧರಿಸುವದು ಇಂಥಾ ಯಾವುದೇ ಒತ್ತಡಗಳಿಗೂ ಒಳಗಾಗದೇ ಇರುವ ಗಂಡಸಿನ ಅನಿಸಿಕೆಯ ಮೇರೆಗೆ ಸೃಷ್ಟಿಯಾಗಿರುವ ಸಾಮಾಜಿಕ ಮಾನದಂಡದ ಮೂಲಕ! ಆದ್ದರಿಂದ, ದಾಂಪತ್ಯ ನಿಷ್ಠೆಯನ್ನೊಳಗೊಂಡ ಎಲ್ಲ ವಾದ-ವಿವಾದಗಳು ಹೆಣ್ಣಿನ ದೇಹವನ್ನು ಕೇಂದ್ರವಾಗಿ ಇಟ್ಟುಕೊಂಡೇ ಹುಟ್ಟಿರುವಂಥದ್ದು ಎನ್ನಬಹುದು. ಆದ್ದರಿಂದ ಇಲ್ಲಿ, ದಾಂಪತ್ಯಕ್ಕಿಂತ ನಿಷ್ಠೆ, ಅದರಲ್ಲೂ ಹೆಣ್ಣಿನ ನಿಷ್ಠೆ ಎಂಬ ಪರಿಕಲ್ಪನೆಯ ಮೇಲೇ ಹೆಚ್ಚಿನ ಒತ್ತು ಇರುವುದನ್ನು ಮನಗಾಣಬಹುದು.

ಪಿತೃಪ್ರಧಾನ ವ್ಯವಸ್ಥೆಯ ತಾರತಮ್ಯವನ್ನು ಮನಗಂಡು ಗಂಡಸು ಅದನ್ನು ಧಿಕ್ಕರಿಸಿದಾಗ, ತನ್ನ ಸಂಗಾತಿಯು ಸಾಮಾಜಿಕ ಹೈಯರಾರ್ಕಿಯಲ್ಲಿ ಕೆಳದರ್ಜೆಯನ್ನು ಅನುಭವಿಸುತ್ತಿರುವುದನ್ನು ಅರಿತು ನೊಂದಾಗ; ಮತ್ತು ದಾಂಪತ್ಯ ನಿಷ್ಠೆ ಎತ್ತುವ 'ಸಾಮಾಜಿಕ ಪ್ರಶ್ನೆಗಳು' ಗಂಡಸನ್ನು ಕೇಂದ್ರೀಕೃತವಾಗಿಸಿಕೊಂಡು ಉದ್ಭವಿಸಿದಾಗ ಮಾತ್ರ, ದಾಂಪತ್ಯನಿಷ್ಠೆ ಎನ್ನುವುದರ ಅರ್ಥ ಸುಧಾರಿಸಬಹುದೇನೋ.



ಪ್ರಸನ್ನ

ಕವಿ, ನಾಟಕಕಾರ, ರಂಗ ನಿರ್ದೇಶಕ, ರಂಗಕರ್ಮಿ. 'ದೇಸಿ' ಎಂಬ ಗ್ರಾಮೋದ್ಯೋಗ ಕಾಯಕ ಕೂಟದ ರೂವಾರಿ. ಹೆಗ್ಗೋಡು ಖಾಯಂ ವಿಳಾಸ.



ಕಲಾಕೃತಿ: ರಮೇಶ್ ತೇರದಾಳ

# ಬಾಳೆಯ ತೋಟದ ಪಕ್ಕದ ಕಾಡಿನ...

ನಾವು ಭಾರತೀಯರು ವಿಚಿತ್ರವಾದ ದ್ವಂದ್ವದಲ್ಲಿ ಸಿಕ್ಕಿ ನರಳುತ್ತಿದ್ದೇವೆ. ನಾವೇ ಸೃಷ್ಟಿಸಿಕೊಂಡ ಇಬ್ಬಂದಿತನವಿದು. ನಾವಿಂದು ನಿಜದ ಪ್ರಪಂಚದಲ್ಲಿ ಎಲ್ಲ ಕಟ್ಟುಗಳನ್ನೂ ಹರಿದಿದ್ದೇವೆ. ಆದರೆ ಮಾನಸಿಕ ಪ್ರಪಂಚದಲ್ಲಿ, ಅದಕ್ಕೆ ತದ್ವಿರುದ್ಧವಾಗಿ ಮತ್ತಷ್ಟು ಕಟ್ಟುಬಿಗಿಯಲು ಹೊರಟಿದ್ದೇವೆ. ನಿಜದಲ್ಲಿ ಕಟ್ಟು ಹರಿಯದಿದ್ದರೆ, ಅರ್ಥಾತ್ 'free Economy', 'free trade', 'free zone'ಗಳನ್ನು ಸೃಷ್ಟಿಸದೆ ಹೋದರೆ ಲಾಭ ಬಾರದು, ಲಾಭ ಬೇಕೆಂದರೆ ನೈತಿಕತೆ ಉಳಿಯದು. ನಮ್ಮದು 'ಬಾಳೆಯ ತೋಟದ ಪಕ್ಕದ ಕಾಡಿನ ಕೋತಿಗಳ' ತಾಕಲಾಟವೇ ಸರಿ.

ನಿಜದ ಪ್ರಪಂಚದಲ್ಲಿ ಕಟ್ಟು ಹರಿಯುವುದು ಅನಿವಾರ್ಯವೇ ಆದರೆ ನಿಜದ ಅಂತರಂಗವನ್ನೂ ಬಿಡುಗಡೆ ಮಾಡಬೇಕು. ಹೆದರಿಕೆ ನಮಗೆ! ಏನಾಗಿಬಿಡುತ್ತದೆಯೋ, ನನ್ನ ಮಗಳು, ಮಗ ಎಲ್ಲಿಗೆ ತಲುಪಿಬಿಡುತ್ತಾರೋ ದೇವರೇ! ನನ್ನನ್ನು ಕೇಳಿದರೆ ಎಲ್ಲಿಗೂ ತಲುಪುವುದಿಲ್ಲ. ನೈತಿಕತೆಯೆಂಬುದು ವೈಯಕ್ತಿಕ ಜವಾಬ್ದಾರಿಯಾದಾಗ ಮಾತ್ರ, ಆಧುನಿಕ ಯುಗವನ್ನು ನಿಭಾಯಿಸಬಲ್ಲೆವು ನಾವು. ಸಾಂಸ್ಥಿಕವಾದ ಮಠಗಳು, ಮದುವೆಗಳು, ಪೊಲೀಸು ಠಾಣೆಗಳು ಮನುಷ್ಯನ ಮನಸ್ಸನ್ನು ನಿಗ್ರಹಿಸಲಾರವು, ಮತ್ತಷ್ಟು ಹೊಲಸು ಮಾಡಿಯಾವು ಅಷ್ಟೆ.



# ಕಾಮ, ಪ್ರೇಮವಾಗಿ ವಾತ್ಸಲ್ಯವಾಗಿ ಮಾಗುವುದು

**ಜ್ಯೋತಿ ಗುರುಪ್ರಸಾದ್**

ಕಾರ್ಕಳದ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕಿ, ಕವಿ, ಹರಿತ ಓದುಗಾರ್ತಿ.

ಯಾವುದೇ 'ನಿಷ್ಠೆ' ಬಾಯ್ಬಿಟ್ಟು ಹೇಳುವಂಥದ್ದಲ್ಲ. ಬಾಳುವಂಥದ್ದು. ಈ 'ದಾಂಪತ್ಯ ನಿಷ್ಠೆ'ಯ ಬಗೆಗೆ ಮಾತನಾಡುವುದು ಕಷ್ಟ. ಈ ಪದಗಳನ್ನು ಕರಾರುವಾಕ್ಕಾಗಿ ಉಚ್ಚರಿಸಿದ ಕೂಡಲೇ ನಗು ಬರುತ್ತದೆ. ಯಾವುದೋ ಫಲವನ್ನು ಅಪೇಕ್ಷಿಸುತ್ತಾ, ಕಠಿಣ ವ್ರತವನ್ನು ಕೈಗೊಂಡು, ಅದಕ್ಕಿಟ್ಟ ಶೀರ್ಷಿಕೆಯಂತೆ ಭಾಸವಾಗುತ್ತದೆ. 'ಪುತ್ರಕಾಮೇಷ್ಠಿಯಾಗ'ದಂತೆ!

ಹಕ್ಕಿ, ತನ್ನಷ್ಟಕ್ಕೆ ತಾನೇ, ಸಂಗಾತಿಯನ್ನು ಆಯ್ದುಕೊಂಡು, ಗೂಡು ಕಟ್ಟಿ, ಮರಿಯಿಟ್ಟು ಮರಿಗೆ ಹಾರಲು ಅನುವು ಮಾಡಿಕೊಡುವ ಸರಳತೆ ಮತ್ತು ಸೂಕ್ಷ್ಮತೆಯೇ ದಾಂಪತ್ಯ! ಮನುಷ್ಯನಾದ ಮಾತ್ರಕ್ಕೆ ವಿಪರೀತ ಬುದ್ಧಿಯನ್ನು ಬಳಸಿಕೊಂಡು ಕಟ್ಟುವಂಥ ಅಂತಸ್ತುಗಳ ಕಟ್ಟಡವಲ್ಲ.

'ದಾಂಪತ್ಯ' ಒಂದು ಸುಂದರ ಪದ-ಹದ. ನಿಘಂಟಿನಲ್ಲಿ ಇದರ ಅರ್ಥ-'ಗಂಡ-ಹೆಂಡತಿಯರಾಗುವಿಕೆ' ಎಂದಿದೆ! ಆದರೆ ಯಾವುದೇ ಸಾಂಪ್ರದಾಯಿಕ ಮದುವೆಯ 'ಘಟನೆ' ನಡೆದಾಕ್ಷಣ ದಾಂಪತ್ಯ ಆರಂಭವಾಗಿಬಿಡುವುದಿಲ್ಲ. ಆ ಗಂಡು-ಹೆಣ್ಣುಗಳು ದಂಪತಿಗಳೂ ಅಲ್ಲ. ನೋಟಕ್ಕೆ, ವೇಷ-ಭೂಷಣಗಳಲ್ಲಿ ಅವರ 'ಗೃಹಸ್ಥಾಶ್ರಮ' ಕಾಣಿಸಿದರೂ, ದಾಂಪತ್ಯದ ಸ್ವರೂಪ ನಿಖರವಾಗುತ್ತಾ ಹೋಗುವುದು ಪರಸ್ಪರರ ಅರಿವು, ಪ್ರೀತಿ, ವಿಶ್ವಾಸಗಳಲ್ಲಿ; ಅದಮ್ಯ ಸುರಕ್ಷಿತ ಭಾವದಲ್ಲಿ. ಭಾವಗಳ ಅಂತರಂಗದ ಮಿಲನವೇ ದಾಂಪತ್ಯ; ಇಂಥ ಐಕ್ಯ ಭಾವ ಸ್ಫುರಿಸಿದ ಕ್ಷಣವೇ, ನಿಷ್ಠೆಯೆಂಬುದು ಅಲ್ಲಿ ತಾನೇ ತಾನಾಗಿ ಉಳಿಯುತ್ತದೆ. ಕುಟುಂಬ ಸೌಖ್ಯದ ಅಲೆಯ ಹೊನಲು ಅಲ್ಲಿ ಹರಿಯಲು ಆರಂಭವಾಗುತ್ತದೆ. ಕಾಮ, ಪ್ರೇಮವಾಗಿ, ವಾತ್ಸಲ್ಯವಾಗಿ ಹರಿಯುವುದೇ ದಾಂಪತ್ಯ ನಿಷ್ಠೆ.



ದೇವದಾಸ್



## ಸುಮತೀಂದ್ರ ನಾಡಿಗ

ಹುರುಪಿನ ಹಿರಿ ಸಾಹಿತಿ. ಕನ್ನಡ ನವ್ಯ ಸಂವೇದನೆಯ alter ego. ದೇಶ ವಿದೇಶಗಳಲ್ಲಿ ಅಧ್ಯಾಪನ, ಪುಸ್ತಕ ಮಾರಾಟ, 'ನ್ಯಾಶನಲ್ ಬುಕ್ ಟ್ರಸ್ಟ್'ನ ಅಧ್ಯಕ್ಷತೆ ಎಲ್ಲಾ ಆಗಿ ಈಗ ಪೂರ್ಣಾವಧಿ ಕಾವ್ಯನಿರತ.

# ಪ್ರೀತಿ ಬೆಂಕಿಯ ಅಂಗಿ

ನಾನು ನಟಿಸುವುದಿಲ್ಲ ಅಂತ ಗೊತ್ತಿದೆ ನಿನಗೆ
ನನ್ನ ಬಗ್ಗೆಯೆ ಉಂಟು ನನಗೆ ಅನುಮಾನ
ಎಂಥೆಂಥ ಅನುಮಾನ! ನಂಬಿದರೆ ನಂಬು, ಬಿಡು,
ಪರನಾರಿ ಸೋದರತೆ ನನಗಸಾಧ್ಯ

ಪರನಾರಿ ಸೋದರತೆ ಸಾಧ್ಯವಿಲ್ಲೆಂದರೂ
ಸಾಧ್ಯವಾದದ್ದುಂಟು ಹಲವು ಬಾರಿ
ನನ್ನ ಲೋಕದ ನಂಟು ಕಸಿಮಾಡೋ ಬಗೆ ಬೇರೆ
ನನಗೆ ಹೊರತಾಗಿ ಇದೆ ಲೋಕ ನೀತಿ

ಅನೀತಿ ನನಗಿಲ್ಲವೇ, ನನ್ನದೇ ನೀತಿ ಇದೆ
ಇಲ್ಲದಿದ್ದರೆ ಸತ್ಯ ಮಾಚುತಿದ್ದೆ
ಮಾನವೀಯತೆ ನಂಟು ಕಗ್ಗಂಟು ಆದರೂ
ನಂಬಿರುವೆ ನಾಳೆಗದು ಗಂಟು ನನಗೆ

ನಿಧಿ ಮಾತ್ರ ಅಲ್ಲ ಅದು, ನನ್ನ ದಾರಿಯ ಬುತ್ತಿ
ಅದರ ಅಕ್ಷಯವಿರಲಿ ನಮ್ಮ ಬಾಳು
ಎಷ್ಟೆಷ್ಟೋ ಜೀವಗಳ ಬೆಳೆಸುವುದು ಸಾಧ್ಯವಿದೆ
ಬೇರೆ ದಾರಿಗಳುಂಟೆ ನೀನೆ ಹೇಳು

ನೀನು ಮರೆತರೆ ಏನು ಬೇರೆಯವರಿದ್ದಾರೆ
ಅಂದುಕೊಳ್ಳುವ ಬುದ್ಧಿ ನನಗೆ ಇಲ್ಲ
ಇರುವ ಸಂಬಂಧಗಳ ಉಳಿಸಿಕೊಳ್ಳುವುದಕ್ಕೆ
ಸಪ್ತಸಾಗರ ಕೂಡ ಅಡ್ಡಿಯಲ್ಲ

ನೀನು ನನ್ನವಳಾಗಿ ಇರುವುದಷ್ಟೇ ಬೇಕು
ಕಡಲಿದ್ದರೂ ಇರಲಿ ನಮ್ಮ ನಡುವೆ
ನೀ ನನಗೆ ಕೊಟ್ಟಿರುವ ಪ್ರೀತಿ ಬೆಂಕಿಯ ಅಂಗಿ
ಯಾರೇನೇ ಅಂದರೂ ನಾನು ತೊಡುವೆ.



## ಉಮಾ ರಾವ್

ಆಧುನಿಕ ಸಂವೇದನೆಯ ಕತೆ, ಕಾದಂಬರಿ, ಅಂಕಣ ಬರಹಗಾರ್ತಿ. ರಂಗ ಭೂಮಿ, ಪ್ರವಾಸ ಇವರ ಹವ್ಯಾಸ.

# ಖಾಸಗಿ ವ್ಯಾಕರಣ

ಪ್ರತಿ ವ್ಯಕ್ತಿಯಂತೆ ಪ್ರತಿ ದಾಂಪತ್ಯವೂ, ತನ್ನದೇ ಲಯ, ವ್ಯಾಕರಣ ಮತ್ತು ಮೌನವನ್ನು ಹೊಂದಿರುತ್ತದೆ. ಭೌತಿಕ, ಭಾವನಾತ್ಮಕ, ಐಹಿಕ, ಕೌಟುಂಬಿಕ ಎಂದು ವಿಂಗಡಿಸಲಾಗುವ ಎಲ್ಲಾ ಕಕ್ಷೆಗಳನ್ನೂ ಇದು transcend ಮಾಡಿ (ಮೀರಿ) ಬೆಳೆಯುತ್ತಿರುತ್ತದೆ. ಹೀಗಾಗಿ ನಿಷ್ಠೆ ಮತ್ತು ಅ'ನಿಷ್ಠೆ'ಯ ಬಗ್ಗೆ, ಟ್ರಾಫಿಕ್‌ರೂಲ್‌ಗಳ ಬಗ್ಗೆ ಮಾತಾಡಿದಂತೆ ಸಾರಾಸಗಟಾಗಿ ಮಾತಾಡಲಾಗುವುದಿಲ್ಲ. ಸ್ನೇಹದ ಅತ್ಯುತ್ತಮ ನೆಲೆಯಾಗಿರುವ ದಾಂಪತ್ಯ, ಪರಸ್ಪರರ ಬೆಳವಣಿಗೆಗೆ ಎಡೆಯಿದ್ದಷ್ಟೂ ವಿಶಿಷ್ಟವಾಗಿರುತ್ತದೆ. ಹೀಗಾಗಿ ಮುಕ್ತ ಸಂಬಂಧ, ಅ'ನಿಷ್ಠೆ'- ಇವೆಲ್ಲ ಆಯಾ ದಾಂಪತ್ಯದ ಖಾಸಗಿ ವಿನ್ಯಾಸಕ್ಕೆ, ಆಯ್ಕೆಗೆ ಸಂಬಂಧಿಸಿದ ಒಳಸಂಗತಿಯೇ ಹೊರತು, ಹೊರಗಿನದ್ದಲ್ಲ.






## ನಾಗರಾಜ ಹುಯಿಲಗೋಳ

**ಮುಂಬಯಿಯ ನಾನಾವತಿ ಆಸ್ಪತ್ರೆಯಲ್ಲಿ ಕ್ಯಾನ್ಸರ್ ವಿಭಾಗದ ಮುಖ್ಯಸ್ಥ. ಛಾಯಾಗ್ರಹಣ, ಕಲೆ, ಕಾವ್ಯ, ಸಂಗೀತ, ಸಿನಿಮಾದಲ್ಲಿ ಹಿಂಗದ ಮೋಹ. ಕ್ಯಾನ್ಸರ್ ಕ್ಷೇತ್ರದಲ್ಲಿ ಸಂಶೋಧಕ. 'ಇಚ್ಛಾಮರಣ'ದ ಪ್ರತಿಪಾದಕ.**


# ಒಡೆತನ ತಂದ ನಿಷ್ಠೆ

ಪ್ರಕೃತಿ ಉಳಿದೆಲ್ಲ 'ಪ್ರಾಣಿ'ಗಳನ್ನು ಸೃಷ್ಟಿಸಿದ ಹಾಗೇ ಮನುಷ್ಯನನ್ನೂ ರೂಪಿಸಿದೆ. ಭೂಮಿಯ ಮೇಲೆ, ಬಹುಕಾಲ, ಸ್ಪರ್ಧಾ ಜೀವನ ನಡೆಸಿ, ಗೆಲ್ಲಲು ಅನುಕೂಲವಾಗುವಂತೆ ಪ್ರಾಣಿಗಳಲ್ಲಿ ತಳಿ ಅಭಿವೃದ್ಧಿ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ಒಂದು ಹೆಣ್ಣು/ಗಂಡು ಸಂಗಾತಿಗೆ ಅನೇಕ ಗಂಡು/ಹೆಣ್ಣು ಸಂಗಾತಿಗಳಿದ್ದಾಗ ವಂಶವಾಹಿಗಳ ವಿಸ್ತೃತ ಸಮ ಪ್ರಸರಣ ಸಾಧ್ಯ. ಜೀವಿಯ ಹೊರ, ಒಳ ಗುಣಗಳನ್ನು ನಿರ್ಧರಿಸುವ 'ವಂಶವಾಹಿ' (ಜೀನ್)ಗಳು ಬೇರೆ ಬೇರೆ ಬಗೆಯ ಸಂಯೋಜನೆಯಲ್ಲಿ ಮಿಳಿತಗೊಳ್ಳಲು ನಿಸರ್ಗವೇ ಹೂಡಿರುವ ಹುನ್ನಾರ ಇದು. ಹಾಗಿದ್ದ ಮೇಲೆ 'ಸೃಷ್ಟಿಸಹಜ'ವಾದ ವಿದ್ಯಮಾನ ಎಂದು ನಾವು ಬಣ್ಣಿಸಬಹುದಾದದ್ದು ಬಹುಪತ್ನಿತ್ವ/ಬಹುಪತಿತ್ವಗಳನ್ನೇ. ಆದರೆ ಹಣ, ನಾಗರಿಕತೆ, ಏರುತ್ತಿರುವ ಜನಸಂಖ್ಯೆ 'ನಿಸರ್ಗಸಹಜ'ವಾದ ವಿನ್ಯಾಸಕ್ಕೆ ಇಂಬುಕೊಟ್ಟಿಲ್ಲ.

ಅಲೆಮಾರಿಯಾಗಿದ್ದ ಮನುಷ್ಯ, ಭೂಮಿ, ಕಾಣಿ, ಧನ,ಕನಕಗಳನ್ನು ಗುಡ್ಡೆಹಾಕಿಕೊಳ್ಳುತ್ತಲೇ ಸ್ವಾರ್ಥಿಯಾಗಿ ಮಾರ್ಪಟ್ಟ. ತನ್ನ ನಂತರ, ತನ್ನ ಆಸ್ತಿ-ಭೂಮಿಯನ್ನು ಇನ್ಯಾರದೋ ಆಗಿರಬಹುದಾದ ಸಂತಾನಕ್ಕೆ ಬಿಟ್ಟು ಹೋಗಬೇಕು, ಅಥವಾ ತನ್ನದೇ ಅಸಂಖ್ಯ ಅಕ್ರಮ ಸಂತಾನಗಳಿಗೆ ಹರಿದು ಹಂಚಬೇಕು-ಈ ಭಯ ಅವನನ್ನು ಮದುವೆ, ಏಕಪತ್ನಿತ್ವ/ಪತಿತ್ವದಂತಹ ಸಾಮಾಜಿಕ ಕಟ್ಟುಕಟ್ಟಳೆಗಳನ್ನು ನಿರ್ಮಿಸಿಕೊಳ್ಳಲು ಪ್ರೇರೇಪಿಸಿತು. ಇದರ ಜೊತೆ ಧರ್ಮ, ಆಚರಣೆ, ಸಂಪ್ರದಾಯಗಳು ಸೇರಿ 'ಮದುವೆ' ಅರ್ಥಾತ್ 'ದಾಂಪತ್ಯ ನಿಷ್ಠೆ'ಯನ್ನು ಮೌಲ್ಯವನ್ನಾಗಿ ರೂಪಿಸಿರಬೇಕು.

ಹೆಣ್ಣು, ಗಂಡು ಪರಸ್ಪರರೆಡೆಗೆ ತೋರುವ ಲೈಂಗಿಕ ನಿಷ್ಠೆ ಅತ್ಯಂತ ಗಂಭೀರ ರೂಪದಿಂದ ಹಿಡಿದು ಹಾಸ್ಯಾಸ್ಪದ ಅನ್ನಿಸುವ ತನಕ ಸಾಗಿದೆ. ಒಂದು ಪಂಗಡದ ಹೆಂಗಸರು, ಪುರುಷ ಸಂಗಾತಿಯ ದೇಹದ ಮೇಲೆ ತಮ್ಮ ಹೆಸರನ್ನು ಹಚ್ಚೆ ಹೊಯ್ದು ಅವರನ್ನು ಜೋಪಾನ ಮಾಡುತ್ತಿದ್ದರು. ಇನ್ನೊಂದು ಆಫ್ರಿಕನ್ ಬುಡಕಟ್ಟು ಜನಾಂಗದ ಆಚರಣೆಯೆಂದರೆ, ಋತುಸ್ರಾವದ ದಿನಗಳಲ್ಲಿ ಹೆಂಗಸರನ್ನು ಪ್ರತ್ಯೇಕ ಗೂಡಿನಲ್ಲಿಟ್ಟು, ಅವರ ಸಂತಾನ

ಚಕ್ರದ ಮಾಹಿತಿ ಊರಿಗೆಲ್ಲಾ ತಿಳಿಯುವಂತೆ ಮಾಡುವುದು. ಸಕ್ರಮ ಅಥವಾ ಅಕ್ರಮ ಸಂತಾನ ಗುರುತಿಸಲು, ನಿಯಂತ್ರಿಸಲು ಈ ವಿಧಾನ ಸಹಾಯಕರವಾಗಿತ್ತು. ಕ್ರಿಶ್ಚಿಯನ್ ಧರ್ಮವಂತೂ ವ್ಯಭಿಚಾರವನ್ನು ಅತ್ಯಂತ ಹೀನ 'ಪಾಪ' ಎಂದು ಹೇಳುತ್ತದೆ.

ಈಗೆಲ್ಲಾ ಬೇರೆಯದೇ ಚಿತ್ರ ನಮ್ಮ ಕಣ್ಣ ಮುಂದಿದೆ. ಮುರಿದು ಬೀಳುವ ಮದುವೆಗಳು, ವಿಚ್ಛೇದನೆ, ಪರಸ್ಪರ ಹೊಂದಾಣಿಕೆಯಾಗದ ಸಂಗಾತಿಗಳು, ಕಲೆ-ಸಾಹಿತ್ಯ-ಸಂಗೀತ- ನಾಗರಿಕತೆಯ ಉತ್ತುಂಗ ತಲುಪಿರುವ ಮನುಷ್ಯನ 'ಸ್ವಾತಂತ್ರ್ಯ'ದ ಪರಿಕಲ್ಪನೆ, ಮದುವೆಯನ್ನು ಒಂದು ಖೆಡ್ಡಾವನ್ನಾಗಿಯೂ ಪರಿವರ್ತಿಸಿವೆ.

ಸಂತಾನ ನಿಯಂತ್ರಣ, ಆರ್ಥಿಕವಾಗಿ ಸ್ವಾವಲಂಬಿಯಾಗಿರುವ ಮಹಿಳೆ, ಏಕಾಕಿಯಾಗಿಯೂ ಮಕ್ಕಳ ಹೊಣೆಗಾರಿಕೆಯನ್ನು ಸಮರ್ಪಕವಾಗಿ ಪಾಲಿಸಬಲ್ಲ ಗಂಡು/ಹೆಣ್ಣು, ವಿವಾಹ ಬಂಧನದಾಚೆ ಒಂಟಿತನ ನೀಗಿಸಿಕೊಳ್ಳಬಲ್ಲ ಜೀವನ ವಿಧಾನ, ಇಂದು 'ದಾಂಪತ್ಯ ನಿಷ್ಠೆ'ಯನ್ನು ಒಂದು ಸಾಪೇಕ್ಷ ಮೌಲ್ಯವಾಗಿಸಿರಬಹುದು.

ಒಟ್ಟಾರೆ, ದಾಂಪತ್ಯ ನಿಷ್ಠೆ ಎಂದರೆ ಒಡೆತನ, ನೆಲೆಗೊಳ್ಳುವಿಕೆ. ಅ'ನಿಷ್ಠ' ಸಂಬಂಧ ಅಂದರೆ ಅನಿರ್ಬಂಧಿತ ಸ್ವಾತಂತ್ರ್ಯ; ಆಯ್ಕೆ.

## ಮೈಮನಗಳ ಸುಳಿಯಲ್ಲಿ



**ಶರದ್ ಸೌಕೂರ್**

ಸಿನಿಮಾ, ಕಲೆ, ಸಮಾಜ ಶಾಸ್ತ್ರ ತೀವ್ರ ಆಸಕ್ತಿಯ ಸಂಗತಿಗಳು. ಮುಂಬಯಿಯಲ್ಲಿ ಕಾರ್ಪೋರೇಷನ್ ಬ್ಯಾಂಕಿನಲ್ಲಿ ಮುಖ್ಯ ನಿರ್ವಾಹಕ.

ಈ ಫಿಡೆಲಿಟಿಯ ಪರಿಕಲ್ಪನೆಯೆಂಬುದು ಪಾಶ್ಚಿಮಾತ್ಯ ಜೀವನ ಶೈಲಿಯ ಅನುಕರಣೆಯ ಬಗೆಗಿನ ಆಕರ್ಷಣೆ ಮತ್ತು ನಮ್ಮ ರೂಢಿಗತ ನೈತಿಕ ಮೌಲ್ಯಗಳ ನಡುವಿನ ತಿಕ್ಕಾಟದಿಂದ ಉತ್ಪತ್ತಿಯಾದ ಕೆಲವು ವಿರೋಧಾಭಾಸಗಳಲ್ಲೊಂದು. ನಾವು ತುಂಬ 'ನಿಷ್ಠ' ಎಂದುಕೊಂಡ ಸಂಬಂಧವೇ ಒಳಗೆಲ್ಲೋ ಅ'ನಿಷ್ಠ' ಆಗಿರಬಹುದು. ಹಾಗೂ ಅದಕ್ಕೆ ತದ್ವಿರುದ್ಧವೂ ಸಹ. ಕೊನೆಗೂ, ಮಾನವೀಯ ನೆಲೆಯಲ್ಲಿ ಅರ್ಥಪೂರ್ಣವಾಗುವ ಸಂಬಂಧಗಳೇ ಮುಖ್ಯವಾಗುತ್ತವೆ. ಅದಕ್ಕೇ ತಲೆಯ ಮೇಲೊಬ್ಬಳು, ತೊಡೆಯ ಮೇಲೊಬ್ಬಳನ್ನು ಕೂಡಿಸಿಕೊಂಡ ಶಿವ, ಹಲವು ಗೋಪಿಕೆಯರ ನಲ್ಲ ಕೃಷ್ಣ ಅ'ನಿಷ್ಠ' ಎಂದು ಅನಿಸುವುದಿಲ್ಲ. ಹಾಗೆಯೇ 'ಮೈಮನಗಳ ಸುಳಿಯಲ್ಲಿ'ನ ಮಂಜುಳೆ ಮತ್ತು 'ಸಾಂಗತೇ ಐಕಾ' ('ಭೂಮಿಕಾ' ಚಿತ್ರಪಟ)ದ ಹಂಸಾ ವಾಡಕರ್ ಸಹ.





ದೇಶ ಕುಲಕರ್ಣಿ

# ಚಿತ್ರದಲ್ಲಿನ ನೆರಳು

ಜೀವನ ಎಲ್ಲಿ ಕೊನೆಯಾಗಿ, ಕತೆ ಎಲ್ಲಿ ಶುರು ಆಗುವದೋ ಅಥವಾ ಕತೆ ಎಲ್ಲಿ ಕೊನೆಯಾಗಿ ಜೀವನ ಎಲ್ಲಿ ಶುರು ಆಗುವದೋ ಎಂಬ ಅನುಮಾನ ನನಗಿದೆ. ಆದರೆ ಅದಕ್ಕಿಂತ ಮುಖ್ಯವಾದ ಪ್ರಶ್ನೆ, ಅದು ಒಂದರೊಳಗೊಂದೋ, ಅಲ್ಲ ಬೇರೆ ಬೇರೆಯೋ ಎಂಬುದು ತಾನೆ?

ಕತೆಯನ್ನು ನಾನು, ಎಲ್ಲರೂ ಹೇಳುವಂತೆ, ತಾತ-ಅಜ್ಜಿಯರ ಬಾಯಲ್ಲಿ ಕೇಳಿಲ್ಲ. ಆದರೆ ಅಪ್ಪನ ಬಾಯಲ್ಲಿ, ಬೇರೆ ಹಿರಿಯರ ಬಾಯಲ್ಲಿ ಕೇಳಿದ್ದೇನೆ. ಕೇಳಿದ್ದಕ್ಕಿಂತ ಹೆಚ್ಚು ಓದಿದ್ದೇನೆ. ಮಾಧ್ಯಮಿಕ ಶಾಲೆಯ ಮೊದಲ ಇಯತ್ತೆಯಲ್ಲಿಯೇ, ಕ್ಲಾಸಿನಲ್ಲಿ, ಅಧ್ಯಾಪಕರಿಗೆ ಪಾಠ ಹೇಳಲು ಆಗದಾಗ ಅಮೃತರಾಜನ ಕೈಯಲ್ಲಿ ಕತೆ ಹೇಳಿಸುತ್ತಿದ್ದರು. ಆ ವಯಸ್ಸಿಗೇ ಅವನನ್ನು ನಾವು ಕತೆಗಾರ ಎಂದು ಕರೆಯುತ್ತಿದ್ದವು. ಅದೆಂತಹ ಕತೆಯ ಭಂಡಾರ ಅವನದು? ಜನಪದ ಕತೆಗಳೇ, ವೀರರ ಕತೆಗಳೇ, ಪ್ರಾಣಿಗಳ ಕತೆಗಳೇ-ಯಾವದು ಕೇಳಿ, ನಿರೂಪಿಸುತ್ತಿದ್ದ. ಅಂತಹವನನ್ನು ಕಂಡರೆ ನಮಗೆಲ್ಲ ಮೆಚ್ಚಿಗೆಯೇ. ಮುಂದೆ ಹೈಸ್ಕೂಲಿನಲ್ಲಿ, ಕತೆ ಬೇರೆ ಸ್ವರೂಪವನ್ನೇ ಪಡೆಯಿತು. ಲೈಬ್ರರಿ ಮೇಷ್ಟ್ರು ವಿಜಯರಾಘವನ್, ಮಾಸ್ತಿಯವರ ಸಂಕಲನವನ್ನು ಆನಂದಮೂರ್ತಿಯ ಕೈಯಲ್ಲಿ ಕೊಟ್ಟು, ಕ್ಲಾಸಿಗಾಗಿ ಕತೆಯನ್ನು ಓದು ಎನ್ನುತ್ತಿದ್ದರು. ಆನಂದಮೂರ್ತಿ ಚರ್ಚಾಪಟು. ಅವನದು ಕಂಚಿನ ಕಂಠ. 'ಬಿಳಿಗಿರಿ ರಂಗ' ಕತೆಯನ್ನು ಅವನು ಉತ್ಸಾಹದಿಂದ ಓದುತ್ತಿದ್ದರೆ, ನಾವು ಅಷ್ಟೇ ಉತ್ಸಾಹದಿಂದ ಅದನ್ನು ಕೇಳುತ್ತಿದ್ದವು. ಮಾಸ್ತಿಯವರ ಕತೆಗಳನ್ನು ಓದಿದಾಗೆಲ್ಲ ಆನಂದಮೂರ್ತಿ ಜ್ಞಾಪಕಕ್ಕೆ ಬರುವದು ಸ್ವಾಭಾವಿಕ. ಆನಂದಮೂರ್ತಿ ಈಗಿಲ್ಲ. ಮಾಸ್ತಿಯವರಂತೆಯೇ. ನನ್ನ ಪಾಲಿಗೆ

ಇಬ್ಬರೂ ಕತೆಯಾಗಿದ್ದಾರೆ. ಯಾರೋ ಹೇಳಿದ್ದನ್ನು, ನೋಡಿದ್ದನ್ನು, ಮತ್ತೆ ನಿರೂಪಿಸುವಾಗ ಅದೂ ಕತೆಯ ಇನ್ನೊಂದು ರೂಹನ್ನು ಪಡೆಯುತ್ತದೆ ಎಂದು ಜಯಂತ ಹೇಳಿದಾಗ ನನಗೆ ತಕ್ಷಣ ಮನಸ್ಸಿಗೆ ಬಂದಿದ್ದು ಆದಿನಾರಾಯಣರಾವ್. ಅವನೂ ಮಿಡ್ಲ್ ಸ್ಕೂಲು ಪ್ರತಿಭಾವಂತನೇ. ಪ್ರೀತಿಯ ಹೆಸರು ಗುಂಡಣ್ಣ. ನಾನು ನೋಡುವ ಮುನ್ನವೇ ಅವನು ಸಿನಿಮಾ ನೋಡಿದಾಗ, ಆತುರದಿಂದ ಬಂದು, ಅದರ ಕತೆ ಹೇಳುತ್ತಿದ್ದ. ಅದೆಷ್ಟು ತನ್ಮಯತೆಯೋ ಅವನಿಗೆ? ಆ ಕಾಲಕ್ಕೇನೆ, ಷಾಟ್ ಬೈ ಷಾಟ್ ಹೇಳುತ್ತಿದ್ದ. ಶೂರನಾಯಕ ಕುದುರೆ ಮೇಲೆ ಹೋದ ಎಂದಷ್ಟೇ ಅವನು ಹೇಳುತ್ತಿರಲಿಲ್ಲ. ಕುದುರೆಯೇರಿ 'ಲಕ್ಕ ಲಕ್ಕ ಲಕ್ಕ ಲಕ್ಕ' ಎಂದು ಹೋದ-ಹೀಗೆ ಅಭಿನಯಿಸಿ ತೋರಿಸುತ್ತಿದ್ದ. ಪ್ರಪಂಚ ಪುಟ್ಟದೇನೂ ಅಲ್ಲವಲ್ಲ. ಗುಂಡಣ್ಣ ಎಲ್ಲಿದ್ದಾನೋ ಅವನೇ ಹೇಳಬೇಕು.

ಅಪ್ಪ ಮತ್ತಿತರ ಹಿರಿಯರು ಕತೆ ಹೇಳಿ ಮುಗಿದರೂ, ನಾವು, ಆಮೇಲೆ, ಆಮೇಲೆ ಎನ್ನುವ ಪಟ್ಟು ಮಾತ್ರ ಬಿಡುತ್ತಿರಲಿಲ್ಲ. ಅವರಿಗೂ ರೋಸಿ ಹೋಗಿ, ಕಡೆಯ ತೆರೆ ಎಳೆಯುವಂತೆ ಕತೆ ಕಾಡಿಗೆ ಹೋಯಿತು, ನಾವು ಊರಿಗೆ ಬಂದೆವು ಎಂದು ಮುಗಿಸುತ್ತಿದ್ದರು. ನಮ್ಮನ್ನು ವಾಸ್ತವಕ್ಕೆ ಮರಳಿಸುವ ಯತ್ನ ಈ ಮಾತಿನಲ್ಲಿದೆ. ಕತೆ ಬೇರೆ ಜೀವನ ಬೇರೆ, ಒಂದರದು ಕಾಡು, ಇನ್ನೊಂದರದು ಊರು. ಕತೆ ಏನಿದ್ದರೂ ಕಾಡಿಗೆ ಸಂಬಂಧಿಸಿದ್ದು, ಅದಕ್ಕೇ ಮೀಸಲಾದದ್ದು. ಬದುಕು ಊರಿಗೆ ಸಂಬಂಧಿಸಿದ್ದು. ಅಂದರೆ ಯಾವದೋ ಮಿತಿಯಲ್ಲಿ ಇರಬೇಕಾದದ್ದು. ಕಾಡಿನಲ್ಲಿ ಈ ನಿರ್ಬಂಧವಿಲ್ಲ. ಕೆಲವು ವಾಕ್ಯಗಳಿಗೆ ಎಷ್ಟೊಂದು ರೂಪಕ ಶಕ್ತಿ ಇರುತ್ತದೆ! ಸುಮ್ಮನೆ ಆಡಿಬಿಡುತ್ತಾರೆ.

ಈಚೆಗೆ ನೋಡಿದ ಚಿತ್ರವೊಂದರಲ್ಲಿನ ಘಟನೆಯನ್ನು ಇದಕ್ಕೆಲ್ಲ ಕೊಂಡಿ ಹಾಕುವ ಯತ್ನ ನನ್ನ ಮನಸ್ಸಿನಲ್ಲಿ ನಡೆಯುತ್ತಿದೆ. ಅದು ಚಿತ್ರದ ಶಿಖರ ಭಾಗ, ಕೊನೆ. ಅವಕಾಶವಿದ್ದರೂ, ಕಡೇ ಗಳಿಗೆಯಲ್ಲಿ ಮನಸ್ಸನ್ನು ನಿಯಂತ್ರಿಸಿಕೊಂಡು, ತಪ್ಪು ಎನ್ನಬಹುದಾದದ್ದನ್ನು ಮಾಡದೆ, ಉದಾತ್ತತೆಯಿಂದ ಬೀಗಿದ ನಾಯಕ ಹಳೆಯ ಕಾಲದ ಫೋಟೋವನ್ನು ತನ್ಮಯತೆಯಿಂದ ನೋಡುತ್ತ ಕೂತಿರುತ್ತಾನೆ. ತಾನು, ತನ್ನ ಹೆಂಡತಿ, ಕಿರಿಯ ವಯಸ್ಸಿನ ಹೆಣ್ಣುಮಗು ಇರುವ ಸಂಸಾರದ ಫೋಟೋ ಅದು. ಎಲ್ಲರೂ ನಲಿಯುತ್ತಿದ್ದಾರೆ. ಆ ಫೋಟೋದಲ್ಲಿರುವ ಹೆಂಡತಿ, ಈಗ ತರುಣಿಯಾಗಿರುವ ಆ ಮಗು, ದಾರಿಯಲ್ಲದ ದಾರಿ ಹಿಡಿದಿದ್ದಾರೆ. ತಾನು ಮಾತ್ರ ದಾರಿ ತಪ್ಪಿಲ್ಲ. ಆ ಹೆಮ್ಮೆಯ ಸಂತಸ ಅವನಲ್ಲಿದೆ. ಇರಬಾರದ ಸನ್ನಿವೇಶದಿಂದ ಹಿಂತಿರುಗಿ, ಕ್ರುದ್ಧಳಾದ ಅವನ ಹೆಂಡತಿ, ಅವನಿಗೆ ತಿಳಿಯದಂತೆ ಅವನ ತಲೆ ಹಿಂದೆ ಪಿಸ್ತೂಲು ಹಿಡಿದು ನಿಂತಿದ್ದಾಳೆ. ಅವನ ಹಿಗ್ಗೆಲ್ಲಿ, ಅವಳ ವ್ಯಗ್ರತೆಯೆಲ್ಲಿ? ಪಿಸ್ತೂಲಿನ ಗುಂಡಿ ಒತ್ತಿ, ಅವನ ತಲೆಯ ರಕ್ತ ಎದುರು ಗೋಡೆಗೆ ಜಿಲ್ಲೆಂದು ಚಿಮ್ಮುತ್ತದೆ. ಫೋಟೋ ಹೊಮ್ಮಿಸುವ ಭಾವ, ಇವರಾರ ಮಾತಿಗೂ ದಕ್ಕದ್ದು. ಅದು ಕತೆಯಲ್ಲಿರುವ 'ತೀರು.'

ಆನಂದಮೂರ್ತಿಯ ವಿಷಯ ಹೇಳಿದೆನಲ್ಲ? ಆ ಹೈಸ್ಕೂಲಿನಲ್ಲಿಯೇ ಇನ್ನೊಂದು ಸಂಗತಿ ನಡೆಯಿತು. ನಾನು ಇಷ್ಟಪಡುವ ಕವಿ ಒಬ್ಬರು, ಅಲ್ಲಿ ನಮಗೆ ಮೇಷ್ಟು. ಕವಿಯಾಗಿ ಅವರನ್ನು ನಾನು ಕಂಡಿದ್ದರೆ, ವಿದ್ಯಾರ್ಥಿಸಹಜ ಪ್ರೇಮದಿಂದ ಉಳಿದವರು ಅವರನ್ನು ಗೌರವಿಸುತ್ತಿದ್ದರು. ಆ ಕವಿಯ ಕಾವ್ಯಧಾರೆ ರೇಡಿಯೋನಲ್ಲಿ ಬಂದಾಗ, ಆ ಸಂಬಂಧದ ಕಾರ್ಯಕ್ರಮ ಸೂಚಿಯ ಪಕ್ಕದಲ್ಲೇ, ರೇಡಿಯೋ ಮಾಸಪತ್ರಿಕೆಯೊಂದು ಅವರ ಭಾವಚಿತ್ರವನ್ನೂ ಹಾಕಿತ್ತು. ಆತ ಆಗಿನ್ನೂ ಹರೆಯದ ಯುವಕ. ಮೇಲಕ್ಕೆತ್ತಿ ಬಾಚಿದ ಗುಂಗುರುಕ್ರಾಪು. ಕ್ರಿಕೆಟ್ ಆಟಗಾರರು ತೊಡುವಂಥ ನೀಲಿ ವಿ ಗೆರೆಯ ಬಿಳೀ ಸ್ವೆಟ್ಟರು. ಒಟ್ಟಿನಲ್ಲಿ ಆಕರ್ಷಕವಾಗಿತ್ತು. ಗೆಳೆಯ-ವಿದ್ಯಾರ್ಥಿ, ಅದನ್ನು ಕ್ಲಾಸಿಗೆ ತಂದು, ಮೇಷ್ಟ್ರಿಗೂ ನಮಗೂ ತೋರಿಸಿದ್ದೇ ತೋರಿಸಿದ್ದು, ಹೆಮ್ಮೆಯಿಂದ ಬೀಗಿದ್ದೇ ಬೀಗಿದ್ದು. ಆ ವಿಷಯದ ಹೊಳಪು ತುಸು ಕಡಿಮೆಯಾದಾಗ, 'ಆಯಿತಲ್ಲ, ಆ ಫೋಟೋ ನನಗೆ ಕೊಡು, ನನಗೆ ಬೇಕು' ಎಂದು



ಕಲಾಕೃತಿಗಳು: ಮರಿಶಾಮಾಚಾರ್

ನಾನು ಗೆಳೆಯನನ್ನು ಕೇಳಿದೆ. ನನಗೆ ಕವಿ ಮುಖ್ಯವಾಗಿತ್ತು. ಅವನಿಗೆ ಮೇಷ್ಟು ಮುಖ್ಯವಾಗಿತ್ತೋ ಏನೋ. ಕೊಡುವುದಿಲ್ಲ ಎಂದು ಮೊಂಡುಹಿಡಿದ. ಕಳೆದ ವರ್ಷ ನಾನು ಗಳಿಸಿದ್ದ ಮೊದಲ ರ್‍ಯಾಂಕನ್ನು ಬೇರೆ ಈಗ ಕಿತ್ತುಕೊಂಡಿದ್ದ. 'ನೋಡು, ಮುಂದೆ ನೀನು ಇವರನ್ನು ಮರೆಯುತ್ತೀ. ಇಂಜನೀಯರಿಂಗೋ, ಮೆಡಿಕಲ್ಲೋ ಎಲ್ಲೋ ಹೋಗುತ್ತೀ ನನಗಾದರೆ ಇದು ಜೀವನಕ್ಕೆ ಸಂಬಂಧಿಸಿದ್ದು' ಎಂದು ಏನೇನೋ ಗೋಗರೆದೆ. ಅವನು ಮಾತ್ರ ಕೊಟ್ಟಿದ್ದರೆ, ಅವನು ಮನುಷ್ಯನೇ ಸರಿ. ನಾನು ಅವನನ್ನು ಕ್ಷಮಿಸಿದೆ. ಆದರೆ ಮರೆಯಲಿಲ್ಲ. ಮಾತಿನ ಸಂಪರ್ಕವನ್ನು ಉಳಿಸಿಕೊಳ್ಳಲಿಲ್ಲ. ಮೆಟ್ರಿಕ್ಯೂ ಮುಗಿಯಿಸಿ ಬೇರೆ ಬೇರೆ ಕಡೆ ಹೋದೆವು. ಈಗ ಅವನಿರಬಹುದು. ಆ ಫೋಟೋ ಇರಲಾರದು. ಆದರೆ ಆ ಕವಿ ಬರೆದ ಸಾಲುಗಳು ನನ್ನ ಮನಸ್ಸಿನಲ್ಲಿ ಗುಣುಗುಣು ಎನ್ನುತ್ತಿವೆ. ಅಂತಹ ಸಾಲುಗಳನ್ನು ನಾನು ಇನ್ನೊಂದು ರೀತಿ ಬರೆದಿರುವೆನಷ್ಟೆ?

ಪೂರ್ವ ಯೌವನದಲ್ಲಿ ನಾವು ಪ್ರೇಮ ಎಂದು ಯಾವದನ್ನು ಕರೆಯುತ್ತೇವೆಯೋ ಅದು ಪ್ರೇಮವಲ್ಲ. ಅದು ಆರಾಧನೆ. ಯಾಕೆಂದರೆ ಅದರಲ್ಲಿ ಪ್ರೇಮದ ಕೊಡು-ಕೊಳು ಇರುವದಿಲ್ಲ. ಆರಾಧ್ಯ ದೇವತೆಗೆ ಅದರ ಅರಿವಿದ್ದರೆ ತಾನೆ? ಕಾಲೇಜು ಮೊದಲಲ್ಲಿ ಹೀಗೆ ನಾನು ಆರಾಧಿಸುತ್ತಿದ್ದ ಹುಡುಗಿ, ದಾವಣಿ ಹುಡುಗಿ. ಬಲು ಬುದ್ಧಿವಂತೆ. ಕಣ್ಣೇ ದೇವಲೋಕದ್ದು, ನಾನೇ ಬರೆದು ಆಡಿ ತೋರಿಸಿದ ಮಾಕ್ ಅಸೆಂಬ್ಲಿಯಲ್ಲಿ ಮತ್ತು ಬುದ್ಧನ ಕುರಿತಾದ ಅಣಕು ದೃಶ್ಯದಲ್ಲಿ, ಅವಳಿಗೆ ಪ್ರೀತಿಯಿಂದ ಪಾತ್ರ ಕೊಟ್ಟು ನಿರ್ದೇಶಿಸಿದ್ದೆ. ಇದು ಹೊರತು ನಾನು ಅವಳು ಬೇರೆ ಮಾತಾಡಿಲ್ಲ. ಆದರೆ ಅವಳ ಮಾತು, ನಡೆನುಡಿ, ಬುದ್ಧಿ ನನ್ನೊಳಗೆ ಮೂರ್ತಿಯಾಗಿದ್ದುವು. ಆ ಆರಾಧನೆಯ ಯಾತನೆ ಅನುದಿನವೂ ನನ್ನನ್ನು ವ್ಯಾಪಿಸಿ, ತಾರುಣ್ಯದ ಹುರುಪನ್ನು ಕುಗ್ಗಿಸಿಬಿಡುತ್ತಿತ್ತು. ಯಾರಾದರೂ ಅವಳನ್ನು ಮಾತಾಡಿಸಿದರೆ ಸಾಕು, ಮನಸ್ಸಿನಲ್ಲಿಯೇ ಉರಿದುಬೀಳುತ್ತಿದ್ದೆ. ನನ್ನ ಕಣ್ಣಗಲ ಮಾತ್ರ ಅವಳಿರಬೇಕು, ಅವಳು ಅದನ್ನು ಮೀರಬಾರದು ಎಂಬ ಹಂಬಲ, ಹುಚ್ಚು ಎನ್ನುವಷ್ಟಾಯಿತು. ನನ್ನ ಕತೆಗಳ ನಾಯಕಿಯಾದ ಚಂಪಕಾ ಎಂದರೆ ಆ ಹುಡುಗಿಯೇ. ಅವಳದು ಸೌಂದರ್ಯವಲ್ಲ; ಒಂದು ದಿವ್ಯಸ್ವರೂಪ. ಕ್ಲಾಸ್ ಸೋಷಿಯಲ್ಲಿನ ಎಂಭತ್ತು ಹುಡುಗ-ಹುಡುಗಿಯರಿರುವ ಗ್ರೂಪ್ ಫೋಟೋನಲ್ಲಿ ಅವಳದು ತೀರ ಸಣ್ಣ ಮುಖ. ಅಷ್ಟೊಂದು ಜನರ ನಡುವೆ ಅವಳಿರುವ ಪ್ರಮೇಯ ತಾನೆ ಏನು ಎಂದು ಅವಳ ಮುಖವನ್ನು ಅಲ್ಲಿಂದ ತೆಗೆದೆ. ಆಟೋಗ್ರಾಫ್ ಪುಸ್ತಿಕೆಯಲ್ಲಿ ಅವಳ ಸಹಿ ಪಡೆದ ಜಾಗದಲ್ಲಿ ಅದನ್ನು ಲಗತ್ತಿಸಿದೆ. ನಮ್ಮದೇ ಕ್ಲಾಸಿನ ಇನ್ನೊಬ್ಬ ಘಟಿಂಗ ಅವಳಿಗೆ ಕಣ್ಣು ಹಾಕುತ್ತಿದ್ದಾನೆ ಎಂದು ಗೊತ್ತಾಯಿತು. ನನ್ನ ಕತೆಗಳಲ್ಲಿ ಬರುವ ಖಳನಾಯಕ ಗೋಪಿ ಎಂದರೆ ಅವನೇ. ಕ್ಲಾಸ್ ಸೋಷಿಯಲ್ಲಿನ ಸಂದರ್ಭದಲ್ಲಿ, ಕಾರಿಡಾರಿನ

ಕತ್ತಲನ್ನು ಉಪಯೋಗಿಸಿಕೊಂಡು, ಅಲ್ಲಿ ಓಡಾಡುತ್ತಿದ್ದ ಚಂಪಕಾಳ ಕೆನ್ನೆಯನ್ನು ಗೋಪಿ ಚುಂಬಿಸಿಬಿಟ್ಟ. ನನಗೆ ಇದು 'ಹಿಂದುಗಡೆ'ಯಿಂದ ತಿಳಿದುಬಂತು. ನನ್ನ ಪ್ರೇಮ ಭಾಂಡವು ಒಡೆದು ನುಚ್ಚುನೂರಾಯಿತು. 'ಯಾಕೆ ಒದ್ದಾಡುತ್ತಿ, ಗೋಪಿ ಮುತ್ತಿಟ್ಟ ನಿಮ್ಮವರನ್ನು' ಎಂದು ಮೂರನೆಯವನೊಬ್ಬ ಹೇಳಿದಾಗ ನನ್ನ ಆರಾಧ್ಯ ದೇವತೆಯ ಮೂರ್ತಿ ಮುಕ್ಕಾಯಿತು. ಮನಸ್ಸು ಖಿನ್ನವಾಯಿತು. ಗೋಪಿ ಬಂದು ಕ್ಷಮಾಪಣೆ ಕೇಳಿದ. ಎಲ್ಲ ಬಿಟ್ಟು ನನ್ನನ್ನೇನು ಇವನು ಕೇಳುವದು ಎನ್ನಿಸಿ, ನಾನು ಮಾತೇ ಆಡಲಿಲ್ಲ. ಚಂಪಕಾಳ ಮುಖಕ್ಕೆ ಲಗತ್ತಿಸಿದ ಪಿನ್ನು, ವಾತಾವರಣದ ಧಾಳಿಗೆ ಸಿಕ್ಕು, ತುಕ್ಕು ಹಿಡಿದು ಕಂದಾಗಿದೆ. ಮುಖ ಗುರುತು ಸಿಕ್ಕದ ಹಾಗೆ ಹಳದಿಯಾಗಿದೆ. ಆದರೆ ಆ ದಾವಣಿ ಹುಡುಗಿಯ ರೂಪ ಮಾತ್ರ ಹಳದಿಯಾಗಿಲ್ಲ. ಅದರ ಜಾಗೆಯನ್ನು ಅದು ಕಂಡುಕೊಂಡಿದೆ. ನನ್ನ ಹಾಗೆ ಅವಳಿಗೂ ಈಗ ಅಷ್ಟೇ ಪ್ರಾಯವಾಗಿರಬೇಕು. ಆ ಜಾಗೆಗೆ ಮಾತ್ರ ವಯಸ್ಸಾಗಿಲ್ಲ.

ನನಗೇನೂ ಸಂಬಂಧವಿಲ್ಲದ ಇನ್ನೊಂದು ಘಟನೆ, ಕಾಲೇಜಿನಲ್ಲಿ ಇನ್ನಷ್ಟು ಮುಂದುವರಿದಂತೆ, ಸಂಭವಿಸಿತು. ನನಗಿಂತಲೂ ಜೂನಿಯರ್ ಕ್ಲಾಸಿನಲ್ಲಿ ಒಬ್ಬ ಹುಡುಗಿಯಿದ್ದಳು. ಅವಳು ನಿಸ್ಸಂದೇಹವಾಗಿ ಚೆಲುವೆ. ಕೆಂಪು ಹೊಳಪಿನ ಬಣ್ಣ (ಚಂಪಕ ಹೀಗಿರಲಿಲ್ಲ). ಕಣ್ಣು-ಮೂಗು ನೇರ. ಆ ವಯಸ್ಸಿಗೇ ಭವ್ಯವಾದ ಆಕಾರ. ಎಲ್ಲರ ಮನಸ್ಸನ್ನೂ ಅವಳು ಸೂರೆಗೊಂಡಿದ್ದಳು. ಕಾಲೇಜಿನ ಅಂಗಳಕ್ಕೆ ಅವಳು ಪ್ರವೇಶಿಸಿದರೆ ಸಾಕು, ಚಂದ್ರೋದಯವಾಗುತ್ತದೆ ಎಂದು ನಮ್ಮೊಳಗೊಬ್ಬ ಹೇಳುತ್ತಿದ್ದ. ಯಾವ ಜನ್ಮದಲ್ಲಿ ಅವನು ಕಾಳಿದಾಸನಾಗಿದ್ದನೋ ಏನೋ. ಈಗಂತೂ ಇಲ್ಲಿ ಓದುತ್ತಿದ್ದ. ಹೀಗಿರುವಾಗ ಒಬ್ಬ ವಿದ್ಯಾರ್ಥಿ, (ನಮ್ಮ ಕ್ಲಾಸಲ್ಲ) ಅವನೂ ಪ್ರತಿಷ್ಠಿತ ಮನೆತದವನೇ, ಆದರೆ ನಮ್ಮೆಲ್ಲರಿಗಿಂತ ಅವನಿಗೆ ಧೈರ್ಯ, ರಸಿಕತೆ ಜಾಸ್ತಿ- ಯಾವದೋ ಮಾಯದಲ್ಲಿ ಅವಳ ಫೋಟೋ ಹಿಡಿದೇಬಿಟ್ಟ. ಅದೂ ಚೆನ್ನಾಗಿಯೇ ಬಂದಿತ್ತು. ತೆಗೆದುಕೊಂಡು ಹೋದವನೆ, ಅವಳ ಕೈಗೆ ಆ



ಛಾಯಾಚಿತ್ರಗಳು: ಎಚ್. ಚಂದ್ರಶೇಖರ್

ಫೋಟೋ ಕೊಟ್ಟೂಬಿಟ್ಟ. ಆ ಚೆಲುವೆಯೇನೋ ಸುಮ್ಮನಿದ್ದಳು. ಆದರೆ ಅವಳ ಸಂಗಾತಿ ಕುಪಿತಳಾದಳು. ಅವಳು ಕುರೂಪಿಯಾದುದರಿಂದಲೋ ಏನೋ ಮತ್ಸರಪಟ್ಟಳು ಎಂದು ಕೆಲವರು ಸಂಶಯಪಟ್ಟರು. ಕೂಡಲೇ ಪ್ರಿನ್ಸಿಪಾಲರ ಕಡೆ ದೂರು ಕೊಟ್ಟಳು. ಪ್ರಿನ್ಸಿಪಾಲರು ಆಗಿನ ಕಾಲದ, ಶಿಸ್ತಿನ, ಕಟ್ಟುನಿಟ್ಟಿನ ಮನುಷ್ಯ. ಹಿಂದೆಮುಂದೆ ನೋಡದೆ ಆ ಹುಡುಗನನ್ನು ಸಸ್ಪೆಂಡು ಮಾಡಿದರು. ಅವನ ಮನೆಗೆ ಒಂದು ಕಾಗದ ಹಾಕಿದರು. ಆ ಮನೆಯ ಹಿರಿಯರು ಅವನನ್ನು ರೂಮಿಗೆ ದಬ್ಬಿ, ಮಂಚದ ಕಾಲಿಗೆ ಕಟ್ಟಿ, ಹೊಡೆದು ಬಡಿದು ಛೀಮಾರಿ ಹಾಕಿದರು. ಆಹಾರ-ನಿದ್ರೆ ತಪ್ಪಿಸಿದರು. ಹೋಗಿ ಬಂದವರೆಲ್ಲ ಉಗಿದರು. ಕೆಲವರು ಅಧ್ಯಾಪಕರು, ಅವನ ಮನೆಗೇ ಹೋಗಿ, ವಿಶೇಷವಾಗಿ ಬೈದು, ಕೃತಾರ್ಥರಾದರು. ಕಾಲಾನುಕಾಲದಲ್ಲಿ ಆ ಹುಡುಗ ಅಮೆರಿಕೆಗೆ ಹೋದ. ಈಗ ಅವನೇನಾದನೋ ಕಾಣೆ.

ಆಮೇಲೆ ಅವಳನ್ನು ಕಂಡರೆ ನಮಗೆ ಬೇಸರವಾಗುತ್ತಿತ್ತು. ಪ್ರಿನ್ಸಿಪಾಲರನ್ನು ಕಂಡರೆ ರೇಗುತ್ತಿತ್ತು. ಇನ್ನೊಂದು ವಿಷಯ; ಆ ಫೋಟೋ ನಮ್ಮ ಕಣ್ಣಿಗೆ ಮಾತ್ರ ಬೀಳಲಿಲ್ಲ. ಕೊನೆಗೆ ಅದನ್ನು ಯಾರು ಒಯ್ದರೋ ಗೊತ್ತಿಲ್ಲ.

ಮುಂದೆ ಬದುಕನ್ನು ಪ್ರಬುದ್ಧವಾಗಿ ಪ್ರವೇಶಿಸಿದ ಮೇಲೆ, ಆರಾಧನೆಗೂ ಪ್ರೀತಿಗೂ ಇರುವ ವ್ಯತ್ಯಾಸ ಅರಿವಾಯಿತು. ಆರಾಧನೆ ದಿವ್ಯವಾದದ್ದು. ಪ್ರೀತಿ ಈ ಬದುಕಿಗೆ ಸಂಬಂಧಿಸಿದ್ದು. ಹೆಣ್ಣು ಪೂರ್ತಿಯಾಗಿ ಅರ್ಥವಾದ ಮೇಲೆ ಆರಾಧಿತಳಾಗುವದಿಲ್ಲ. ಪ್ರೀತಿಯ ಪ್ರತಿರೂಪವಾಗುತ್ತಾಳೆ. ಅಂತಹ ಪ್ರೀತಿಯ ಅನುಭವ ನನಗೆ ದಕ್ಕಿದ್ದು ಒಬ್ಬ ಪರಿಚಯದ ಹೆಣ್ಣಿನಿಂದ. ಅವಳ ಮಾತು, ಅದರರ್ಥ ನನಗೆ ಕೇಳಿಸುತ್ತಿತ್ತು. ನನ್ನ ಮಾತು, ಅದರರ್ಥ ಅವಳಿಗೆ ಕೇಳಿಸುತ್ತಿತ್ತು. ಇಬ್ಬರೂ ನಡೆ, ನುಡಿ, ಜೀವನದ ಸಾಮೀಪ್ಯವನ್ನು ಸಾಹಚರ್ಯದಿಂದ ತಲುಪಬಲ್ಲ ವಿಶ್ವಾಸವನ್ನು ಪಡೆದಿದ್ದೆವು. ಯಾವ ಅರ್ಥದಲ್ಲಿಯೂ ಆಕೆ ಚಂದದ ಹೆಣ್ಣಲ್ಲ. ಆದರೆ ಮನಸ್ಸಿನಲ್ಲಿ ಪ್ರೀತಿಯ ತೆರೆಯನ್ನು ತನ್ನದೇ ಆದ ವಿಶೇಷತೆಯಿಂದ ಉಕ್ಕಿಸುತ್ತಿದ್ದಳು. ಅವೊತ್ತಿನಿಂದ ಇವೊತ್ತಿನವರೆಗೂ, ಯಾರಿಗೆ ನಿನ್ನ ಜೀವನವನ್ನು ಸಮರ್ಪಿಸುವೆ ಎಂದು ಕೇಳಿದರೆ ನಿಸ್ಸಂಕೋಚವಾಗಿ ಹೇಳುತ್ತೇನೆ, ಈ ಜೀವನ ಅವಳದೇ. ಅದರ ಅರ್ಥವನ್ನು ನೀಡಿದವಳು ಅವಳೇ. ತೆರವನ್ನು ತುಂಬಿ ಜೀವಿಸಿದವಳು, ನನ್ನನ್ನು ಉಜ್ಜೀವಿಸಿದವಳು ಅವಳೇ. ಆದರೆ ನನಗೆ ಅವಳು ದಕ್ಕಲಿಲ್ಲ. ಮುಂದೆ ಯಾರನ್ನೋ ಮದುವೆಯಾಗಲಿರುವ ಹೆಣ್ಣು ಅವಳು. ತಾನು ಹುಡುಗಿಯಾಗಿದ್ದಾಗಿನ ಒಂದು ಫೋಟೋವನ್ನು ಅವಳು ನನಗೆ ತೋರಿಸಿದಳು. ಯಾಕೋ ಆ ಮುಖ ನನಗೆ ವಿಶಿಷ್ಟವಾಗಿ ಕಂಡಿತು. ಬದುಕಿನ ಸಂತಸ ಅಲ್ಲಿ ಇರುವಂತೆ, ವಿಷಾದವೂ ಇತ್ತು. ಅದು ನನಗೆ ಬೇಕು ಎನ್ನಿಸಿತು. ಕವಿಯ ಫೋಟೋ ಬಿಟ್ಟರೆ, ಎರಡನೆಯ ಮತ್ತು ಕಡೆಯ ಸಲ ನಾನು ಇನ್ನೊಬ್ಬರನ್ನು ಕೇಳಿಕೊಂಡಿದ್ದು ಎಂದರೆ ಈ ಫೋಟೋ ಸಲುವಾಗಿಯೇ. ಕೇಳಿದೆನೆ? ಪರಿಪರಿಯಾಗಿ ಅಂಗಲಾಚಿದೆ. ಬೇರೆ ಯಾವ ಫೋಟೋ ಆದರೂ ಕೊಡುತ್ತೇನೆ, ಇದು ತನ್ನ ಗಂಡನಾಗಲಿರುವವನಿಗೆ ಬೇಕು, ಕೊಡುವದಿಲ್ಲ ಎಂದು ಹಟ ಹಿಡಿದಳು. ನೋಡು, ನೀನು ಅವನನ್ನು ಮದುವೆಯಾಗುವದು ಖಂಡಿತ. ಬೇಕಾದಷ್ಟು ಫೋಟೋ ಹಿಡಿಸಿಕೊಳ್ಳಿ. ರೂಮಿಗೆ, ಹಾಲಿಗೆ ಎಲ್ಲೆಲ್ಲೂ ಹಾಕಿ, ಯಾಕೆ, ಬಚ್ಚಲು ಮನೆಯಲ್ಲೂ ಹಾಕಿ ತೋರಣ ಕಟ್ಟಿ ಎಂದು ಬಡಬಡಿಸಿ, ಇದೊಂದನ್ನು ಮಾತ್ರ ಕೊಡು ಎಂದು ಗೋಗರೆದೆ. ಮುನಿಸಿಕೊಂಡೆ. ಅವಳು ಆ ಫೋಟೋ ಕೊಡಲಿಲ್ಲ.

ಬರೀ ನೆರಳಾಗಿದ್ದ ಯಾವದೋ ಒಂದು ಜೀವ ತಳೆದು, ಬದುಕಿನ ಒಳಗೆ ಬಂದು, ಮತ್ತೆ ಚಿತ್ರಕ್ಕೆ ಮರಳಿದ ಹಾಗಾಯಿತು.

ನೆರಳು ಚಿತ್ರಕ್ಕೆ ಹೋಯಿತು. ನಾನು ಊರಿಗೆ ಬಂದೆ. ಜಯಂತ ನನ್ನ ಬರವಿಗಾಗಿ ಕಾಯುತ್ತಿದ್ದ.



ಆರಾಧನೆ ದಿವ್ಯವಾದದ್ದು. ಪ್ರೀತಿ ಈ ಬದುಕಿಗೆ ಸಂಬಂಧಿಸಿದ್ದು. ಹೆಣ್ಣು ಪೂರ್ತಿಯಾಗಿ ಅರ್ಥವಾದ ಮೇಲೆ ಆರಾಧಿತಳಾಗುವದಿಲ್ಲ.

ದೀಪ ಕುಲಕರ್ಣಿ





ಎ.ಎನ್. ವೆಂಕಟಲಕ್ಷ್ಮಿ

# ಹೇರ್‌ಬ್ಯಾಂಡ್

ಸೊಂಟದ ಬಳಿ ಸುತ್ತಿಕೊಂಡ ಸೆರಗನ್ನು ಎದೆಗೆ ಹಾಯ್ದು ಬಿಡುವಾಗ, ತನ್ನ ಮೈ ಬಡಕಲತೆ, ಅವಳಿಗೇ ಢಾಣಾಡಂಗುರವಾಗಿ ಹೊಡೆಯಿತು. ಎದುರಿನ ಸಣ್ಣ ಕನ್ನಡಿಯಲ್ಲಿ ಇಣುಕಿನೋಡಿ, ಕೈಗೆ ಚಿಮುಕಿಸಿಕೊಂಡ ಪೌಡರನ್ನು ಕಿವಿಯ ಸುತ್ತ, ಕತ್ತಿನ ಹಿಂದೆ ಎಲ್ಲಾ ಹರಡುವಂತೆ ಪೂಸಿಕೊಂಡು, ಜಡೆ ಹೆಣೆಯಲು ಕೂದಲು ಹರಡಿಕೊಳ್ಳುವ ಹೊತ್ತಿಗೇ, ಆಯಾಸದ ಆಕಳಿಕೆಯೊಂದು ತೂಗಿಕೊಂಡು ಬಂತು. ಇನ್ನು ಮುಡಿ ಕಟ್ಟುವ ಹೊತ್ತಿಗೆ ಕೈ ಸೋಲಬಹುದು.

ಕೂದಲು ತಲೆಯಿಂದಿಳಿದ ಸ್ವಲ್ಪಭಾಗ, ಇನ್ನೂ ದಟ್ಟವಾಗಿಯೇ ಇದೆ. ಅಲ್ಲಿಂದೀಚೆ ಎಲೆ ಉದುರಿ ಬೋಳಾದ ಬೋಗನ್‌ವಿಲ್ಲಾದಂತೆ ಜಾಳುಜಾಳು. ದಪ್ಪ ಕಡಿಮೆಯಾದ ಪಾಯಿಂಟ್‌ನಲ್ಲಿ, ಥಟ್ಟನೆ ತಿರುಚಿಕೊಂಡು ಚಾವಟಿಯಂತಾದ ಜಡೆ ನೋಡಿ ಅವಳಿಗೆ ಅಳುಬಂತು. ಅದನ್ನು ಮಡಿಸಿಕಟ್ಟಿ, ಕಸರತ್ತು ಮಾಡೋಣವೆಂದುಕೊಂಡರೆ ಒಳ್ಳೆಯದೊಂದು ಹೇರ್‌ಬ್ಯಾಂಡ್ ಕೈಗೆ ಸಿಗಲಿಲ್ಲ.

ಆಫೀಸಿನಿಂದ ಮರಳುವಾಗ, ಮರೆಯದೇ ಬ್ಯಾಂಗಲ್ ಸ್ಟೋರ್‌ಗೆ ಹೋಗಿ, ಒಂಬೆರಡು ಹೇರ್‌ಬ್ಯಾಂಡ್, ಕ್ಲಿಪ್ಸ್ ಇತ್ಯಾದಿ ಕೊಂಡುತರಬೇಕು ಅಂತ ಮನಸ್ಸಿನಲ್ಲೇ ಆಲೋಚಿಸಿದಳು. ಮೂರು ಇಡ್ಲಿ, ಸ್ವಲ್ಪವೇ ಚಟ್ನಿ, ಒಂದು ಬಾಟಲಿ ಕಾದಾರಿದ ನೀರು ಪ್ಯಾಕ್‌ಮಾಡಿಕೊಂಡು, ಬ್ಯಾಗ್ ಹೆಗಲಿಗೇರಿಸುವ ಹೊತ್ತಿಗೆ ಹತ್ತು ಹೊಡೆದಾಯ್ತು.

ಆಫೀಸಿನೊಳಗೆ ಕಾಲಿಡುತ್ತಿದ್ದಂತೆ, ಕೂತಿದ್ದ ಎಲ್ಲರೂ, ಒಮ್ಮೆ ಗೋಣೆತ್ತಿ ಕೆಳಗಿಳಿಸಿದರು.



ಪ್ರೀತಿ ಸಂಯುಕ್ತಾ

ಎಲ್ಲಿಗೋ ತಪ್ಪಿ ಬಂದ ಹಾಗಾಯ್ತು. ಸುಮಾರು ಎರಡು ತಿಂಗಳ ರಜೆಯಲ್ಲವೇ? ಸಿಕ್‌ಲೀವ್.

ಮಧ್ಯಾಹ್ನ, ಬುತ್ತಿಯ 'ಬ್ಲಾಂಡ್ ಫುಡ್' ತಿನ್ನುವಾಗ ಬದುಕೇ ಬೇಸರವೆನ್ನಿಸಿತು. ತನ್ನ ಖಾಲಿಯಾದ ಟ್ಯಾಂಕ್‌ನಂತಿರುವ ತನುಮನಗಳ ತುಂಬಲು ಕಮಲ ಹಾಸನ್‌ನಂತೆ ಮಂಗಚೇಷ್ಟೆ ಮಾಡಿ ನಗಿಸುವ ಹುಡುಗ ಬೇಕು. ಕಣ್ಣಬೊಂಬೆಯ ತುಂಬಾ, ಬಚ್ಚಿಟ್ಟುಕೊಂಡ ಪ್ರೀತಿ ಹೊರಚೆಲ್ಲುವ ಅವನ ನೋಟ, ನಿಲುವು, ವಾಹ್. ಕೈ ತೊಳೆಯಲು ವಾಷ್‌ಬೇಸನ್ನಿನ ಮುಂದೆ ನಿಂತರೆ ಎದ್ದುಕಾಣುವ ಕೆನ್ನೆಮೂಳೆ!... ಓ ದೇವರೆ, ಕಮಲ್ ಬೇಡ, ಅವನ ಕುರಿತ ಹಗಲುಗನಸು ಬೇಡವೇ ಬೇಡ. ಲೊಟಲೊಟ ಅನ್ನುತ್ತಿದ್ದ ಮನಸ್ಸಿಗೊಂದು 'ತಲೆ' ಮೇಲೆ ಮೊಟಕಿ ಹೊರಬಿದ್ದಳು.

ಸಂಜೆ ವಾಪಸಾಗುವಾಗ ಹೇರ್‌ಬ್ಯಾಂಡ್ ತಗೊಳ್ಳುವ ವಿಚಾರ ಥಟ್ಟನೆ ನೆನಪಾಗಿ, ಬಸ್‌ಸ್ಟಾಪ್‌ಗೆ ಹೊರಳುವ ಮುನ್ನ 'ಆ' ಬ್ಯಾಂಗಲ್ ಷಾಪ್‌ಗೆ ನುಗ್ಗಿದಳು. ತಾನು ಸಣ್ಣಹುಡುಗಿಯಾದಾಗಿನಿಂದ ಹೋಗುತ್ತಿದ್ದ ಬಳೆ ಅಂಗಡಿ ಅದು. ಹೊಳೆಯುವ ಗೋಧಿ ಬಣ್ಣದ ಮುಖ, ಬಕ್ಕತಲೆ, ಕಪ್ಪು ಕಡ್ಡಿಮೀಸೆಯ ಸತ್ತಾರ್ ಅದನ್ನು ನೋಡಿಕೊಳ್ತಾನೆ. ಇಂದಿಗೂ ಅವನ ಸಣಕಲು ಮೈ, ಮುಖ, ಕನ್ನೆಗೂಡಿನ ಚಹರೆ ಒಂಚೂರೂ ಬದಲಾಗಿಲ್ಲ. ಮುಕುರಿಕೊಂಡಿದ್ದ ಹೆಂಗಸರ ಗುಂಪಿನಲ್ಲಿ ಒಬ್ಬೊಬ್ಬರನ್ನೂ ಗಮನಿಸುವುದು, ಅವರ ಕಡೆ ನಿಗಾ ಇಡೋದು, ಅವರ ಮುಂಗೈ ಅಡ್ಡಮೂಳೆ ಒತ್ತಿಹಿಡಿದು ಬಳೆಯೇರಿಸುವುದು, ಆಗೀಗ (ಮೂಡು ಹಾಳಾದಾಗ) ಅಂಗಡಿಯ ಯಜಮಾನನನ್ನು ಜ್ಞಾಪಿಸಿಕೊಂಡು, ಒಬ್ಬಿಬ್ಬರು ಕಸ್ಟಮರ್ಸ್ ಮೇಲೆ ಅನಿರೀಕ್ಷಿತವಾಗಿ ರೇಗೋದು, ತಕ್ಷಣವೇ ಸಮಜಾಯಿಷಿ ನೀಡೋದು... ಇವೆಲ್ಲ ಸತ್ತಾರ್ ಹೆಸರಿನೊಂದಿಗೆ ಅವಳ ನೆನಪಿನಲ್ಲಿ ಹೆಣೆದುಕೊಂಡಿದ್ದ ವಿವರಗಳು. ಎಲ್ಲಕ್ಕಿಂತ ಅವಳನ್ನು ಆಕರ್ಷಿಸುತ್ತಿದ್ದದ್ದು, ಅವನು ಎಲ್ಲಿಯೋ ನೋಡಿಕೊಂಡು, ಗಂಭೀರ ಭಾವದಲ್ಲಿ ಹಾರಿಸುತ್ತಿದ್ದ ಹಾಸ್ಯ ಚಟಾಕಿ ಮತ್ತು ಚಿಳ್ಳೆ ಪಿಳ್ಳೆ ರಿಬ್ಬನ್ ಹುಡುಗಿಯರು, ಕೋಂಪ್ಲಾನ್ ಕುಡಿದು, ಬೆಳೆದು, ಸ್ಯಾರಿ ಫಾಲ್ ಖರೀದಿಸಲು ಬಂದರೂ ಅವನು ತಟ್ಟನೆ ಗುರುತು ಹಿಡಿದುಬಿಡುತ್ತಿದ್ದುದು.



ಸತ್ತಾರ್‌ಗೊಬ್ಬ ಅಸಿಸ್ಟೆಂಟ್ ಇದ್ದ. ಗುಂಗುರು ಕೂದಲು, ಮೆಳ್ಳೆಗಣ್ಣಿನ ಕುಳ್ಳ. ಶರಾಯಿಗಿಂತ ಅಂಗಿಯೇ ಉದ್ದಕ್ಕೆ, ದೊಗಲೆಯಾಗಿದ್ದ ಸಣಕಲ. ನೇರಮೂಗು, ಕೆನ್ನೆಯ ರಂಧ್ರಗಳಿಂದ ಮಾತ್ರ ಅವನು ವಯಸ್ಕ ಎಂದು ಹೇಳಬಹುದಿತ್ತು. ಗೌರಿ ಹಬ್ಬ, ಸಂಕ್ರಾಂತಿ, ಇತ್ಯಾದಿ ಸಮಯಗಳಲ್ಲಿ ಬಂದು ಸತ್ತಾರನಿಗೆ ಸಹಾಯ ಮಾಡುತ್ತಿದ್ದ. ಅವನಿಗೂ 'ಗುರು'ವಿನ ಅನೇಕ ಗುಣಗಳು ಮೈಗೂಡಿದ್ದವು.

'ಮಧುಲಿಕಾ ಬ್ಯಾಂಗಲ್ ಸ್ಟೋರ್'ನ ಮೆಟ್ಟಿಲೇರುವಾಗ ಅವಳು, ಕಾಲೇಜು ಹುಡುಗಿಯರ ಕಲಕಲ, ಕಿಣಕಿಣಗೆ ಕಿವಿ ತೆರೆದೇ ಇದ್ದಳು. ಆಶ್ಚರ್ಯವೆಂದರೆ ನಾಲ್ಕೂವರೆ ಗಂಟೆಯ ಆ ವೇಳೆ ಅಂಗಡಿಯಲ್ಲಿ ನರಪಿಳ್ಳೆಯೂ ಇರಲಿಲ್ಲ. ಅದೇ ಮೆಳ್ಳೆಗಣ್ಣಿನ ಕುಳ್ಳ-ಈ ಹದಿನೈದು-ಹದಿನಾರು ವರುಷಗಳಲ್ಲಿ ಅವನು ಸ್ವಲ್ಪ ಮಾತ್ರ ಬದಲಾದಂತೆ ಅವಳಿಗನ್ನಿಸಿತು- ಶೆಲ್ಫ್‌ಗಳ ಹಿಂದೆ ಅಡಗಿಕೊಂಡಿದ್ದ. ಇವಳು ನಿಧಾನವಾಗಿ ಹತ್ತಿರ ಬಂದಂತೆ ಸ್ನೇಹದ ಮುಗುಳ್ನಗೆ ನಕ್ಕ. 'ಒಂದು ಹೇರ್‌ಬ್ಯಾಂಡ್ ಬೇಕಿತ್ತೂ', ರಾಗ ಎಳೆದಳು.





ಅವನು ಬ್ಯಾಂಡ್‌ಗಳ ಒಂದು ಹೊರೆಯನ್ನೇ ಅವಳ ಮುಂದಿಟ್ಟ. ಆರಿಸಿಕೊಳ್ಳುವಾಗ, ಅವಳ ಕೈಬೆರಳುಗಳು ಅವನ್ನು ಎಳೆದು, ತಿರುಚಿ, ಹರಡಿ ಪರೀಕ್ಷಿಸುವುದನ್ನು ನೆಟ್ಟನೋಟದಿಂದ ಗಮನಿಸಿದ. ಕೃಶಗೊಂಡ ಬೆಳ್ಳಗಿನ ಬೆರಳುಗಳ ಲಾಸ್ಯ, ತುಸು ಹೆಚ್ಚಾಯಿತು. ತನಗೆ ಎಂಥ ಬ್ಯಾಂಡ್, ಯಾವ ಬಣ್ಣದ್ದು ಬೇಕೆಂಬುದನ್ನು ವಿವರಿಸುತ್ತಾ, ಮಧ್ಯೆ ಮಧ್ಯೆ ಅವಳು, 'ಸತ್ತಾರ್ ಸಾಹೇಬರೆಲ್ಲಿ?' 'ಅಂಗ್ಡೀಲಿ ವ್ಯಾಪಾರ ಈಗ ಹೇಗಿದೆ?' 'ಮುಂಚೆ ತುಂಬಾ ರಷ್ ಇರ್ತಿತ್ತಲ್ವಾ', 'ಮಧುಲಿಕಾ ಬ್ಯಾಂಗಲ್ ಸ್ಟೋರೆಂದರೆ ಆಗ ಇಡೀ ಮೊಹಲ್ಲಾಗೆ ಫೇಮಸ್ ಆಗಿತ್ತೂ' ಇತ್ಯಾದಿ ಮೋಹಕವಾಗಿ ಮಾತಾಡಿದಳು. ಶೆಲ್ಫ್‌ವೊಂದೇ ಅಡ್ಡವಿದ್ದದ್ದು, ಅವರಿಬ್ಬರ ನಡುವೆ. ಅವನೂ, ತುಂಬ ಮೃದುವಾದ ಸ್ವರದಲ್ಲಿ, ನೋಟದಿಂದಲೇ ಅವಳ ಮುಡಿ, ಮುಂಗುರುಳು ನೇವರಿಸುತ್ತ, 'ಹ್ಞಾಂ ನೀವು ಸಣ್ಣ ಹುಡುಗಿಯಾಗಿದ್ದಾಗ ಬರ್ತಿದ್ರಿ, ನನಗೆ ನಿಮ್ಮ ಮುಖ ನೆನಪಿದೆ, ಈ ನಡುವೆ ಏಕೋ ಬರುತ್ತಿಲ್ಲ; ಮನೆ ಬದಲಾಯಿಸಿಬಿಟ್ಟಿರೇ ಎಂದೆಲ್ಲಾ ವಿರಾಮವಾಗಿ ಮಾತಾಡಿದ. ಉದ್ದಕ್ಕೂ, ಆ ಸ್ನಿಗ್ಧ ನೋಟ, ಮುಖಮುದ್ರೆ, ಮಾತ್ರ ಬದಲಿಸಲೇ ಇಲ್ಲ.

'ಅವನು ಹೇಳುತ್ತಿರುವುದನ್ನು ನಂಬಬಹುದೋ, ಬಾರದೋ, ಅಷ್ಟೊಂದು ಗಿರಾಕಿಗಳ ನಡುವೆ ತನ್ನನ್ನು ಹೇಗೆ ನೆನಪಿಟ್ಟುಕೊಂಡಿದ್ದಾನು', ಹೀಗೆಲ್ಲಾ ಮನಸ್ಸಿನಲ್ಲೇ ಯೋಚಿಸುತ್ತಿದ್ದರೂ, ಅವಳು, ಅವನ ಸ್ನೇಹಮಯ ನೋಟಕ್ಕೆ ಮಾರುಹೋದವಳಂತೆ ಮುಗುಳ್ನಕ್ಕು, ತುಟಿ ಬಿಚ್ಚಿ, ಶಬ್ದಮಾಡಿ ನಕ್ಕು ಅರಳಿದಳು.

ಕಡೆಗೆ ಕಪ್ಪುಬಿಳುಪಿನ ಚೆಕ್ಸ್ ಬಟ್ಟೆಯಿಂದ ಮಾಡಿದ, ಜಡೆಯ ಮೇಲೆ ಒಪ್ಪವಾಗಿ ಬಿಗಿದು ಕೂರುವಂತೆ ಒಳಗೊಂದು ತಂತಿಯಿದ್ದ ಬ್ಯಾಂಡ್ ಒಂದನ್ನು ಆರಿಸಿ, ತನಗೆ ಸರಿಹೊಂದುತ್ತದೆಯೋ ಎಂದು ಅವಳು ನೋಡುವಾಗ, ಅವನು ಕಣ್ಣಲ್ಲೇ ಅನುಮೋದಿಸಿದ. ಅದೇಕೋ, ಈ ಮಧ್ಯೆ ಶೆಲ್ಫ್‌ನಿಂದ ತುಸು ದೂರ ಸರಿದಿದ್ದ ಅವಳು, ಕನ್ನಡಿಯಲ್ಲಿ ನೋಡಿಕೊಳ್ಳುವ ಹಾಗೆ ಅತ್ತ ಇತ್ತ ತಿರುಗಿ, ಥಕ್ಕನೆ ಪೂರ್ತಿ ತಿರುಗಿ, ಅವನನ್ನೇ 'ಸರಿಯಾಗಿದೆಯಾ?' ಅಂತ ಕೇಳಿಬಿಟ್ಟಳು.

'ನಿಮ್ಮ ಜಡೆ ದಪ್ಪಗಿದೆ, ಇಂಥದ್ದೇ ಸರಿ. ಬಿಗಿಯಾಗಿ ಕೂರುತ್ತೆ, ಇದೇ ತಗೊಳ್ಳಿ.' ಅವನು ಎರಡು ಮೂರು ಸಾರಿ, ಇದೇ ಅರ್ಥಬರುವ ಮಾತು ಹೇಳಿದ ಮೇಲಂತೂ, ಅವಳು ಪುಂಗಿಯ ನಾದಕ್ಕೆ ತಲೆದೂಗುವ ಹಾವಿನಂತಾದಳು. ಎಲ್ಲೋ ತೇಲಿಹೋಗುತ್ತಿರುವವಳಂತೆ ಹಣ ಇಟ್ಟು, ಬ್ಯಾಂಡ್ ಬ್ಯಾಗಲ್ಲಿರಿಸಿ, ಕತ್ತು ಕೊಂಕಿಸಿ, ಕಡೆಯ ಕಟಾಕ್ಷವೊಂದನ್ನು ಬೀರಿದಳು. ಮೆಟ್ಟಿಲಿಳಿಯುವಾಗ, ಅವಳ ಆಳವಾಗಿ ಮೂಡಿದ ಲಾಫಿಂಗ್ ಲೈನ್ಸ್‌ನ ಮಧ್ಯದಲ್ಲಿ, ಸೂರ್ಯೋದಯದ ಮುನ್ನಾ ಸಮಯ ಉಂಟಾಗುವ ಅರುಣರಾಗ ತುಸು ತುಸುವೇ ಹರಡಿಕೊಂಡಿತು.



ಅವನು ಬ್ಯಾಂಡ್‌ಗಳ
ಒಂದು ರಾಶಿಯನ್ನೇ ಅವಳ
ಮುಂದಿಟ್ಟ
ಶೈಲಜ ಟಿ.ಎಸ್.





# ತೀರದ ಹೃದಯವಂತಿಕೆಯ 'ಹಿರಿಯಕ್ಕ'

ಇವಳ ಹೆಸರು ನಂಗೊತ್ತಿದೆ. ಆದರೆ ನಾನದನ್ನು ನಿಮಗೆ ಹೇಳೊಲ್ಲ. ನಾನಿವಳನ್ನು ದೇವತೆ ಅಂತಲೂ ಕರೆಯೊಲ್ಲ. ಏಕೆಂದರೆ ದೇವತೆ, ದೇವರು ಎಂಬ ಶಬ್ದಗಳಿಗೆ ಒಂದು ಬಗೆಯ 'ಮಿಥ್' (myth)ನ ಲೇಪನವಿರುತ್ತದೆ; ಜನರ ಊಹಾಪೋಹ, ಕಥೆ ಕಟ್ಟುವ ಅವರ ಕಾಲ್ಪನಿಕ ಶಕ್ತಿಯಿಂದಾಗಿ ಜನಜನಿತಗೊಳಿಸಲ್ಪಟ್ಟ ಒಂದು ಪಾತ್ರವಾಗಿ ಅದು ಕಾಣಿಸಿಕೊಳ್ಳುತ್ತದೆ. ಆದರೆ ಸ್ಫೂರ್ತಿ ಕೊಡಬಲ್ಲಂಥ ನೂರಾರು ಜನರು ನನ್ನ ಸುತ್ತಲಲ್ಲೇ ಇದ್ದಾರೆ, ಸಾಹಿತ್ಯ ಕೃತಿಯ ಅಳತೆಗೂ ಮೀರಬಲ್ಲಂಥವರು. ಅದರ ಚೌಕಟ್ಟನ್ನೂ ಹಿಗ್ಗಿಸಿ ಬೆಳೆಯಬಲ್ಲಂಥವರು. ತಮ್ಮ ಹೃದಯವಂತಿಕೆಯ ಮೂಲಕವೇ ನಮ್ಮ ಮನಸ್ಸನ್ನು ಮೃದುವಾಗಿಸಬಲ್ಲವರು.

ಹಿಂದೊಮ್ಮೆ ನಾನು ವಾಸಿಸುತ್ತಿದ್ದ ಜಾಗದ ಬಳಿಯಲ್ಲೇ, ಸರ್ಕಾರ ಸಾಲುಸಾಲಾಗಿ ಕಟ್ಟಿಸಿದ್ದ ಮನೆಗಳು. ಪ್ರಾಯಶಃ, ಕನಿಷ್ಠ ದರದ ಕೊಟೇಶನ್ ಕೊಟ್ಟಿದ್ದ ಕಂಟ್ರಾಕ್ಟರೊಬ್ಬನ ಉಸ್ತುವಾರಿಯಲ್ಲಿ, ಮಧ್ಯಮ ವರ್ಗದ ಸಿಬ್ಬಂದಿಗಾಗಿ ಕಟ್ಟಲ್ಪಟ್ಟಂಥ ಏಕರೀತಿಯ ಗೋಡೆ, ಕಿಟಕಿ, ಬಾಗಿಲು, ಗೇಟು, ಬಣ್ಣ ಹೊಂದಿದ್ದ 'ಕ್ವಾರ್ಟರ್ಸ್' ಎಂಬ ಹೆಸರಿನ ಬೆಂಕಿಪೊಟ್ಟಣದಂಥ ಪುಟ್ಟ ಪುಟ್ಟ ಮನೆಗಳು. ಅಲ್ಲಿನ ಮನೆಯೊಂದರಲ್ಲಿ ಮೂವರು ಅಕ್ಕತಂಗಿಯರು. ವಯಸ್ಸಾದ ಅಪ್ಪ, ಅಮ್ಮ. ಬೆಳಗಾಗುತ್ತಿದ್ದ ಹಾಗೇ ಆ 'ಸರ್ಕಾರಿ ಕಾಲೋನಿ'ಯಲ್ಲಿ ಶುರುವಾಗುತ್ತಿತ್ತು, ಮೊಟ್ಟಮೊದಲಿನ ದೈನಂದಿನ ಚಟುವಟಿಕೆಗಳಿಗೆ ಅತ್ಯಗತ್ಯವಾದ ನೀರಿಗಾಗಿ ಹಾಹಾಕಾರ. ಕೆದರಿದ ಕೂದಲಿನ ಹೆಂಗಸರು ತಮ್ಮ ಸುಕ್ಕಾದ ಸೀರೆಯ ನಿರಿಗೆಯನ್ನು ಮೊಳಕಾಲ ಮೇಲಕ್ಕೇರಿಸಿ, ಸೊಂಟಕ್ಕೆ ಸಿಕ್ಕಿಸಿಕೊಂಡು, ಪ್ಲಾಸ್ಟಿಕ್ ಬಕೆಟ್, ಬಿಂದಿಗೆಗಳನ್ನು ರಸ್ತೆಯ ಮಧ್ಯದಲ್ಲಿ ಸಾಲಾಗಿರಿಸಿ, ಪ್ರಾತಃಕಾಲದ ಮಂತ್ರವನ್ನು ಪಠಿಸುವ ಧಾಟಿಯಲ್ಲಿ ನೀರು ಸರಬರಾಜು ಇಲಾಖೆಗೆ ಶಾಪ ಹಾಕುತ್ತಾ, ಬರಲಿರುವ ನೀರಿನ ಟ್ಯಾಂಕಿಗಾಗಿ ಆಕಳಿಸುತ್ತಾ ಕಾದು ನಿಲ್ಲುತ್ತಿದ್ದರು. ಅಕ್ಕತಂಗಿಯರ ಪೈಕಿ ಹಿರಿಯವಳು, ಇವರಂತೆಯೇ, ಯಾವಾಗಲೋ ಬರಬಹುದಾಗಿದ್ದ ನೀರಿನ ಟ್ಯಾಂಕಿಗಾಗಿ ಕಾಯುತ್ತಾ ನಿಲ್ಲುವಂತಿರಲಿಲ್ಲ. ಇವಳು ಕಚೇರಿಯೊಂದರಲ್ಲಿ ಉದ್ಯೋಗಸ್ಥೆ. ಇನ್ನು ತನ್ನ ದೈನಂದಿನ ಕಾಯಕ ಶುರು ಎಂಬಂತೆ ಇವಳು ಕೊಡವೊಂದನ್ನು ಕೈಲಿ ಹಿಡಿದು, ಮತ್ತೊಂದನ್ನು ಸೊಂಟಕ್ಕೆ ಏರಿಸಿ, ಗಾವುದ ದೂರದಲ್ಲಿದ್ದ ನೀರು ಸರಬರಾಜು ಇಲಾಖೆಯ ನಲ್ಲಿಯಿಂದಲೇ ಕೊಡಗಳಿಗೆ ನೀರನ್ನು ತುಂಬಿಸಿಕೊಂಡು, ಮೌನವಾಗಿ ಮನೆಯ ಮೆಟ್ಟಿಲನ್ನೇರುತ್ತಿದ್ದಳು. ಸಂಬೋಧನೆಗೆ ಸುಲಭವಾಗಲೆಂದು ಇವಳನ್ನು 'ಹಿರಿಯಕ್ಕ' ಎಂದು ಕರೆಯೋಣ. ನೀರಿನ ಕಚೇರಿಗೂ ಮನೆಗೂ ಮೂರ್ನಾಲ್ಕು ಬಾರಿ ಹಿರಿಯಕ್ಕನ ಓಡಾಟ. ಇನ್ನೆರಡು ಗಂಟೆಗಳೊಳಗಾಗಿ ಅಕ್ಕತಂಗಿಯರ ಮನೆಯ ಅಂಗಳದಲ್ಲಿ ನೇತಾಡುತ್ತಿದ್ದವು, ಸ್ನಾನ ಮುಗಿಸಿದ ಅವರು ಒಗೆದು, ಒಣಗಲು ಹರವಿದ ಹಿಂದಿನ ದಿನದ ಸೀರೆಗಳು, ಬ್ಲೌಸುಗಳು, ಪೆಟ್ಟಿಕೋಟ್‌ಗಳು, ಬ್ರಾಗಳು. ಅಪ್ಪನ ಪಂಚೆ, ಬನೀನು, ಟವಲ್, ಅಮ್ಮನ



ಎಂಟು ಗಜದ ಸೀರೆ, ಚೀಟಬಟ್ಟೆಯ ರವಿಕೆ. ನಿರುದ್ಯೋಗಿ ತಂಗಿಯರು ಮನೆಯನ್ನು ಗುಡಿಸಿ, ಸಾರಿಸುತ್ತಿದ್ದಾಗ ತಾಯಿ ಮಾಡಿದ ಅಡಿಗೆಯನ್ನು ಉಂಡು ಹಿರಿಯಕ್ಕ, ಸರಳವಾಗಿ ಸುಂದರವಾಗಿ ಅಲಂಕರಿಸಿಕೊಂಡು, ಕೈಲೊಂದು ಬ್ಯಾಗನ್ನು ಹಿಡಿದು, ಆತ್ಮವಿಶ್ವಾಸದಿಂದ ತಲೆಯೆತ್ತಿಕೊಂಡು ಬಸ್‌ಸ್ಟಾಪಿನತ್ತ ನಡೆಯುತ್ತಿದ್ದಳು, ತನ್ನ ಆಫೀಸನ್ನು ತಲಪಲು.

ವಿವಾಹವಾಗುವ ವಯಸ್ಸನ್ನು ತಲುಪಿದ್ದ 'ಹಿರಿಯಕ್ಕ' ಹಾಗೂ ಇವಳ ಇಬ್ಬರು ತಂಗಿಯರು. ಹೆಣ್ಣು ಮಕ್ಕಳಿಗಾಗಿ ವರಾನ್ವೇಷಣೆಯಲ್ಲಿ ನಿರತರಾಗಿದ್ದ ಅಪ್ಪ-ಅಮ್ಮ. ನೀರಿನ ತಾಪತ್ರಯ, ಬಟ್ಟೆ ಒಗೆತ, ಕಚೇರಿ ವ್ಯವಹಾರ, ಇವೆಲ್ಲ ಇವೆಯೆಂದ ಮಾತ್ರಕ್ಕೆ ಕಾಲ ಸರಿಯದೇ ನಿಲ್ಲುತ್ತದೆಯೇ? ದಿನಕ್ಕೆ ಹೊಂದಿಕೊಂಡಂತೆ ರಾತ್ರಿ, ರಾತ್ರಿಯ ಮಗ್ಗುಲಲ್ಲೇ ದಿನ. ಸೂರ್ಯ, ಚಂದ್ರ, ಆಕಾಶ, ಭೂಮಿ ಎಲ್ಲವೂ ಇದ್ದಂತೆಯೇ. ಆದರೆ 'ಹಿರಿಯಕ್ಕ'ನ, ದುಡಿತಕ್ಕೆ ನೆರವಾಗಿದ್ದ, ಮಾಟವಾಗಿದ್ದರೂ ಬಲಿಷ್ಠವಾಗಿದ್ದ ಕಾಲುಗಳ ಹಿಮ್ಮಡಿಯಲ್ಲಿ ಎಂದೋ ಚುಕ್ಕೆಯಂತೆ ಕಂಡಿದ್ದ ಬಿಳಿಬಣ್ಣ ಮಾತ್ರ, ಕ್ರಮೇಣ ಕಾಸಿನ ಗಾತ್ರಕ್ಕೆ ಹಿಗ್ಗಿ, ಅಂಗಾಲನ್ನು ದಾಟಿ, ಮೊಳಕಾಲಿಗೂ ಹಬ್ಬಿ, ಕೈ ಕತ್ತು ಕೆನ್ನೆಗಳಿಗೆ ವ್ಯಾಪಿಸಿಕೊಳ್ಳತೊಡಗಿತ್ತು. ಬಸ್‌ಸ್ಟಾಪ್, ಕಚೇರಿ, ಮಾರ್ಕೆಟ್... ಹಿರಿಯಕ್ಕ ಹೋದೆಡೆಯಲ್ಲೆಲ್ಲ ಇವಳ ಚರ್ಮವನ್ನು ವ್ಯಾಕುಲದಿಂದ, ಉಪೇಕ್ಷೆಯಿಂದ, ಗಾಬರಿಯಿಂದ, ಕುತೂಹಲದಿಂದ ದೃಷ್ಟಿಸುವ ಕಣ್ಣುಗಳು ಇವೆಯೆಂದು ತಿಳಿದೂ ಮನಸ್ಸಿನ ಬಿಗಿಯನ್ನು, ಸಹನೆಯನ್ನು ಕಳೆದುಕೊಳ್ಳದಿದ್ದ 'ಹಿರಿಯಕ್ಕ' ಸ್ಥಿತಪ್ರಜ್ಞಳಂತೆ ತನ್ನ ದೈನಂದಿನ ಚಟುವಟಿಕೆಗಳನ್ನು ಹಿಂದಿನಂತೆ ಮುಂದುವರಿಸಿಯೇ ಇದ್ದಳು. ಮಾಟವಾದ ಮೈಯಿನ, ತಿದ್ದಿದಂತಿದ್ದ ಕಣ್ಣು, ಮೂಗು, ಬಾಯಿಯ ಹಿರಿಮಗಳನ್ನು ಆವರಿಸಿಕೊಂಡ 'ಚರ್ಮವ್ಯಾಧಿ'ಯಿಂದ ತಾವೇ ಬಸವಳಿದವರಂತೆ ತಾಯಿ, ಒಂದು ರಾತ್ರಿ, ಸದ್ದಿಲ್ಲದೆ ಸಾವಿಗೀಡಾದಾಗಲೂ, ಇಳಿವಯಸ್ಸಿನಲ್ಲಿ ಸಹಚರಳನ್ನು ಕಳೆದುಕೊಂಡ ಅಪ್ಪ ಮತ್ತಷ್ಟು ಹಣ್ಣಾದಾಗಲೂ, ಧೃತಿಗೆಡದ 'ಹಿರಿಯಕ್ಕ' ನಿರಂತರವಾಗಿ ಮುಂದುವರಿಸಿಯೇ ಇದ್ದಳು ತನ್ನ ಕೈಂಕರ್ಯವನ್ನು.

ಅಮ್ಮ ಸತ್ತಮೇಲೆ ಹೆಗಲಿಗೆ ಬಿದ್ದ ಅಡಿಗೆಯ ಕೆಲಸವನ್ನು ತಂಗಿಯರ ನೆರವಿನಿಂದ ಪೂರೈಸುತ್ತಾ, ಅವರನ್ನು ಗಮನಿಸುತ್ತಿದ್ದಂತೆಯೇ 'ಹಿರಿಯಕ್ಕ'ನಿಗೆ ಗೋಚರವಾಗಿತ್ತು, ತನ್ನ ತಂಗಿಯರಿಗೆ ವಿವಾಹದ ಪ್ರಾಪ್ತ ವಯಸ್ಸು ಸದ್ಯದಲ್ಲೇ ಮೀರಬಹುದೆಂದು. ಅಪ್ಪನನ್ನೇ ಮುಂದಿಟ್ಟುಕೊಂಡು ಇವಳು ಬಂಧು ಬಾಂಧವರನ್ನು ಸತತವಾಗಿ ಸಂಪರ್ಕಿಸಿದ ಫಲ, 'ಹಿರಿಯಕ್ಕ'ನ ಸೋದರಿಯರಿಬ್ಬರಿಗೂ ಸೂಕ್ತ ಸಂಬಂಧಗಳು. ಮುಂದಿನ ಎರಡು ವರ್ಷಗಳಲ್ಲಿ ಇವಳ ನೆರವಿನಿಂದಲೇ ತಂಗಿಯರ ಬಾಣಂತನ. ಗಂಡನ ಮನೆಗೆ ಹೋದ ತಂಗಿಯರು, ಮಕ್ಕಳೊಂದಿಗೆ 'ಹಿರಿಯಕ್ಕ'ನನ್ನು ಕಾಣಲು ಬಂದಾಗ ಅವರಿಗೆ ಪಾಯಸದೂಟ, ಪ್ರೀತಿಯ ಮಾತುಗಳು. ಕಚೇರಿಗೆ ಹೋಗುವ ಮೊದಲು, ವಾಪಸ್ಸಾದ ನಂತರ, ವೃದ್ಧ ತಂದೆಗೆ ಕೈಲಾದಷ್ಟೂ ಶುಶ್ರೂಷೆ.

ನೀರಿನ ಕೊಡಗಳನ್ನು ಹೊತ್ತು ತರುತ್ತಿದ್ದಾಗ ಮುಖದಲ್ಲಿ ಎಂಥಾ ಪ್ರಶಾಂತ ಭಾವವಿರುತ್ತಿತ್ತೋ, ಅಂಥದ್ದೇ ನಿರಾಳ ಚಿತ್ತ 'ಹಿರಿಯಕ್ಕ'ನ ಜೀವನದ ಎಲ್ಲ ಹಂತಗಳಲ್ಲೂ. ಯಾವುದೋ ಒಂದು ಸಣ್ಣ ದೈಹಿಕ ದೋಷ ತನ್ನ ದೇಹದ ಅಂದವನ್ನೇ ಕೆಡಿಸಿ, ಮದುವೆ-ಮಕ್ಕಳ ಬಗೆಗಿನ ತನ್ನ ಕನಸುಗಳೆಲ್ಲ ಛಿದ್ರವಾಗಿ, ಇಡೀ ಬಾಳ್ವೆಯನ್ನು ಅವಿವಾಹಿತಳಾಗಿಯೇ ದೂಡಬೇಕಾದಾಗಲೂ, ಎಂದೂ ಮನಸ್ಸನ್ನು ಕಹಿಯಾಗಿಸಿಕೊಳ್ಳದೆ, ಅಸಹನೆಯಿಂದ ವರ್ತಿಸದೆ, ಸುತ್ತಲಿನವರ ಸುಖವನ್ನು ಕಂಡು ಕರುಬದೆ, ನಿರಾಸೆಗಳೆಲ್ಲವನ್ನೂ ಮೆಟ್ಟಿನಿಂತ ಈ 'ಹಿರಿಯಕ್ಕ' ದೇವತೆಯಲ್ಲ. ಆದರೆ ಇಂಥ ನೂರಾರು ಹತಭಾಗ್ಯೆಯರಲ್ಲಿ ಹುಮ್ಮಸ್ಸು ತುಂಬಬಲ್ಲಂಥ ನಮ್ಮೆಲ್ಲರ ಮಧ್ಯದಲ್ಲಿನ ಅಸಾಮಾನ್ಯ ಹೆಂಗಸು. ತುಂಬಿದ ಕೊಡ. ತನ್ನಿಂದ ಹತಾಶೆಗಳು ತುಳುಕಲು ಇವಳು ಆಸ್ಪದ ನೀಡಲೇ ಇಲ್ಲ.

**ಬಿ.ಎಸ್. ವೆಂಕಟಲಕ್ಷ್ಮಿ**



# ಗೌರಿ ದೇಶಪಾಂಡೆ

## ಈಗೆಲ್ಲಿ ಹೋಗ್ತೀಯಾ ತೋಳಂಭಟ್ಟಾ?

ಕನ್ನಡಕ್ಕೆ: ಚಂದ್ರಕಾಂತ ಪೋಕಳೆ



ಕುಸನೂರ

ಧನಂಜಯನ ಜೊತೆ ಮದುವೆ ಮಾಡಿಕೊಳ್ಳಲು ನನಗೆ ಅಷ್ಟೇನೂ ಮನಸ್ಸಿರಲಿಲ್ಲ. ಅವನು ನನಗೆ ಹಿಡಿಸುತ್ತಿದ್ದ; ಆದರೆ ಒಬ್ಬ ಮನುಷ್ಯ ಹಿಡಿಸುತ್ತಾನೆಂದಾಕ್ಷಣ, ಅವನೊಂದಿಗೆ ಮದುವೆ ಮಾಡಿಕೊಳ್ಳಬೇಕೆಂದು ಹೇಳುವಷ್ಟು ಮೂರ್ಖತನ ನನ್ನ ಆ ವಯಸ್ಸಿನಲ್ಲೂ ಇರಲಿಲ್ಲ. ಏನಾಯಿತೆಂದರೆ, ಆಗಷ್ಟೇ ಎಂ.ಎ. ಮುಗಿಸಿ ಓದಿ, ಓದಿ ಬೇಸತ್ತಿದ್ದೆ. ಮೊದಲೇ ಬೇಸತ್ತ ವಿದ್ಯಾರ್ಥಿಗಳ ಎದುರು ಬೇಸರ ಮೂಡಿಸುವ ಭಾಷಣವನ್ನು ನಾಲ್ಕೈದು ಗಂಟೆ ನೀಡಿ, ಹೊಟ್ಟೆ ತುಂಬಿಸಿಕೊಳ್ಳುವ ಉತ್ಸಾಹವೂ ನನಗಿರಲಿಲ್ಲ. ಉಳಿದದ್ದೇನೂ ಕಣ್ಣೆದುರು ಕಾಣುತ್ತಿರಲಿಲ್ಲ. ಮುಖ್ಯವೆಂದರೆ, ಮದುವೆ ಮಾಡಿಕೊಳ್ತಿಯಾ ಅಂತ ಧನಂಜಯ ಕೇಳಿದ್ದ. ಆ ಕಾಲಕ್ಕೆ, ಹೊಟ್ಟೆ ತುಂಬಿಸಿಕೊಳ್ಳಲು ಹಾಗೂ ವೇಳೆ ಕಳೆಯಲು ಸಾಧನವೆಂದು ಈ ಮದುವೆ ಅವಶ್ಯಕ ಎಂಬ ಗ್ರಹಿಕೆಯನ್ನು ಸಮಾಜ ಒಪ್ಪಿಕೊಂಡಿತ್ತು. ಈಗಲೂ ಇದೆಯೆನ್ನಿ. ಆದರೆ 'ಯಾಕೆ?' ಎಂದು ಕೇಳಲು ಒಂದಿಬ್ಬರಾದರೂ ಸಿಗುತ್ತಾರೆನ್ನಿ. ಆಗ

ಎಲ್ಲವೂ ಆನಂದಮಯವಾಗಿತ್ತು. ತಾಯಂದಿರು, ಮಾವಶಿ, ಹಿರಿಯ ಅಕ್ಕ, ಮದುವೆಯಾದ ಗೆಳತಿಯರು, ಹೆಂಗಸರು ಹೆಂಗಸರಿಗಾಗಿ ನಡೆಸುವ ಮಾಸಿಕಗಳು-ಇವರೆಲ್ಲ ಮದುವೆಯನ್ನು ಜೋರಾಗಿ ಪುರಸ್ಕರಿಸಿದ್ದರು. ಪರಿಚಯದ ಮದುವೆಯನ್ನು ನೋಡಿ, ಇದೆಲ್ಲ ಮಾರುತಿಯ ಹೊಕ್ಕಳಿನ ಪ್ರಕಾರವಾಗಿರಬಹುದೇ ಎಂದು ಅಸ್ಪಷ್ಟವಾಗಿ ಅನಿಸಿತು, ಅದೂ ತಾತ್ಪೂರ್ತಿಕ. ಯಾಕೆಂದರೆ ಅಪ್ಪ-ಅಮ್ಮ ಕೇಳಿದ, 'ಮದುವೆ ಬೇಡವಾಗಿದ್ದರೆ ಮುಂದೇನು ಮಾಡ್ತಿಯಾ?' ಎಂಬ ಪ್ರಶ್ನೆಗೆ ನನ್ನ ಬಳಿ ಉತ್ತರವಿರಲಿಲ್ಲ. ಹೀಗಾಗಿ ನಾನು ಧನಂಜಯನಿಗೆ ಒಪ್ಪಿಗೆ ನೀಡಿದೆ. ನನಗಾದರೂ ಅಂಥ ಯಾವ ಅಪೇಕ್ಷೆ ಇದೆಯನ್ನಿ? ಬಹಳ ಕಿರಿಕಿರಿ ಮಾಡಬಾರದು? ಸಾಕಷ್ಟು ಹಣ ನೀಡಬೇಕು, ಮನಸ್ಸಿಗೆ ನೆಮ್ಮದಿ ನೀಡುತ್ತಿರಬೇಕು, ಸ್ವಲ್ಪ ಸ್ತುತಿ ಮಾಡಬೇಕು, ಸಾಕು! ಅವನ ಅಪೇಕ್ಷೆ ಏನಿದೆ ಎಂದು ಕೇಳುವ ವಿಚಾರ ನನಗೆ ಹೊಳೆಯಲೇ ಇಲ್ಲ. ಪಾಪ, ಅವನೂ ನನಗೇನೂ ಹೇಳಲೇ ಇಲ್ಲ. ಬಳಿಕ, ಆ ಕಾಲಕ್ಕೆ 'ಮಾಡರ್ನ್' ಎಂಬ ರೀತಿಯ ನಮ್ಮ ಮದುವೆಯಾಯಿತು. ಯಾರೂ ವರದಕ್ಷಿಣೆ ಬಗ್ಗೆ ಮಾತಾಡಲಿಲ್ಲ, ಕಣ್ಣೀರೂ ಸುರಿಸಲಿಲ್ಲ, ಭಟ್ಟನ ಬದಲು ರಿಜಿಸ್ಟ್ರಾರ್‌ನ ಎದುರು ಕೂತೆವು, ಮಧುಚಂದ್ರಕ್ಕಾಗಿ ಸಾಮಾನ್ಯವಾಗಿ ಹೋಗುವ ಮಹಾಬಲೇಶ್ವರ, ಮಾಥೆರಾನ್ ಕುಲು-ಕಾಶ್ಮೀರ ಎನ್ನದೆ, ಅರಣ್ಯದೊಳಗಿರುವ ಒಂದು ಫಾರೆಸ್ಟ್ ಬಂಗಲೆಯಲ್ಲಿ ತಿಂಗಳು ವಾಸ ಮಾಡಿದೆವು, ಇತ್ಯಾದಿ. ಆ ತಿಂಗಳೇ ನಾನು ತುಂಬಾ ಹೆದರಿಕೊಂಡಿದ್ದೆ. ಅನಂತರ ನಾವು ಮುಂಬೈಗೆ ಮರಳಿ, ಎಂದಿನ ಜಂಜಾಟದಲ್ಲಿ ಸೇರಿ ಹೋದಾಗ ಹೆದರಿಕೆ ಮಾಯವಾಯಿತು.

ಏನಾಯಿತೆಂದರೆ, ವಾರದ ಬಳಿಕ ನಾವು ವರಾಂಡದಲ್ಲಿ ಕೂತಿದ್ದೆವು, ಓದದೇ ಇದ್ದ ಒಂದು ದೊಡ್ಡ ಪುಸ್ತಕ ತರಬೇಕಾಗಿತ್ತು, ಈ ಖಾಲಿ ವೇಳೆಯಲ್ಲಿ ಓದಿ ಮುಗಿಸಬಹುದಾಗಿತ್ತು ಎಂದೆಲ್ಲ ಮನಸ್ಸಿನಲ್ಲಿ ಮೂಡಿತು. ನಾನು ಈ ವಿಷಯವನ್ನು ಧನಂಜಯನಿಗೆ ತಿಳಿಸಿದಾಗ, ಅವನು ಚಕಿತಗೊಂಡು ನನ್ನನ್ನೆ ನೋಡಲಾರಂಭಿಸಿದಾಗ, ನಾನೇನಾದರೂ ತಪ್ಪಿದ್ದೆನೇ ಎಂದು ಒಂದು ಕ್ಷಣ ನನಗನಿಸಿತು. ಆದರೆ ಎಲ್ಲಿ ತಪ್ಪಿದೆ ಎಂದೇ ತಿಳಿಯಲಿಲ್ಲ. ಅವನಿಗೆ ಸಿಟ್ಟೂ ಬಂದಿರಬಹುದು, ಯಾಕೆಂದರೆ, ರಾತ್ರಿ ಅವನು ಬೆನ್ನು ಮಾಡಿ ಮಲಗಿಯೇ ಬಿಟ್ಟ. ಈಗ ಪುಸ್ತಕ ಇದ್ದಿದ್ದರೆ ಎಷ್ಟು ಒಳ್ಳೆಯದಾಗಿತ್ತೆಂದು ಪುನಃ ಅನಿಸಿತು. ಆದರೆ ಅಷ್ಟರಲ್ಲಿ, ನಾನು ಇದನ್ನೆಲ್ಲ ಮಾತಾಡದೆಯೇ ಮನಸ್ಸಿನೊಳಗೆ ಇಟ್ಟುಕೊಳ್ಳುವುದನ್ನು ಕಲಿತಿದ್ದೆ.

ಮರುದಿನ ಧನೂ ಸಿಟ್ಟು ಮರೆತಿದ್ದ. ಆದರೆ ಕಲಿತ ಬುದ್ಧಿವಂತಿಕೆಯ ಒಂದು ಸಣ್ಣ ಕಲೆ ಮಾತ್ರ, ಮನದ ಮೂಲೆಯೊಳಗೆ ಹಾಗೇ ಉಳಿದುಬಿಟ್ಟಿತು. ಮನೆ ಮಾಡಿದ ಬಳಿಕ, ಮಹಿಳಾ ಪತ್ರಿಕೆಯವರು ಹೇಳಿದಂತೆ, ವೇಳೆ ಸರಸರ ಕಳೆಯಲಾರಂಭಿಸಿತು. ಅಂದರೆ, ಪತ್ರಿಕೆಯಲ್ಲಿ ಹೇಳಿದಂತೆ, ನಮ್ಮ ಆದಾಯಕ್ಕೆ ಸರಿಹೊಂದುವಂತಹ ಅಲಂಕಾರದ ಸಾಮಗ್ರಿಗಳನ್ನು ತರಬೇಕಿತ್ತು, ಹೊಸ ಹೊಸ ಅಡಿಗೆ ಪದಾರ್ಥ ಮಾಡಿ ನೋಡಬೇಕಿತ್ತು, ದಿನದ ಮನೆಗೆಲಸ, ಸಫಾಯಿ ಮಾಡುವವರ ಮೇಲೆ ಕಣ್ಣಿಡಬೇಕಿತ್ತು, ಕಸದಿಂದ ರಸ ತಯಾರಿಸಬೇಕಿತ್ತು. ಇಷ್ಟಾಗಿಯೂ ವೇಳೆ ಸಿಕ್ಕರೆ, ಓದದೇ ಉಳಿದ ಪುಸ್ತಕಗಳನ್ನು ಓದಬೇಕೆಂದುಕೊಂಡು ನಾನು ಲೈಬ್ರರಿಯ ಸದಸ್ಯಳಾದೆ. ಅಲ್ಲದೆ ಧನೂ ಮನೆಗೆ ಬಂದ ಬಳಿಕ ಹರಟೆಯಂತೂ ಇದ್ದೇ ಇದೆ. ಹೊಸದಾಗಿ ಬಂದ ವಧುವನ್ನು ನೋಡಲು ಆತನ ಗೆಳೆಯರು, ಸಹಪಾಠಿಗಳು ಬರುತ್ತಿದ್ದರು. ಅವರ ಮುಂದೆ ಸುಳಿದಾಡಬೇಕಿತ್ತು. ಮನಸ್ಸಿನೊಳಗೆ ಭೀತಿಯ ಭಾವನೆ ಮೂಡುವಂತಹ ಪರಿಸ್ಥಿತಿಯಿರಲಿಲ್ಲ. ನವವಧುವಿನೊಳಗೆ ಇರಬೇಕಾದ ನರ್ವಸ್ ತನವನ್ನು ನಾನಂತೂ ತೊರೆದೇ ಬಿಟ್ಟಿದ್ದೆ.

ವರ್ಷ, ಎರಡು ವರ್ಷ ಕಳೆಯಿತು. ಮನೆ, ಪಾಕಕ್ರಿಯೆ, ಅಲಂಕಾರ, ಹೊಸ ನೆರೆ ಹೊರೆ, ಎಲ್ಲವೂ ರೂಢಿಯಾಯಿತು. ಓದದೇ ಇದ್ದ ದಪ್ಪ-ದಪ್ಪ, ವೈಚಾರಿಕ ಗ್ರಂಥಗಳನ್ನೂ ಓದಿ ಮುಗಿಸಿದ್ದಾಯಿತು. ಮಧ್ಯಾಹ್ನದ ವೇಳೆ ಕಳೆಯುವದೂ ದುಸ್ತರವಾಯಿತು. ಧನೂ ಮನೆಗೆ ಬಂದ ಬಳಿಕ, 'ಇವತ್ತು ಆಫೀಸಿನಲ್ಲಿ ಏನೇನು ಮಾಡಿದ್ರಿ?' ಎಂದು ನಾನೇ ಕೇಳಲಾರಂಭಿಸಿದೆ. ಓದಿದ ಪುಸ್ತಕದ ವಿಷಯವನ್ನು ಅವನ ತಲೆಗೆ ಅಪ್ಪಳಿಸಲಾರಂಭಿಸಿದೆ.

ಕೆಲವು ತಿಂಗಳುಗಳ ಬಳಿಕ ಅವನು ಹೇಳಿದ, ''ಈಗ ನಮಗೊಂದು ಮಗು ಬೇಡವೇ? ಅಲ್ಲದೆ ನಿನಗಂತೂ ಬೇರೆ ಕೆಲಸವೂ ಇಲ್ಲ''

ಹಾಂ! ಈಗ ಮಾತ್ರ ನಾನು ಸ್ವಲ್ಪ ಬುದ್ಧಿವಂತಳಾಗಿದ್ದೆ. ಉಳಿದ ಯಾವ ಕೆಲಸವಿಲ್ಲೆಂದು ಮದುವೆ ಮಾಡಿಕೊಳ್ಳಲು ನನ್ನದು ಅಷ್ಟೇನೂ ಅಭ್ಯಂತರವಿರಲಿಲ್ಲ. ಆದರೆ ಒಂದು ಮಗುವಿಗೆ ಜನ್ಮ ನೀಡಿ, ಅದನ್ನು ಬೆಳೆಸುವದು ಕೆಲಸವಿಲ್ಲದವರ ಉದ್ಯೋಗವೆಂದು ನನಗಂತೂ ಅನಿಸಲಿಲ್ಲ. ನಾನಂದೆ, ''ಅವಸರವೇಕೆ? ಅದಕ್ಕಿಂತಲೂ, ನಾನೊಂದು ನೌಕರಿಯನ್ನು ಹುಡುಕುತ್ತೇನೆ.''

ಅವನು 'ಯಾಕೆ?' ಎಂದು ಪ್ರಶ್ನಿಸಬೇಕೆಂದಿದ್ದನೇನೋ. ಆದರೆ, ನಾನು ಈ ಮೊದಲೇ ಹೇಳಿದಂತೆ, ಪಾಪ ಅವನು ಬಂದದ್ದೆಲ್ಲ ಬರಲಿ ಎಂಬ ಸ್ವಭಾವದವನು. ಕಲಿತ ಹೆಂಗಸರು, ಕೆಲಸವಿಲ್ಲದ ಉದ್ಯೋಗವೆಂದು (ಹೊಟ್ಟೆ ತುಂಬುವ ಉದ್ಯೋಗವಲ್ಲ!) ನೌಕರಿ ಮಾಡುವದೂ ಸತತ ಸಮಾಜಮಾನ್ಯವೇ ಆಗಿತ್ತು!

ಹುಡುಕುತ್ತ-ಹುಡುಕುತ್ತ ಕೊನೆಗೂ ನನಗೊಂದು ನೌಕರಿಯೂ ಸಿಕ್ಕಿತು-ಒಂದು ಮಾಸ ಪತ್ರಿಕೆಯಲ್ಲಿ ದುಡಿಯುವ ಕೆಲಸ! ಪ್ರೂಫ್ ನೋಡುವವರಿಂದ ಹಿಡಿದು, ಜಾಹೀರಾತಿನ ಬ್ಲಾಕ್ ಅಚ್ಚು ಮನೆಗೆ ಕಳಿಸುವವರೆಗೆ. ಹಾಗೂ ಚಹಾ ತಯಾರಿಸುವದರಿಂದ ಹಿಡಿದು, ಸುದ್ದಿ ಕಡಿಮೆಬಿದ್ದರೆ ತುಂಬುವ ತನಕ ದುಡಿಯಬೇಕಿತ್ತು.

ಈ ನೌಕರಿಯಲ್ಲಿ ನಾನು ಹೊಂದಿಕೊಂಡ ರೀತಿ ಕಂಡು ನನಗೇ ಆಶ್ಚರ್ಯವಾಯಿತು. ಸರಸರ ಪ್ರೂಫ್ ತಿದ್ದಲಾರಂಭಿಸಿದೆ, ಟಣ್ಣೆಂದು ಜಿಗಿಯುತ್ತ ಅಚ್ಚು ಮನೆಗೆ ಹೋಗಿಬರುತ್ತಿದ್ದೆ. ಸಂಪಾದಕರೊಂದಿಗೆ ಆತ್ಮೀಯತೆಯೂ ಬೆಳೆಯಿತು. ಟೈಪಿಸ್ಟ್ ಜೊತೆ ಕೂತು ಚಕ್ರಬಂಧ ಬಿಡಿಸಲಾರಂಭಿಸಿದೆ. ಆಫೀಸ್‌ಬಾಯ್‌ನ ಸ್ನೇಹದಿಂದ ಪಾನ್ ತಿನ್ನುವದೂ ರೂಢಿಯಾಯಿತು. ಜೊತೆಗೆ ನನಗಿಷ್ಟವಾದ ಮೀನೂ ಮನೆಗೆ ಬರಲಾರಂಭಿಸಿತು. ಇದನ್ನೆಲ್ಲ ಕಂಡು ನನಗೆ, ರವಿವಾರ ರಜೆಯಿರಬಾರದಿತ್ತೆಂದೂ ಅನಿಸಿತು.

ಒಂದು ರವಿವಾರ, ನಗುನಗುತ್ತಲೇ ಈ ವಿಷಯವನ್ನು ಧನೂಗೆ ಹೇಳಬೇಕೆಂದಿದ್ದೆ. ಆದರೆ ಮನಸ್ಸಿನ ಮೂಲೆಯೊಳಗಿದ್ದ ಎರಡು-ಮೂರು ವರ್ಷಗಳ ಹಿಂದಿನ ನೋವು ಠಸ್‌ಠಸ್ ಎಂದು ಉರಿದು, ಮತ್ತಷ್ಟು ಕೈಕಾಲು ಚಾಚಿತು. ಮೊದಲ ಸಂಬಳ ತಂದು (ಹಾಗೇನೂ ಬಹಳವಿರಲಿಲ್ಲ, ಆದರೂ) ನಾನು ಧನೂಗೆ ತೋರಿಸಿದೆ. ಅವನಿಗೊಂದು ಟೈ ಖರೀದಿಸಿದೆ, ಸ್ವಲ್ಪ ಮೋಜೂ ಮಾಡಿದೆ, 'ಉಳಿದದ್ದನ್ನು ಬ್ಯಾಂಕಿನಲ್ಲಿಡು' ಎಂದು ಹೇಳಿದ. ಆದರವನು 'ಮಾಡರ್ನ್' ಗಂಡನಿಗೆ ಶೋಭಿಸುವ ರೀತಿಯಲ್ಲಿ, ಔದಾರ್ಯದಿಂದ, 'ಒಂದೇ ಖಾತೆ ತೆರೆದು ಅದರಲ್ಲಿ ಇಬ್ಬರ ಹಣವನ್ನೂ ಇಡೋಣ' ಎಂದು ಸೂಚಿಸಿದ. ಆದರೆ ನನ್ನದೇ ಬೇರೆ ಅಕೌಂಟ್ ತೆಗೆಯಬೇಕೆಂಬ ಭಾವನೆ ನನ್ನ ಮನದಲ್ಲಿ ಮೂಡಿತು. ತಟ್ಟನೆ ನಾನದನ್ನು ಅವನಿಗೆ ಹೇಳಿಯೂಬಿಟ್ಟೆ. ಅವನು ಬೇಡ ಎನ್ನಲಿಲ್ಲ. ಕಿಂಚಿತ್ ಅಚ್ಚರಿಯಿಂದ ನೋಡುತ್ತ, 'ಬ್ಯಾಂಕಿಗೆ ಹೋಗು, ನನ್ನ ರೆಫರನ್ಸ್ ಕೊಡು' ಎಂದು ಹೇಳಿದ. ನನಗೆ ತುಂಬಾ ಸಮಾಧಾನವೆನಿಸಿತು. ಸ್ವತಂತ್ರ, ನಿರ್ಭಿಡೆಯ ಹಾಗೂ ಸಂಪಾದನೆ ಮಾಡುವವಳಂತೆ ಅನಿಸಿತು.

ನನ್ನ ಈ ಸುಖೀ ಸಂಸಾರ ಹಾಗೂ ನೇರ ಆಯುಷ್ಯ ಹಾಗೆಯೇ ಮುಂದೆ ಸಾಗಲು ಯಾವ

ತೊಂದರೆಯೂ ಇರಲಿಲ್ಲ. ಹಳೇ ಪರಿಚಿತರು ಭೆಟ್ಟಿಯಾದರೆ ನನ್ನ ಬಗ್ಗೆ ಅಸೂಯೆಪಡುತ್ತಿದ್ದರು. 'ನೌಕರಿ ಮಾಡಲು ಗಂಡ ಒಪ್ಪಿಗೆ ನೀಡಿದನೇ!' ಎಂದು ಕೇಳುತ್ತಿದ್ದರು. ಆಗ ನಾನು ಸ್ವಾತಂತ್ರ್ಯದ ಧಿಮಾಕಿನಿಂದ ಹೇಳುತ್ತಿದ್ದೆ, 'ನಾನು ಹಾಗೇನೂ ಕೇಳಲಿಲ್ಲ. ಬರೇ ನೌಕರಿ ಮಾಡುವದಾಗಿ ಹೇಳಿದೆ!' ಇದು ಅಷ್ಟೇನೂ ಸತ್ಯವಾಗಿರಲಿಲ್ಲ. ಆದರೆ ಪಾಪ, ಜನ ನನ್ನ ಮಾತು ನಂಬುತ್ತಿದ್ದರು, ಅದಕ್ಕಿಂತಲೂ ಹೆಚ್ಚಾಗಿ ಚಕಿತರಾಗುತ್ತಿದ್ದರು.

ನಮ್ಮದೇನು ಅಂಥ ಸಾಹಿತ್ಯಿಕ ಮಾಸಪತ್ರಿಕೆಯಾಗಿರಲಿಲ್ಲ. ಆರ್ಥಿಕ ಹಾಗೂ ರಾಜಕೀಯ ವಿಷಯವನ್ನು ಅದು ಒಳಗೊಂಡಿತ್ತು. ವಿದ್ವಾಂಸರು, ಪ್ರೊಫೆಸರ್‌ಗಳು ಹಾಗೂ ಯಾರಿಗೂ ಅರ್ಥವಾಗದ ಲೇಖನ ಮತ್ತು ಗ್ರಂಥಗಳನ್ನು ಬರೆಯುವ ಅಧಿಕಾರಿ ಲೇಖಕರು ಅಲ್ಲಿ ಬಂದು ಹೋಗುತ್ತಿದ್ದರು. ಎಂ.ಎ. ಪದವಿಯ ಆಧಾರದಿಂದ ಅವರ ಚರ್ಚೆಯ ಬಹುಭಾಗ ತಿಳಿಯುತ್ತಿತ್ತೆಂದಮೇಲೆ, ನಾನೂ ಬುದ್ಧಿವಂತಳಾದೆ ಎಂದು ಅನಿಸತೊಡಗಿತು. ಆದರೆ ಎಂ.ಎ ಗಳಿಸಿದ್ದು ಸಾಹಿತ್ಯ ವಿಷಯದ ಮೇಲೆ. ಆದರೂ ಅರ್ಥಶಾಸ್ತ್ರ ಇತ್ಯಾದಿ ಇತ್ಯಾದಿ ತಿಳಿಯುತ್ತದೆ ಎಂದ ಮೇಲೆ ನಾನು ಜನ್ಮತಃ ಜಾಣೆ ಎಂದೂ ಅನಿಸಲಾರಂಭಿಸಿತು. ಆತ್ಮೀಯವಾಗಿದ್ದ ಸಂಪಾದಕರಿಗೆ ಹೇಳಿದೆ, ''ಇದು ಸಾಹಿತ್ಯಿಕ ಮಾಸಿಕವಲ್ಲ ಎನ್ನುವದಂತೂ ನಿಜ. ಆದರೂ ವಿಮರ್ಶೆಯ ಒಂದು ಅಂಕಣ ಆರಂಭಿಸಿದರೆ ಹೇಗೆ?''

ಅವರು ಹಣೆಗೆ ಗಂಟು ಹಾಕಿ ಹೇಳಿದರು, ''ಆದರೆ ಅದನ್ನು ಬರೆಯುವವರು ಯಾರು?''

''ನಾನು!''

''ನೋಡೋಣ. ಯೋಚಿಸುತ್ತೇನೆ.''

ಅವರ ಟೇಬಲ ಮೇಲಿದ್ದ 'ಇಕನಾಮಿಸ್ಟ್' ತೋರಿಸಿ ಹೇಳಿದೆ, ''ಅದರಲ್ಲಿ ಸಹ ಸಾಹಿತ್ಯ ಸಮೀಕ್ಷೆಯಿರುತ್ತದೆ.''

ಇದನ್ನು ಕೇಳಿ ಅವರು ಮತ್ತೆ ಹಣೆಗೆ ಗಂಟು ಹಾಕಿದರು. ತಾನು ಹಿಂದೂಸ್ತಾನದ 'ಇಕನಾಮಿಸ್ಟ್' ನಡೆಸುತ್ತೇನೆಂದು ಅವರು ಭಾವಿಸಿದ್ದರು. ಹೀಗಾಗಿ

---

ಪುಣೆ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿರುವ **ಗೌರಿ ದೇಶಪಾಂಡೆ** (ಜನನ-1942) ಆಧುನಿಕ ಸಂವೇದನೆ, ಪ್ರಾಯೋಗಿಕತೆಗೆ ಹೆಸರಾದ ಪ್ರತಿಭೆ. ಉಪರೋಧಕ ಶೈಲಿ, ನೇರ ಪ್ರತಿಭಟನೆಗಿಂತ ಪ್ರಬಲ ಎಂಬ ನಂಬಿಕೆಯ ಅವರ ನಾಯಕಿಯರು ಸಂಸಾರದಲ್ಲಿ ರಮಿಸುತ್ತಲೇ, ಪತಿ-ಪತ್ನಿ ಸಂಬಂಧವನ್ನು, ತನ್ಮೂಲಕ ಸಂಸ್ಕೃತಿ, ಪರಂಪರಾಗತ ಮೌಲ್ಯಗಳನ್ನು ಪ್ರಶ್ನಿಸುವ ಜಾಣೆಯರು. ಗೌರಿಯವರ ಹಲವು ಸ್ತ್ರೀಕೇಂದ್ರಿತ ಕಾದಂಬರಿಗಳು, ಕತೆಗಳು, ಹತ್ತೊಂಬತ್ತನೇ ಶತಮಾನದಲ್ಲೇ ಹೆಣ್ಣಿನ 'ವ್ಯಥೆ' ತೋರಿಸುವ ಮರಾಠಿ ಸಾಹಿತ್ಯ ಪರಂಪರೆಯನ್ನು ಮುಂದುವರಿಸಿರುವುದು ಗಮನಾರ್ಹ.

'ಎಲ್ಲಿಯವರೆಗೆ ಹೆಣ್ಣು ಪ್ರಬುದ್ಧಳಾಗುವುದಿಲ್ಲವೋ, ಅಲ್ಲಿಯವರೆಗೆ ಗಂಡಸು ನಾನಾ ರೀತಿಯ 'ಚಾಲಾಕಿತನ' ತೋರಿಸುತ್ತಾನೆ; ಆಕೆಯ ಛಂದ, ಹವ್ಯಾಸ, ಬೇಕು-ಬೇಡ ಎಲ್ಲವೂ ಆವನ ದೃಷ್ಟಿಯಲ್ಲಿ ನಗಣ್ಯ'- ಇದನ್ನು ಅಲಿಪ್ತವಾಗಿ ಸೂಚಿಸುವ ಪ್ರಯತ್ನ ಈ ಕತೆಯಲ್ಲಿದೆ.



ಇದನ್ನು ಕನ್ನಡಕ್ಕೆ ಕೊಟ್ಟಿರುವ **ಚಂದ್ರಕಾಂತ ಪೋಕಳೆ** ಉತ್ತರಕರ್ನಾಟಕದ ಗಡಿಪ್ರದೇಶದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದುಕೊಂಡು, ಉತ್ಕೃಷ್ಟ ಮರಾಠಿ ಸಾಹಿತ್ಯವನ್ನು ಸಮರ್ಥವಾಗಿ ಆದರೆಲ್ಲ ಸೂಕ್ಷ್ಮಗಳೊಂದಿಗೆ ಕನ್ನಡಕ್ಕೆ ತಂದು ಪ್ರಸಿದ್ಧರಾಗಿದ್ದಾರೆ.

ನನ್ನ ಆರ್ಗ್ಯುಮೆಂಟ್ ರಾಮಬಾಣವಾಗಿ ಪರಿಣಮಿಸಿತು. ಅವರು ನನ್ನ ಸೂಚನೆಯನ್ನು ಒಪ್ಪಿದರು. 'ಹೆಚ್ಚು ಹಣ ಸಿಗುವದಿಲ್ಲ!' ಎಂದು ಹೇಳುವದನ್ನು ಮಾತ್ರ ಮರೆಯಲಿಲ್ಲ.

''ಆದರೆ ಪುಸ್ತಕ ಖರೀದಿಸಲು ಹಣ ಕೊಡಬೇಕು''

''ತಿಂಗಳಲ್ಲಿ ಎರಡೇ, ಹೆಚ್ಚಿಲ್ಲ.''

''ಓ.ಕೆ!''

ನಾನು ಖುಶಿಯಾದೆ. ತಕ್ಷಣ ಹೋಗಿ ಎರಡು ಪುಸ್ತಕ ಖರೀದಿಸಿದೆ. ಆಫೀಸಿನ ಕೆಲಸದಿಂದಾಗಿ ಅಲ್ಲಿ ಓದುವದು ಸಾಧ್ಯವಿಲ್ಲೆಂದು, ಬೇಕೆಂತಲೇ ಮನೆಗೆ ತಂದು, ಧನೂನ ಎದುರಿಗೆ ಕೂತು ಓದಿದೆ. ಟೀಕೆ-ವಿಮರ್ಶೆಯ ಒಂದು ಅಂಕಣ ಗೀಚಿದೆ. ನನ್ನ ಹೆಸರಿನೊಂದಿಗೆ ಅದು ಪ್ರಕಟವೂ ಆಯಿತು. ನೋಡುನೋಡು ವರ್ಷದಲ್ಲಿ ನಾನು ಬೆಳೆದಿದ್ದೆ.

ಈ ಉದ್ಯೋಗದಿಂದ ನನ್ನ ಕೈಗೊಂದು ಪುಸ್ತಕ ಬಂತು. ಲೇಖಕನೂ ಪ್ರಸಿದ್ಧನೇ. ಅಂದ ಮೇಲೆ, ಹೆಸರಾದರೂ ಯಾಕೆ ಬರೆಯೋದು? ನನ್ನಂತಹ ವ್ಯಕ್ತಿಯ ಬದುಕಿನಲ್ಲಿ ಇಂತಹ ಅನೇಕ 'ಅವನು' ಬರುತ್ತಾರೆ. ಹಾಗೆಯೇ ಅವನೂ ಬಂದ. ಅವನು ಬರೆದ ಈ ಕಾದಂಬರಿ ಚೆನ್ನಾಗಿತ್ತು. ನಾನು ಹೊಗಳಿ ವಿಮರ್ಶೆ ಬರೆದೆ. ಅವನ ಕೃತಜ್ಞತೆಯ ಪತ್ರವೂ ಬಂತು. ನಾನು ಕೆಲವು ದೋಷ ಸೂಚಿಸುವ ಪತ್ರ ಬರೆದೆ. ಅವನು ಇನ್ನೊಂದು ಕಾದಂಬರಿ ಕಳಿಸಿದ; ನಾನು ಮತ್ತೇನೊ ಬರೆದು ಕಳಿಸಿದೆ...

ನಾವು ಪರಸ್ಪರ ಭೆಟ್ಟಿಯಾದಾಗ, ಪ್ರೇಮದಲ್ಲಿ ಬೀಳುವ ತಯಾರಿಯಲ್ಲಿದ್ದೆವು. ಅವನು ಕಪ್ಪು-ಹಸಿದಡ್ಡ-ಅಂಗವಿಕಲನಾಗಿದ್ದರೂ ನಾನವನ ಪ್ರೇಮದಲ್ಲಿ ಬೀಳುತ್ತಿದ್ದೆ. ಆದರೆ ಅವನೋ, ಆಕರ್ಷಕ, ಮೋಹಕ, ಏಕಾಕಿ, ಮೇಲಾಗಿ ಕಾದಂಬರಿಕಾರ! ಆದರೆ ನೋಡುವ ದೃಷ್ಟಿಕೋನವೇ ತಪ್ಪಾಗಿತ್ತು. ಈಗ ಅರ್ಥವಾಗುತ್ತಿದೆ, ಹೆಣ್ಣನ್ನು ತನ್ನ ಪ್ರೇಮದಲ್ಲಿ ಹೇಗೆ ಸಿಲುಕಿಸಬೇಕೆನ್ನುವದು ಅವನಿಗೆ ಹಸ್ತಗತವಾದಂತಿದೆ. ಆದರೆ ನನ್ನಂತಹ ಭೋಳೆ ಸ್ವಭಾವದವಳಿಗೆ ಅಂಥವನು ಎಂದೂ ಭೆಟ್ಟಿಯಾಗಲೇ ಇಲ್ಲ. ಅವನ ದೃಷ್ಟಿಯಿಂದ ಹೇಳುವದಾದರೆ- ಅವನೂ ನನ್ನ ಪ್ರೇಮದಲ್ಲಿ ಸಿಲುಕಿದ... ಎಂದಿನ ಪದ್ಧತಿಯಂತೆ ಆರಂಭಿಸಿದ ಸ್ನೇಹ, ಮಾತಾಡಿದ ಶಬ್ದ, ಚೆಲ್ಲಿದ ನೋಟ, ನಕ್ಕ ನಗು ಅವನ ಮೈ ಮೇಲೆ ಬಂತು. ಅವನು ಯಾವ ಹೊಟೇಲಿನಲ್ಲಿ ಇಳಿದುಕೊಂಡಿದ್ದನೋ ಅಲ್ಲಿಯ ರೆಸ್ಟಾರಂಟ್‌ನಲ್ಲಿ ಕೂತು, ಬಿಯರ್ ಕುಡಿಯುವಾಗ, ನಾನು ಸಹಜವಾಗಿ ನನ್ನ ಮನದ ಮೂಲೆಯಲ್ಲಿದ್ದ ಪುಸ್ತಕದ ವಿಷಯ ಅವನಿಗೆ ಹೇಳಿದೆ. ಅವನು ಖೋ ಖೋ ಎಂದು ನಕ್ಕು, ಕುರ್ಚಿ ಹಿಂದೆ ಸರಿಸಿ, ಎದ್ದು ನಿಂತು, ತುಟಿಯನ್ನು ಮೋಹಕವಾಗಿ ಹೊರಳಿಸಿ ಹೇಳಿದ, ''ನನ್ನೊಂದಿಗೆ ಬಾ!'' ನಾನು ತಟ್ಟನೆ ಉಗುಳು ನುಂಗಿದೆ. ಸರ್ರನೆ



ಬಾಯೊಳಗಿನ ಶ್ವಾಸ ಎಳೆದುಕೊಂಡು ಅವನನ್ನೇ ನೋಡಲಾರಂಭಿಸಿದೆ. ಅವನು ಮೀಸೆಯ ಮೇಲೆ ಕೈಯಾಡಿಸಿ, ಕೈ ಚಾಚಿದ. ಆ ಕೈ ಹಿಡಿದುಕೊಂಡಿದ್ದು ಒಳ್ಳೆಯದೇ ಆಯಿತು. ಯಾಕೆಂದರೆ ನನ್ನ ಕಾಲು ಕಂಪಿಸುತ್ತಿತ್ತು.

ನಾನು ಮಾಡುತ್ತಿರುವದು ಸರಿಯಲ್ಲ, ಹಾಗೆಲ್ಲ ಮಾಡಬಾರದು, ಎಂಬ ವಿಚಾರಗಳೆಲ್ಲ ನನ್ನ ಮನದಲ್ಲಿ ಮೂಡಿತೋ ಇಲ್ಲವೋ ಎಂದು ಯಾರಾದರೂ ಕೇಳಿದರೆ, ನಿಜಕ್ಕೂ ಈ ಪ್ರಶ್ನೆ ಎಂದೂ ಸ್ವಂತ ಕೇಳಿಕೊಂಡಿಲ್ಲವೆಂದು ಖಚಿತ ವಾಗಿ ಹೇಳಬಲ್ಲೆ. ಯಾಕೆಂದರೆ ಈಗ ನಡೆಯು ತ್ತಿರುವ, ಕುಸಿಯುತ್ತಿರುವ, ಫೂತ್ಕರಿಸುತ್ತಿರುವ, ಎರಗುತ್ತಿರುವ, ಬೀಸುತ್ತಿರುವ-ಇದೆಲ್ಲ ನನ್ನ ಸ್ವಚ್ಛ, ಶಾಂತ, ಸರಳ ಆಯುಷ್ಯದ ಧನೂನಿಗೆ ಸಂಬಂಧಪಟ್ಟದಲ್ಲ ಎಂಬ ಖಾತ್ರಿ ನನಗಿತ್ತು. ಇದೆಲ್ಲ 'ನನ್ನ ನನಗೇ', ಅಥವಾ 'ಅವನ ನನಗೇ' ಆಗುತ್ತದೆ; 'ಧನೂನ ನನಗಲ್ಲ'. ಈ ಮೊದಲು ಹೀಗೆಂದೂ ಆಗಿರಲಿಲ್ಲ, ಅನಿಸಿರಲಿಲ್ಲ, ಹೊಳೆದಿರಲಿಲ್ಲ, ಸಿಡಿದಿರಲಿಲ್ಲ. ಅದೇ ರಾತ್ರಿ ಅವನು ಮರಳಬೇಕಿತ್ತು. ಅವನು ಹೊರಟು ನಿಂತಾಗ, ಅವನ ಸೊಂಟವನ್ನು ತಬ್ಬಿಕೊಂಡು ನಾನು ಬಿಕ್ಕಿ ಬಿಕ್ಕಿ ಅತ್ತೆ. 'ಶ್ಯಾಮನ ತಾಯಿ' ನೋಡುವಾಗ ಕಣ್ಣೀರು ಸುರಿಸದ ನಾನು, ಈಗ ಮಾತ್ರ ಬದುಕು ಚಿಂದಿಯಾದವರಂತೆ ಅತ್ತೆ.

ಅವನೂ ಚಕಿತನಾದ. ನನ್ನನ್ನು ಬಿಗಿಯಾಗಿ ಅಪ್ಪಿಕೊಂಡು, ಪುನಃ ಪುನಃ ಮುತ್ತಿಡುತ್ತ, ನನ್ನನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದ; ನನ್ನ ಕಣ್ಣೀರು ಒರೆಸುತ್ತ, ಕೆಳಗೆ ನನ್ನ ಪಕ್ಕದಲ್ಲಿ ಕೂತ. ನನ್ನ ಕೂದಲು, ಗೋಣು, ಬೆನ್ನು ಸವರುತ್ತ, ತಟ್ಟುತ್ತ, ಶಾಂತಗೊಳಿಸಲಾರಂಭಿಸಿದ. ಬಳಿಕ ಮೊದಲಿನ ಆವೇಗದಿಂದ, ಆತುರತೆಯಿಂದ, ನನ್ನನ್ನು ತನ್ನ ಮೇಲೆ ಎಳೆದುಕೊಳ್ಳುತ್ತ ಹೇಳಿದ, "ಸರಿ! ನಾನಿಂದು ಹೋಗುವದಿಲ್ಲ ಆಯ್ತೆ! ಈಗ ಅಳಬೇಡ, ಹುಚ್ಚಿ!"

ಅವನ ಪ್ರೇಮ ಕಂಡು ನಾನು ಮತ್ತಷ್ಟು ಅಳಲಾರಂಭಿಸಿದೆ. ತನ್ನ ಕೆಲಸ, ವಿಮಾನದ ಟಿಕೆಟ್, ತನ್ನ ಹೆಸರು-ಪ್ರತಿಷ್ಠೆ, ಎಲ್ಲವನ್ನೂ ಅವನು ನನಗಾಗಿ ಗಾಳಿಯಲ್ಲಿ ತೂರಿದ. ಈ ಮೊದಲು ಯಾರೂ ನನಗಾಗಿ ಹೀಗೆ ಮಾಡಿರ ಲಿಲ್ಲ. ನಾನು ಹೇಗೋ ಸಾವರಿಸಿಕೊಳ್ಳುತ್ತ ಹೇಳಿದ್ದೆ, "ನಾನೆಂಥ ಹುಚ್ಚಿ ಅಲ್ಲವೇ! ನೀನು ಹೋಗಲೇಬೇಕು, ಹಾಗೆ ನಾನೂ". ಆ ಬಳಿಕ ಧನೂನ ನೆನಪಿನಿಂದ ನನ್ನಲ್ಲಿ ಅಪರಾಧಿ ಭಾವನೆ ಮೂಡಿತು.

ಮನೆಗೆ ಮರಳಿದ ಬಳಿಕ ನನಗೀಗ ಹುಚ್ಚೇ ಹಿಡಿಯುತ್ತಿದೆ ಎಂದೆನಿಸಿತು. ಅವನ ಸ್ಪರ್ಶಪರೀಕ್ಷೆ ದಿಂದ ಧಗಧಗಿಸುವ, ಚಕಿತಗೊಳ್ಳುವ, ನನ್ನ ದೇಹಕ್ಕೆ ಧನೂನ ಸ್ಪರ್ಶ ಬೇಡವೆನಿಸಿತು. ಧನೂ ಅಂಥ ಆವೇಗ ಎಂದೂ ತೋರಿಸಲಿಲ್ಲವೆನ್ನಿ. ಪ್ರತಿದಿನ ಮಲಗುವಾಗ, ದೀಪವಾರಿದ ಬಳಿಕ, ಕೂದಲ ಮೇಲೆ ಕೈಯಾಡಿಸಿ, ತುಟಿಗೊಂದು ಮೆಲು ಮುತ್ತು ನೀಡಿ, ಅವನು 'ಗುಡ್ ನೈಟ್!' ಎನ್ನುತ್ತಿದ್ದ. ಕೆಲವೊಮ್ಮೆ ಆ ಗುಡ್‌ನೈಟ್ ಎದುರು ಪ್ರಶ್ನೆ ಚಿಹ್ನೆ ಮೂಡುತ್ತಿತ್ತು. ನಾನದಕ್ಕೆ ಸಹಕರಿಸಿ ದರೆ ಸರಿ, ಇಲ್ಲದಿದ್ದರೆ ಮಗ್ಗಲು ಬದಲಿಸಿ ಮಲಗಿಬಿಡುತ್ತಿದ್ದ. ಈಗ ಅವನು ದೀಪ ಆರಿಸಲು ಕೈ ಚಾಚುವ ಮೊದಲೇ, ನಾನು ಚಾದರ ಎಳೆದುಕೊಂಡು, ಮಗ್ಗಲು ಬದಲಿಸಿ ಮಲಗಿಬಿಡಲಾರಂಭಿಸಿದೆ. ಯಾರ ಯಾರದೋ ಒಂದೊಂದು ಕ್ಷಣ ಯುಗದಂತಾಗುತ್ತದೆಯೆಂದು ಕವಿತೆಯಲ್ಲಿ ಓದಿದ್ದೆ. ಆದರದು ಅಕ್ಷರಶಃ ಸತ್ಯ ಎನ್ನುವದು ಆಗ ನನಗೆ ತಿಳಿಯಿತು. ನನ್ನ ಯೋಚನೆಗಳನ್ನು ನನ್ನ ಪ್ರಿಯಕರನಿಂದ ದೂರ ತಳ್ಳುವ ಪ್ರತಿಯೊಂದು ಕ್ಷಣ ನನಗೆ ಶತ್ರು ವೆನಿಸಿತು.

ಧನೂ ಹಾಗೇನೂ ಮಾತುಗಾರನಲ್ಲ. ಈಗ, ನಾನೂ ಬಾಯಿ ಬಿಗಿದುಕೊಂಡಾಗ, ಮನೆಯಲ್ಲಿ ಶಾಂತತೆ ಪಸರಿಸಿತು. ನಾನು ಕಣ್ಣೆದುರು ಪುಸ್ತಕ

ಫೋಂದನ್ನು ಹಿಡಿದು, ಕಣ್ಣೀರು ಸುರಿಸಬಾರದೆಂದು ಪ್ರಯತ್ನಿಸುತ್ತ, ಸಾಯಂಕಾಲ ಕೂತಿರುತ್ತಿದ್ದೆ. ಅವನೂ ಆಫೀಸಿನಿಂದ ತಂದ ಕಾಗದ-ಪತ್ರಗಳನ್ನು ನೋಡುತ್ತಿದ್ದ. ಯಾವಾಗಲಾದರೊಮ್ಮೆ, ಹೊರಗೆ ಬಾಲ್ಕನಿಯಿಂದ ಕೆಳಗೆ ಜಿಗಿಯಲಾರೆನೆಂಬ ಭರವಸೆ ನನಗಿರಲಿಲ್ಲ.

ಹೀಗೆ ಕೆಲವು ದಿನಗಳ ನಂತರ (ವಾರಗಳ ನಂತರ? ತಿಂಗಳ ಅಥವಾ ಯುಗದ ನಂತರ?) ನನಗೆ ಅವನ ಪತ್ರ ಬಂದಿತು. "ಹುಚ್ಚು ಹುಡುಗಿ, ನಾನು ಬೇಡವೆಂದುಕೊಂಡರೂ ನಿನ್ನ ಪ್ರೇಮದಲ್ಲಿ ಸಿಲುಕಿದೆ. ನನ್ನ ಬಳಿ ಬಂದುಬಿಡು! ಬೇಗ ಬಾ!" ಪತ್ರ ಕೈಯಲ್ಲಿ ಹಿಡಿದು, ನಾನು ಗೋಡೆಯ ಮೇಲಿದ್ದ ಕ್ಯಾಲೆಂಡರಿನ ದೊಡ್ಡ ದೊಡ್ಡ ಅಂಕೆಗಳನ್ನು ನೋಡಲಾರಂಭಿಸಿದೆ. ಅವನ ಧ್ವನಿ, ಅವನ ಕೈ, ಅವನ ನವಿರಾದ ಕಚಗುಳಿ ಇಡುವ ಮೀಸೆ ನೆನಪಾಗಿ ರೋಮಾಂಚನಗೊಂಡೆ. ನಾನು ಬೊಗಸೆಯಲ್ಲಿ ಮುಖ ಮುಚ್ಚಿಕೊಳ್ಳಬೇಕೆನ್ನುವಷ್ಟರಲ್ಲಿ ಸಂಪಾದಕರಿಂದ ಕರೆ ಬಂತು. ನಿಟ್ಟುಸಿರು ಬಿಟ್ಟು, ಪತ್ರ ಖಾನೆಯೊಳಗೆ ಒಗೆದು, ಕ್ಯಾಬಿನ್ನಿಗೆ ಹೋದೆ. "ಇಲ್ನೋಡು, ದೀಪಾವಳಿ ಸಂಚಿಕೆಗಾಗಿ ಪ್ಲಾನಿಂಗ್ ಕಮಿಷನ್ನಿನ ಉಪಾಧ್ಯಕ್ಷರ ಸಂದರ್ಶನ ಪ್ರಕಟಿಸಬೇಕಾಗಿದೆ. ತನಗೆ ಬರೆದು ಕೊಡಲು ಪುರುಸೊತ್ತಿಲ್ಲ, ಯಾರನ್ನಾದರೂ ಕಳಿಸಿ ಎಂದು ಈಗಷ್ಟೇ ಪತ್ರ ಬಂದಿದೆ. ನೀನು ಹೋಗ್ತಿಯಾ? ನಾಲ್ಕೈದು ದಿನ ಇರಬೇಕಾಗಬಹುದು. ರಿಕಾರ್ಡಿಂಗ್ ಮಾಡಿಕೊಂಡು ಬಾ, ಅನಂತರ ನಾವು ಸರಿಯಾಗಿ ಟಿಪ್ಪಣಿ ಮಾಡಿ ಪ್ರಕಟಿಸೋಣ. ಸಂದರ್ಶನ ತೆಗೆದುಕೊಂಡು ಕಳಿಸುವಂತೆ ಸಮೀರಗೆ ಹೇಳಬಹುದಾಗಿತ್ತು. ಆದರವನು ಮಾರಿಶಸ್‌ಗೆ ಹೋಗಿದ್ದಾನೆ. ನಾಳೆಯೇ ಹೋಗಬೇಕು, ಹೋಗ್ತಿಯಾ?"

ಈಗ ಸಂತೋಷದಿಂದ ಮೂರ್ಛೆ ಹೋಗುತ್ತೀನೇನೋ ಎಂದು ನನಗೆನಿಸಿತು. ಬಾಯಿಂದ ಶಬ್ದವೇ ಹೊರಬರುತ್ತಿಲ್ಲ. ನಾಲ್ಕೈದು ದಿನ ಹಾಗೂ ರಾತ್ರಿ, (ಸಂದರ್ಶನದ ಮೂರ್ನಾಲ್ಕು ಗಂಟೆ ಬಿಟ್ಟರೆ) ನಾನು ಅವನೊಂದಿಗೆ ಕಾಲ ಕಳೆಯಬಹುದಾಗಿತ್ತು. ಸ್ವಲ್ಪ ಪ್ರಯತ್ನಪಟ್ಟರೆ ಒಂದು ವಾರ ಸಹ!

ನಾನು ಯೋಚಿಸುತ್ತಿರುವುದೇನೆಂದು ಸಂಪಾದಕರಿಗೆ ಗೊತ್ತಾಯಿತು ಎಂಬಂತೆ ಹೇಳಿದರು, "ವಿಮಾನದ ಟಿಕೇಟು ಹಾಗೂ ಡೈಲಿ ಅಲೋಯನ್ಸ್ ಕೊಡುತ್ತೇನೆ."

"ಅದರ ಜೊತೆಗೆ ಒಂದು ವಾರದ ರಜೆಯನ್ನು ಸಹ ಕೊಡಿ; ಹೋಗಿದ್ದಕ್ಕೆ ದಿಲ್ಲಿ ನೋಡಿ ಬರುತ್ತೇನೆ!"

ನಾನಿದನ್ನು ಹೇಗೆ ಸಹಜವಾಗಿ ಹೇಳಿದೆನೋ, ದೇವರಿಗೆ ಗೊತ್ತು ಅವರು ಧೂರ್ತತನದಿಂದ ಹೇಳಿದರು, "ಆದರೆ ಆ ವಾರದ ಖರ್ಚು ಮಾತ್ರ ಕೊಡುವದಿಲ್ಲ!"



ನಾನು ಒಪ್ಪಿಕೊಂಡೆ. ಅಂದರೆ ಕನಿಷ್ಠ ಹದಿನೈದು ದಿನಗಳು! ಅವನಿಗೆ ತಂತಿ ಕಳಿಸಿದೆ. ಧನೂನ ಆಫೀಸಿಗೂ ಫೋನು ಮಾಡಿದೆ. ಕೈಗೆ ಸಿಕ್ಕ ಬಟ್ಟೆಯನ್ನು ಬ್ಯಾಗಿಗೆ ತುರುಕಿದೆ. ಯಾರದ್ದೋ ಕ್ಯಾನ್ಸಲ್ಲಾದ ವಿಮಾನ ಟಿಕೇಟು ಸಿಕ್ಕಿತು, ಅದನ್ನೇ ತೆಗೆದುಕೊಂಡು ದಿಲ್ಲಿಗೆ ಹಾರಿದೆ.

ಆ ಬಳಿಕ ಅಲ್ಲಿ ನಡೆದದ್ದೆಲ್ಲ, ಎಲ್ಲರಿಗೂ ಗೊತ್ತಿರುವಂತಹದೇ ಅಥವಾ ಯಾರಿಗೆ ಗೊತ್ತಿಲ್ಲವೋ ಅವರಿಗೆ ಹೇಳಿದರೂ ಅರ್ಥ ವಾಗುವದಿಲ್ಲ....

ಪ್ಲಾನಿಂಗ್ ಕಮಿಶನ್ನಿನ ಉಪಾಧ್ಯಕ್ಷ, ಒಳ್ಳೆ ವಿದ್ವಾಂಸ, ತೀಕ್ಷ್ಣ ಬುದ್ಧಿವಂತ, ಎತ್ತರ ಮನುಷ್ಯ, ಕಂಚಿನ ಕಂಠ, ಉಗ್ರಮುಖ, ತೇಜ ಎಷ್ಟಿತ್ತೆಂದರೆ, -ಅವನೊಂದಿಗೆ ಮಾತಿಗಿಳಿದಾಗ ಅದು ವಾದವಾಗಿ ರೂಪಾಂತರಗೊಳ್ಳುತ್ತಿತ್ತು. ಅವರು ನೀಡಿದ ಒಂದೆರಡು ಗಂಟೆ ಯಾವಾಗಲೋ ಮುಗಿದುಹೋಗಿತ್ತು. ಅವರು ಏನೇನೋ ಹೇಳುತ್ತಲೇ ಇದ್ದರು. ಅವರ ಸೆಕ್ರೆಟರಿ ಬಂದು ಮುಂದಿನ ಕಾರ್ಯಕ್ರಮದ ನೆನಪು ಮಾಡಿಕೊಟ್ಟಾಗ, ನಸುನಕ್ಕು ಮುಗಿಸುತ್ತಿದ್ದರು.

ಆ ಬಳಿಕ ನಾನು ಧಾವಿಸಿ ಅವನ ಮನೆಗೆ ಹೋಗುತ್ತಿದ್ದೆ, ಕೊರಳಿಗೆ ಜೋತು ಬೀಳುತ್ತಿದ್ದೆ... ಉಪಾಧ್ಯಕ್ಷರ ಸಂಪೂರ್ಣ ಸಂದರ್ಶನ ಮುಗಿಸಿದಾಗ ನಾಲ್ಕೈದು ದಿನ ಕಳೆದಿತ್ತು. ನಾಲ್ಕೈದು ಕೆಸೆಟ್ ಟೇಪ್ ಮಾಡಿಕೊಳ್ಳಲಾಗಿತ್ತು. ಈಗ ನನ್ನ ರಜೆಯ ಒಂದು ವಾರ ಮಾತ್ರ ಉಳಿದಿತ್ತು. ಅವನು ಹೇಳಿದ, ''ದಿಲ್ಲಿ ಸಾಕು! ಈಗ ನಾವಿಬ್ಬರೇ ದೂರ ಎಲ್ಲಾದರೂ ಹೋಗೋಣ!'' ನಾವು ರಾಣಿಖೇತಿನ ಕ್ಲಬ್ಬಿಗೆ ಹೋದೆವು. ನಮ್ಮ ಹೊರತು ಅಲ್ಲಿ ಯಾರೂ ಇರಲಿಲ್ಲ. ಆಫ್-ಸೀಜನ್. ಬ್ಯಾಗು ಕೋಣೆಯಲ್ಲಿ ಒಗೆದು ಕೈ-ಕೈ ಹಿಡಿದು (ಕೊರಳಲ್ಲಿ ಕೊರಳು ಅನ್ನಿ!) ತಿರುಗಾಡಲು ಹೊರಟೆವು. ಆಯಾಸಗೊಂಡು, ಊಟ ಮುಗಿಸಿ, ತಬ್ಬಿಕೊಂಡು ಮಲಗಿದೆವು. ಎದ್ದು, ಹೊಟ್ಟೆ ತುಂಬ ಪ್ರೀತಿಸಿ, ತಿರುಗಾಡಲು ಹೋದೆವು. ಸೂರ್ಯಾಸ್ತದ ಕಾಲಕ್ಕೆ ಮರಳಿ ಬಂದು ವರಾಂಡದಲ್ಲಿ ಕುಳಿತೆವು.

ಎಲ್ಲವೂ ಶಾಂತ, ಮಂದವಾಗಿತ್ತು. ಸಂಜೆ ಪ್ರಕಾಶ ಪೂರ್ಣ ಮಾಯವಾಗಿರಲಿಲ್ಲ. ಸ್ವಲ್ಪ ಮಂಜು ಮುಸುಕತೊಡಗಿತ್ತು. ಬೆತ್ತದ ಕುರ್ಚಿಯಲ್ಲಿ, ನಾವು ಒಂದು ಶಬ್ದವೂ ಮಾತಾಡದೆ, ಕಣ-ಕಣವೂ ಆಯಾಸಗೊಂಡು, ಸಂತೃಪ್ತಗೊಂಡು, ಮೌನವಾಗಿ ಒರಗಿಕೊಂಡಿದ್ದೆವು. ರಾತ್ರಿ ಕೀಟಗಳು ಇನ್ನೂ ಕೂಗಲು ಆರಂಭಿಸಿರಲಿಲ್ಲ. ಬೇರರ್ ತಂದಿಟ್ಟ ಬಾಟಲಿಯಲ್ಲಿ ಉಳಿದರ್ಧ ಸೋಡಾದ ನೊರೆ ಇನ್ನೂ ಫಸ್ ಫಸ್ ಎನ್ನುತ್ತಲೇ ಇತ್ತು. ಅದರ ನೊರೆಯ ಗುಳ್ಳೆಗಳ ಸದ್ದು ಕಿವಿಗೆ ಕೇಳಿಸುವಷ್ಟು ಮೌನ ಪಸರಿಸಿತ್ತು. ಕೈಲಿದ್ದ ಗ್ಲಾಸು ಟೇಬಲ್ ಮೇಲಿಡುತ್ತ, ಗುಂಗಿನಲ್ಲೇ ನಾನೆದ್ದು ನಿಂತೆ. ಒಳಗೆ ಹೋಗುವಾಗ, ಅವನ ತಲೆಗೂದಲ ಮೇಲೆ ಕೈಯಾಡಿಸಿದೆ. ಆಗವನು ಕೈ ಹಿಡಿದು, ಅದಕ್ಕೆ ಗಲ್ಲ, ಮೀಸೆ ತಿಕ್ಕುತ್ತ, ಆಲಸ್ಯದ ಧ್ವನಿಯಲ್ಲಿ ಕೇಳಿದ ''ಏನೋ, ಎಲ್ಲಿಗೆ ಹೊರಟೆ?'', ನಾನು ಸಿಲುಕಿಗೊಂಡ ಧ್ವನಿಯಲ್ಲಿ ಹೇಳಿದೆ, ''ಸಾಕಷ್ಟು ಸಮಯವಿದೆ - ಸ್ವಲ್ಪ ಶಾಂತವಾಗಿ ಕೂತು ಕೆಸೆಟ್ ಕೇಳುತ್ತೇನೆ!''

ಅವನು ಸರ್ರನೆ ಕುರ್ಚಿಯನ್ನು ಹಿಂದಕ್ಕೆ ಸರಿಸಿ, ಆಘಾತಗೊಂಡವರಂತೆ ಎದ್ದು ನಿಂತ. ನನ್ನ ಹಿಡಿದ ಕೈಯನ್ನು ಬಿಡುವದನ್ನೂ ಮರೆತು ಚಕಿತನಾಗಿ ನನ್ನನ್ನೇ ದಿಟ್ಟಿಸಲಾರಂಭಿಸಿದ. ಆ ಬಳಿಕ ಅವನು ಕ್ರಮೇಣ ನಗಲಾರಂಭಿಸಿದ. ನಾನು ಹತಾಶಳಾಗಿ ಅವನ ನಗುವನ್ನೇ ನೋಡುತ್ತ ನಿಂತೆ.



ಸಿಂಧು ಹೆಗಡೆ



# ನನ್ನ ನಗು

ನಾನು ಬಹಳ ನಗುತ್ತೇನಂತೆ
ಬಹಳ ಜನರ ಮಾತು ಇದು
ಬಸ್ ಕಂಡಕ್ಟರ್ ಹೋಟೆಲ್ ಮಾಣಿ
ಮ್ಯಾನೇಜರ್‌ಗಳು ಹಸನ್ಮುಖಿ ಸೇವೆಗೆ
ಎಕ್ಸ್‌ಟ್ರಾ ಚಾರ್ಜ್ ಇಟ್ಟಿರುವಾಗ
ನನ್ನ ನಗು ಏಕೆ ಕಹಿ ಇವರಿಗೆ?
ಹಾಗೆ ನೋಡಿದರೆ ನನ್ನ ಹಲ್ಲುಗಳೂ
ಚೆನ್ನಾಗಿವೆ
ಶುದ್ಧ 'ಒಳನಗೆ' ನನ್ನದು
ಸುಣ್ಣವನ್ನೇ ಬಣ್ಣವೆಂದುಕೊಂಡವರಿಗೇನು
ಗೊತ್ತು
ಬರಿದೇ ಕುಹಕವಾಡುತ್ತಾರೆ
ಬಹಳ ನಗುತ್ತೇನೆಂದು
ನಗುವಾಗಲೆಲ್ಲಾ ಕಣ್ಣು ಮುಚ್ಚುವ
ನಾನು, ಕಿವಿ ಮುಚ್ಚಿಕೊಳ್ಳುವ
ಸೌಲಭ್ಯ ಏಕಿಲ್ಲ ಎಂದು
ಯೋಚಿಸಿದ್ದೂ ಇದೆ
ಇನ್ನು 'ಕದ್ದು' ನಗುವ ಪರಿಸ್ಥಿತಿ
ಬಂದರೂ ಬಂತು
ಕದ್ದು ನೋಡುವವರಿಲ್ಲದಿದ್ದರೆ

# ನಗುತ್ತೇನೆ ಮರೆಯಲ್ಲಿ

ನಗುತ್ತೇನೆ ಮರೆಯಲ್ಲಿ
ಪರದೆಯ ಹಿಂದೆ
ಅಪೂರ್ಣ ನಗು

ಅಲ್ಲಲ್ಲಿ ಇಣುಕಿ ಮುಖ ತೋರಿ
ಮರೆಯಾಗಿ ಹೋಗುತ್ತದೆ
ಮಿಂಚಿನ ಹಾಗೆ
ಅರ್ಧಚಂದ್ರನ ಬಿಂಬದಂತೆ
ಕಂಡೂ ಕಾಣುವುದಿಲ್ಲ
ನನ್ನ ಪೂರ್ಣನಗು

ಬೇಲಿಯಂತೆ ಪರದೆಯಿದೆ
ನನ್ನ ನಗುವಿಗೆ
ಹಿಂಜರಿಕೆ ಎನಗೆ
ಪರದೆ ಸರಿಸಲು
ನಗುವೆಲ್ಲಿ ಜಿಗಿದು
ದೂರ ಹೋದೀತೋ
ಎಂಬ ಭಯ ಬೇರೆ
ನಗುತ್ತೇನೆ ಮರೆಯಲ್ಲಿ
ಪರದೆಯ ಹಿಂದೆ



# ಬಣ್ಣಗೇಡು

ಎಲ್ಲರ ಹಲ್ಲಲ್ಲೂ ಹುಳುಕಿದೆ
ಕೆಲವರಿಗೆ ಎದುರಲ್ಲಿ
ಕೆಲವರಿಗೆ ಬದಿಯಲ್ಲಿ
ನನಗೋ ದವಡೆಯಲ್ಲಿ
ಕಾಣುವುದಿಲ್ಲ ಸುಲಭದಲ್ಲಿ
ಹುಡುಕಲು ಹೋದಿರೋ
ಸಿಗುತ್ತದೆ ಸಿಮೆಂಟ್ ಬೆಳ್ಳಿ
ಪುಣ್ಯ! ಕೋಲಾರದ ಗಣಿಯೊಂದಿಲ್ಲ
ಸುಪ್ತವಾಗಿವೆ ಹುಳುಕು
ಗರಿಗೆದರಬಹುದು, ನೋವಿನೊಂದಿಗೆ.
ಹುಳುಕೇ ಹಾಗೇ
ಸದ್ದಿಲ್ಲದೆ ಎದ್ದುಬಿಡುತ್ತದೆ
ಬೇಡ ಎಂದರೂ ಬಣ್ಣಗೆಡಿಸಿಬಿಡುತ್ತದೆ



# ಹೆಜ್ಜೆ

ಅಂದಿನಷ್ಟು ನನ್ನ ಹೆಜ್ಜೆ ಚುರುಕಾಗಿಲ್ಲ ಇಂದು
ಬಹುಶಃ ಕಾಲುಂಗುರಗಳು ಕಚ್ಚುತ್ತಿರಬೇಕು.

ನಿನ್ನೆಯಷ್ಟು ನನ್ನ ಕೈ ಗೀಟುವುದಿಲ್ಲ ಇಂದು.
ಗಾಜಿನಬಳೆಗಳ 'ಕಿರಿಕಿರಿ' ಹೆಚ್ಚಾಗಿರಬೇಕು.

ಕುತ್ತಿಗೆ ಅಂದಿನಷ್ಟು ನೆಟ್ಟಗೆ ದಿಟ್ಟವಾಗಿಲ್ಲವಲ್ಲಾ?
ಕರಿಮಣಿಗಳ ವಜ್ಜೆಗಲ್ಲವಷ್ಟೆ!
ನನಗೇ ಅನುಮಾನ ನನ್ನ ಮೇಲೆ.

ಸೆರಗು ಸಮಜಾಯಿಷಿ ಹೇಳುತ್ತಿದೆ-
    ನಿನ್ನ ವೇಲ್ ಅಲ್ಲ ನಾನು
    ಸ್ವಚ್ಛಂದವಾಗಿ ಹಾರಾಡಲು.
    ಪಿನ್ ಉಂಟು ಕಣೇ ಬುಡದಲ್ಲಿ

ತಾಳಿ ನಕ್ಕು ಉಲಿಯುತ್ತಿದೆ-
    ನಿನ್ನ ನಕಲಿ ಲಾಕೆಟ್ ಅಲ್ಲ ನಾನು
    ಎಲ್ಲೆಂದರಲ್ಲಿ ಮರುಳಾಗಲು
    ತೂಕವುಂಟು ಕಣೇ ಚಿನ್ನದಲ್ಲಿ

ಅಷ್ಟರಲ್ಲೇ ದನಿಗೂಡಿಸುತ್ತಿದೆ.
ಅರಿಶಿನ ಸಿಂಧೂರ-
    ನಿನ್ನ ಟಿಕಲಿಯ ಹಾಗೆ
    ಉದುರಿಹೋಗುವುದಿಲ್ಲ ಒಂದೇ ದಿನಕ್ಕೆ
    ತೊಳೆದುಕೊಂಡರೂ ಕಲೆ ಉಳಿಸಿಬಿಡುತ್ತೇವೆ.





ಜಿ.ಎಸ್. ಅವಧಾನಿ



ಈಚೆಗಷ್ಟೆ ತೀರಿಕೊಂಡ ಕವಿ ಜಿ.ಎಸ್. ಅವಧಾನಿ ಅವರ ಎರಡು ಅಪ್ರಕಟಿತ ಕವನಗಳು.

# ಪರೀಕ್ಷೆಯ ಕೋಣೆಯಲ್ಲಿ

ಹಿಂದಕ್ಕೂ ಮುಂದಕ್ಕೂ
ಉದ್ದಕ್ಕೂ ಅಗಲಕ್ಕೂ
ಸಾಲಾಗಿ ಕುಳಿತ ಬೆಳ್ಳಕ್ಕಿಗಳು
ನಡುನಡುವೆ ಕಂದು ಬೂದು
ಪಾರಿವಾಳಗಳು; ಅಲ್ಲಲ್ಲಿ
ಗಿಳಿ, ಗುಬ್ಬಕ್ಕಿ, ಹುರ್ಲಾಸಕ್ಕಿ
ಅಚ್ಚೊತ್ತಿದಂತೆ ನಕ್ಷತ್ರ ನೀಹಾರಿಕೆ
ನೂರಾರು ಕಣ್ಣ ತುಂಬುತ್ತದೆ
ತರ ತರೇವಾರಿ ಬಣ್ಣಕ್ಕೆ
ಗರಿಗೆದರಿದ ವಿನ್ಯಾಸಕ್ಕೆ

ಇವು ಕಿಲಕಿಲ ಮುತ್ತನುದುರಿಸುವುದಿಲ್ಲ
ಗೆಜ್ಜೆ ಉಲಿಯುವುದಿಲ್ಲ; ಅನಂತದಾಕಾಶಕ್ಕೆ
ನಾರಿಕೇಳ ತೊನೆಯುವುದಿಲ್ಲ
ಕೆತ್ತಿಟ್ಟ ಮೌನ ಚಲಿಸುವುದಿಲ್ಲ

ಸರಿಯುತ್ತವೆ ಬೆರಳುಗಳು
ಮೂಡುತ್ತವೆ ಮೊಳಕೆಗಳು
ಮೊಟ ಮಾಯಕ ದಿವ್ಯ
ಸುತ್ತ ಸುಳಿವ ಚಂದನ ಗಂಧ
ಅಕ್ಷತದನನ್ಯ ನಾಳೆಗಳ
ಹಿಡಿಹಿಡಿದು ಇಡುವ ಭಂಗಿ
ತೊಟ್ಟು ಮೈತುಂಬ ಕನಸುಗಳ ಅಂಗಿ
ಗಡಿಯಾರದಲ್ಲಿ ಮುಳ್ಳುಗಳು
ಆಕಾಶದಲ್ಲಿ ಹಕ್ಕಿ.



# ವಿಲಂಬಿತ

ಅವಳು ಕಾಯುತ್ತಾಳೆ
ಹೊಕ್ಕಳ ಹೂವಲ್ಲರಳುವ
ನಾದದ ಕಂಪ
ನವ ಆಲಿಸುವುದಕ್ಕೆ

ತಲ್ಲಣದ ಎಳೆಎಳೆಯ
ಹಿಡಿದು ಕೌದಿಯ ಹೆಣೆದು
ಬೆಚ್ಚಗೆ ಹೊದೆಸಿ ಸಂಭ್ರಮಿಸು

ದಳದಳದ ಮಂಜುಹನಿ
ಗಳ ಹೆಕ್ಕಿ ಎದೆಯ
ಚಿಪ್ಪೊಳಗಿಟ್ಟು ಮುತ್ತಾಗಿಸುವ

ಕಪ್ಪಾನೆ ಕಪ್ಪು ಕಣಿವೆಯ
ಮೌನದಾಳದ ಮಾತನೆತ್ತಿ
ಮಡಿಲಲ್ಲಿಟ್ಟು ಧೇನಿಸುವ
ಮುಹೂರ್ತಕ್ಕೆ

ಅಂಗಳದ ಗಿಣಿಮೂತಿ
ಮಾವಿನ ಗಿಡದ
ಗೀಜಗದ ಗೂಡು
ಮೆಲ್ಲಮೆಲ್ಲಗೆ ಚಲಿಸಿತು

ಜೀವಕೋಶದೊಳಗಿಂದ
ವಿಲಂಬಿತದ ಆಲಾಪ

## ಊರಾದ ದೇಶ

ಕೂಲಿಗೆ ಜ್ಞಾನಿಗೆ ಪಕ್ಷಿಗೆ ಜಿಪ್ಸಿಗೆ
ಹರಿಯುವ ನೀರಿಗೆ ಮುಗಿಲಿಗೆ ತೆವಲಿಗೆ
ದನಗಳ ಮೇವಿಗೆ ಕವಿಗಳ ಊಹೆಗೆ
ಬಿಸಿಲಿನ ಇಲ್ಲಿಗೆ, ತಂಪಿನ ಅಲ್ಲಿಗೆ
ಕಂಡೂ ಕಾಣದ ಊರಿರಬೇಕು
ನೋಡಿ ಮುಗಿಯದ ದೇಶವು ಬೇಕು

ಡೊಂಬಗೆ ಡ್ಯಾಂಡಿಗೆ ಚೆಂಡಿನ ಹುಚ್ಚಗೆ
ಕಾಮಿಯ ತೀಟೆಗೆ ಸಂತನ ಕಾಣ್ಕೆಗೆ
ಸಕಾಲ ಋತುವಿಗೆ ತತ್ವರ ಬಂಡೆಗೆ
ಮುಗ್ಧನ ಕನಸಿಗೆ ಧೀರನ ನಿಲುವಿಗೆ
ಕಂಡೂ ಕಾಣದ ಊರಿರಬೇಕು
ನೋಡಿ ಮುಗಿಯದ ದೇಶವು ಬೇಕು



ಯು.ಆರ್. ಅನಂತಮೂರ್ತಿ

## ಊರು-ದೇಶ

ಸತ್ತು ಬದುಕಿ ಊರು
ಸೋತು ಗೆದ್ದು ದೇಶ

ಒಳದಾರಿ ತುಳಿದು ಊರು
ಹೆದ್ದಾರಿ ತಿಳಿದು ದೇಶ

ಗೊತ್ತಾಗಿ ಇರೋದು ಊರು
ಗುರಿಯಾಗಿ ಉಳಿಯೋದು ದೇಶ

ಎಣ್ಣೆ ಊರು; ಎಣಿಸಿ ದೇಶ
ಹರಟಿ ಊರು; ಸ್ತುತಿಸಿ ದೇಶ

ಒಂದು ಮಮತೆಗೆ
ಇನ್ನೊಂದು ಘನತೆಗೆ

ಬದುಕಿದ್ದು ಊರು
ಭಾವಿಸಿದ್ದು ದೇಶ

ಒಂದು ಕಥೆ
ಇನ್ನೊಂದು ಇತಿಹಾಸ




## ಊರಿಲ್ಲದ ದೇಶ

ಊರಿಗೊಂದು ದೇಶವಾಗಿ
ದೇಶಕ್ಕೊಬ್ಬ ರಾಜನಾಗಿ
ಊರೇ ಇಲ್ಲದ ದೇಶಗಳಲ್ಲಿ
ಮಲಗೋದು ಇಲ್ಲಿ
ಏಳೋದು ಅಲ್ಲಿ

ದೇಶಕ್ಕೊಂದು ಬಾವುಟವಾಗಿ
ಬಾವುಟಕ್ಕೊಂದು ಚರಿತ್ರೆಯಾಗಿ
ನೆನಪೇ ಉಳಿಯದ ದೇಶಗಳಲ್ಲಿ
ಅಣ್ಣ ಸ್ವದೇಶಿ
ತಮ್ಮ ವಿದೇಶಿ







ಪಿ. ಮಂಜುನಾಥ್

# ಒಂದು ಸಣ್ಣ ಕಾರಣ

ದಾರಿಯಲ್ಲಿ
ನಿನ್ನೆಯೇ ಕೇಳಿದ್ದ
ಜೀರುಂಡೆ ನಾದ ಇಂದು ಕೇಳುತ್ತಿದೆ
ಹಳಸಲು-ಅಲ್ಲ
ಆಗ ತಾನೆ ಹುಟ್ಟಿದ್ದು
ಆ ನಾದದಷ್ಟೂ ಇರದ
ಜೀರುಂಡೆ ಕೊರಳಿಂದ ಹಬ್ಬಿದ್ದು!

ಜೀರುಂಡೆ
ಆ ನಾದದ ಗಾತ್ರವ, ತೂಕವ, ಎತ್ತರವ, ಉದ್ದವ
ಲೆಕ್ಕವಿಕ್ಕದೆ
ನಿತ್ಯವೂ ಹಬ್ಬಿಸುತ್ತಿದೆ
'ಇದು ಹೊಸದು' ಎಂಬ ಗೋಜು ಗೊಂದಲವಿಲ್ಲದೆ

ನಿತ್ಯ ನಡೆವ ದಾರಿಯಲ್ಲಿನ
ಆ ಜೀರುಂಡೆ ನಾದ
ನಿನ್ನೆಯದೂ ಅಲ್ಲದ
ಇಂದಿನದೂ ಅಲ್ಲದ ನಾದವಷ್ಟೆ ಹೇಗೋ
-ಹಾಗೆ
ಹೋಗಿ ಬರುವವರಿಗೆ ಒಂದು
ಸಣ್ಣ ಹೊಸ ಕಾರಣ



# ಪ್ರೀತಿಯ ಜೊಲ್ಲು

ಒಂದು ದಿನದಾಗೆ
ಬಸವನ ಹುಳು
ಎಷ್ಟು ಪಯಣಿಸುತ್ತೆ?
ಅದು ದೇವರ ಪಾದ ಮುಟ್ಟೋದು ದಿಟವೆ?

ಅದರ ಮೈಯಾಗೆ
ಮೆತ್ತಿರೊ ಜೊಲ್ಲು
ಅದು ಪ್ರೀತಿಯೇನು?

ಯಾಕೆ ಹಾಗೆ ಭೂಮಿಗೆ ಪ್ರೀತಿ ಮೆತ್ತುತ್ತಾ
ಮೈ ಮರೆತು
ಟ್ರಕ್ಕಿನಡಿ ಅಪ್ಪಚ್ಚಿಯಾಗುತ್ತೆ?!

ಭೂಮಿಗೆ ಪ್ರೀತಿ ಅಂದರೆ
ಅಷ್ಟು ತಾತ್ಸಾರವೇನು



## ಹೋರಿ ಆಟ

ತಂಗ್ಬೆ ಗಿಡದ ಕಡ್ಡಿಗಳು
ನನ್ನ ತೋರ ಬೆರಳ ಸಂದಿಯಲ್ಲಿ
ಬೀಜದ ಹೋರಿಗಳು!

ಹೋರಿಯೆಂದ ಮೇಲೆ ಉಳಲು ಹೊಲ
ಅವು ಕುಡಿಯುವ ನೀರಿಗೊಂದು ಹೊಂಡ
ಅವೇ ಸಂಭ್ರಮಿಸಲು ಒಂದು ದೀವಣಿಗೆ ಹಬ್ಬ!

ಅಪ್ಪ ಉಳುತ್ತಾ ಅಮ್ಮ ಗರುಕೆ ಆಯುತ್ತ
ನನ್ನ ನೆರಳಲ್ಲಿ ಕೂರಿಸಿದ್ದರೆ
ಅವರಂತೆ ನಾನೂ ಎಲ್ಲಾ!

ಅಂದರೆ
ನನ್ನೊಂದು ಹೊಲ, ಹೋರಿ, ಹೊಂಡ, ಹಬ್ಬ
ಬೆಣಚುಕಲ್ಲಿನ ನನ್ನ ಹೆಂಡತಿ ಕೂಡ
ಬುತ್ತಿ ತರುತ್ತಾಳೆ ಇಲ್ಲ ಗರುಕೆ ಆಯುತ್ತಾಳೆ
ನೇಗಿಲ ಹಿಂದಿನ ಅಮ್ಮನಂತೆ

ನನ್ನ ಪುಟ್ಟ ಕೈಗಳು ನೀಟಾಗಿ ಕಟ್ಟಿದ ಬದುವಿನಾಚೆ
ಅಪ್ಪನ ಹೊಲ
ಚೌಕಟ್ಟಾಕಿದ್ದ ನನ್ನ ಹೊಲದ
ಸಣ್ಣ-ಸಣ್ಣ ಕರಿಯ ಕಲ್ಲುಗಳು
ಅಪ್ಪನ ಕುರಿಗಳು

ನಾನು ಮಧ್ಯಾಹ್ನದ ಧಗೆಗೆ
ಒಂದು ತುಂಡುನಿದ್ದೆ ಮಾಡಿ ಎದ್ದರೆ
ಕೂಡಿ ಕುಂತಾನೆ ಕುರಿ
ಹೊಲದ ತುಂಬಾ ಅಪ್ಪ!
'ಹೊಡ್ಕಳೋ ಬಡ್ಡಿ ಮಗನೆ' ಕೂಗುತ್ತೇನೆ .

ಅಪ್ಪ-ಅಮ್ಮ ಕೆಲಸ ಬಿಟ್ಟು ನೋಡುತ್ತಾರೆ
ನನ್ನ ಚೇಷ್ಟೆ;

ಅಮ್ಮ ಬಳಿಗೆ ಬಂದು
ನನ್ನ ಮಡಲಿಗೆ ಅವಚಿಕೊಳ್ಳುತ್ತಾಳೆ
ಅಪ್ಪ ತಲೆ ಸವರುತ್ತಾನೆ
ನಾನು ಹೊಟ್ಟೆ ಒಳಗಿದ್ದಾಗ
ಅಮ್ಮನ ಒಡಲು ಸವರಿದಂತೆ

ಅಪ್ಪನಂತೆ ನನಗೂ ಇದ್ದ
ಹೋರಿ, ಹೊಂಡ, ಹೊಲ, ಹಬ್ಬ, ಹೆಂಡತಿ
ಎಲ್ಲ ಮರೆತೆ ಹೋಗುತ್ತೆ
ಎಲ್ಲ ನೆನಪಾಗುತ್ತೆ ಮತ್ತೆ ನಾಳೆಯ ಆಟಕ್ಕೆ



## ಕಂಬಳಿ ಹುಳ

ಕಂಬಳಿಗೂ ಅದರದೇ ಘಾಟು;
ಕಂಬಳಿಹುಳ ಚಿಟ್ಟೆಯಾಗಿ
ಹಾರುವ ಪರಿ
ಕಣ್ಣ ಸಿರಿ!

''ಹಾರುವ ಕಂಬಳಿ''
ಕತೆ ಕೇಳಿ ಬಂದ ರಾತ್ರಿ
ಅಪ್ಪ ಹೊದ್ದಿಸಿದ್ದ ಕಂಬಳಿ
ಹುಳಗಳೇ ಕೌಸಿಕೊಂಡಂತೆ!

ಸರಿದ ಕಾಲದಲ್ಲಿ
ಅಪ್ಪ ಹೊದ್ದಿಸಿದ್ದ ಕಂಬಳಿ ಬಿಟ್ಟು
ಎಲ್ಲೆಲ್ಲಿಗೂ ಹಾರಿದ್ದೇನೆ
ಚಿಟ್ಟೆಯಂತೆ.

ಹೆಂಡತಿಯ ಬಯಕೆ ಪೂರೈಸಲು ಸೌಗಂಧಿಕಾ ಪುಷ್ಪ ಹುಡುಕಿಕೊಂಡು ಹೊರಟಿದ್ದ ಭೀಮ. ಪರಿಮಳ ಬರುವ ದಿಕ್ಕು ಹಿಡಿದು ಮೂಸುತ್ತಾ, ಮೂಸುತ್ತಾ ಹೋಗುವಾಗ ದಾರಿಯಲ್ಲಿ ಮಂಗ ಒಂದು ಅಡ್ಡ ಕೂತಿದೆ.

ಮುದಿ ಹತ್ತಿದ ಮಂಗ. ದಾರಿಗೆ ಅಡ್ಡ ಹಾಕಿದ ಬಾಲ.

'ಎಲೈ ಕಪಿಯೇ, ದಾರಿಬಿಡು, ಏಳು...'

'ಅಯ್ಯಾ, ಮುದುಕ ನಾನು. ಕೂತಲ್ಲಿಂದ ಏಳೋಕಾಗಲ್ಲ'

'ಹೋಗಲಿ, ನಿನ್ನ ಬಾಲ ಸ್ವಲ್ಪ ಬದಿಗೆ ಸರಿಸ್ಕೋ'

'ಇಲ್ಲಪ್ಪಾ, ಅಷ್ಟೂ ಶಕ್ತಿ ಇಲ್ಲ ನಂಗೆ. ನೀನೇ ಬಾಲಾನ ಬದಿಗೆ ಸರಿಸಿ, ಮುಂದೆ ಹೋಗು'

ಭೀಮ ಅಲಕ್ಷ್ಯವಾಗಿ ಗದೆಯಿಂದ ಬಾಲ ದೂಕಿದ. ಹಂದಾಡಲಿಲ್ಲ ಬಾಲ.

ಸ್ವಲ್ಪ ಗಮನಕೊಟ್ಟು ದೂಕಲು ಹೋದ. ಅಲುಗಾಡಲಿಲ್ಲ. ಶಕ್ತಿ ಪ್ರಯೋಗಿಸಿದ. ಊಂಹೂಂ. ಅವಡುಕಚ್ಚಿ ದೂಕಿದ. ಮುಖದಲ್ಲಿ ಬೆವರು ಬಸೀತಾ ಇದ್ರೂ, ಇದ್ದ ಜಾಗದಿಂದ ಬಾಲವನ್ನು ಚೂರೂ ಮುಂದೆ ಸರಿಸಲು ಆಗಲೇ ಇಲ್ಲ. ಭೀಮನ ಗರ್ವಭಂಗ ಆಯ್ತು. ಕಪಿ ಅಂದರೆ ಸಾಮಾನ್ಯ ಅಲ್ಲ. ಸಾಕ್ಷಾತ್ ಶ್ರೀರಾಮಚಂದ್ರನ ಭಂಟ. ಕಾಡು ಬೋಳಾಗುತ್ತಿದ್ದ ಹಾಗೆ, ಊರಿನ ಕಡೆ ಹಿಂಡು ಕಟ್ಟಿಕೊಂಡು ಲಗ್ಗೆ. ಕಣ್ಣಿಗೆ ಕಂಡದ್ದೆಲ್ಲಾ ಸರ್ವನಾಶ ಮಾಡೋ ಮಂಗಬುದ್ಧಿ. ತಿನ್ನೋಕೆ ಬರುತ್ತಾ ಅಂದ್ರೆ ಇಲ್ಲ. ತರಕಾರಿ ಗಿಡಗಳ ಹೂ, ಮಿಡಿ, ಎಲ್ಲಾ ಚೂಟಿ ಚೂಟಿ ಬಿಸಾಕಿ, 'ಅಯ್ಯಯ್ಯೋ, ಎಲ್ಲಾ ಲಗಾಡಿ ತೆಗೆದ್ಬಿಟ್ವಲ್ಲೋ. ಇವ್ ಹಿಂಡು ಹಾಳಾಗ...' ಎಂದು ಅಮ್ಮನ ಬೊಂಬಡಿ. ಅಡಿಕೆ ಕೊನೆಯ ಚಿಗುರುಕಾಯಿ ಕಿತ್ತು ಕಿತ್ತು, ಬಾಯಿಗಿಟ್ಟು ರುಚಿ ನೋಡಿ, ಬಿಸಾಕುತ್ತಿದ್ದರೆ ರಕ್ತ ಕುದಿಯದೆ ಇರುತ್ತಾ? ಕಣ್ಣಿಗೆ ಕಂಡ ಒಂದನ್ನೂ ಉಳಿಸೋ ಪಂಚಾತಿಕೆ ಇಲ್ಲ. 'ಅಶೋಕ ವನ' ಹೊಕ್ಕ ಹನುಮಂತ ಮಾಡಿದ್ದೆಂತದು? ಪ್ಯಾರಲೆ ಕಾಯಿ, ಪನ್ನೇರಲು ಕಾಯಿ ತಿಂದ್ಕೊಂಡು ಹಾಳಾಗ್ಲಿ. ಯಾಲಕ್ಕಿ ಕಿತ್ತು ಜಗಿದರೆ ಹೊಟ್ಟೆ ತುಂಬುತ್ತಾ? ಇಲ್ಲ, ಇವು ನಮ್ಮನ್ನ ಪಾಪರ್ ಮಾಡೋಕೇ ಊರು ನುಗ್ಗಿದಾವೆ. ಕೂಗಿ ಹೆದರಿಸಿದ್ರೆ ತಮ್ಮ ಅಪ್ಪನ ತೋಟ ಅನ್ನೋ ಹಂಗೆ ಹಲ್ಲು ಕಿರಿದು ಹೆದರಿಸೋಕೆ ಬರ್ತಾವಲ್ಲ, ಸೊಕ್ಕು ಎಷ್ಟುಮಟ್ಟಿಗೆ ಇದೆ ಅಂತ? 'ಒಂದು ಕೋವಿ ತಂದಿಟ್ಕಣ್ದಿದ್ರೆ ಉಳಿಗಾಲ ಇಲ್ಲ. ಒಂದಿನ ನಮ್ಮನ್ನೇ ಊರು ಬಿಡಿಸ್ತಾವೆ' ಅಂತ ಬುಡ ಹಾಕಿದ್ದು ಅಪ್ಪ. ಇರ್ಬೇಕಪ್ಪಾ, ಹಳ್ಳಿಮನೆ, ಒಂಟಿ ಮನೆ, ಅಂದ್ಮೇಲೆ ಒಂದು ಕೋವಿ ಇಟ್ಗಂಡಿರ್ಬೇಕು. ಎಲ್ಲಿ ನೋಡಿದ್ರೂ ಢಕಾಯಿತಿ. ಮನೆ ನುಗ್ಗಿದ್ರು, ತಲೆ ಒಡೆದ್ರು, ಇದ್ದಿದ್ದೆಲ್ಲಾ ದೋಚ್ಕಂಡು ಹೋದ್ರು ಹಿಂಗಿದ್ದೇ ಸುದ್ದಿ. ಕಿರೀ ನೋಡುತ್ತಾ, ಗುರಿ ಹಿಡಿದು, 'ಢಾಂ' ಅಂತ ಈಡು ಹೊಡೆಯೋದು ಎಷ್ಟು ಮಜವಾಗಿರುತ್ತೆ. 'ಭುಜಗಳು ಸ್ಫುರಿಸ್ತಾವೆ' ಅಂತ ಪುರಾಣದ ಕತೆಗಳಲ್ಲಿ ಹೇಳೋಹಾಗೆ, ಕೋವಿ ಕೈಲಿ ಹಿಡಿದು ಬೇಟೆ ಆಡುವಾಗ ರೋಮಾಂಚನ ಆಗುತ್ತೇನೋ. ಕೋವಿ ಖರೀದಿಸಿ, ಲೈಸೆನ್ಸ್ ಮಾಡಿಸಿಕೊಂಡು ಮನೆಗೆ ತಂದಾಗ, 'ಬರ್ಲಿ ನಾಳೆ, ಮಂಗಮುಂಡೇವಕ್ಕೆ ಹುಟ್ಟಿದ ಹಬ್ಬ ಮಾಡ್ತೀನಿ' ಎಂದು ಮನಸ್ಸನ್ನೋದು ತಕಪಕ

ಕುಣೀತಿತ್ತು. ರಾತ್ರಿ ನಿದ್ದೇಲೂ ಇದೇ ಕನಸು. 'ಢಾಂ... ಢಾಂ... ಢಾಂ...' ಈಡು ಹೊಡೆದು, ಒಂದೊಂದೇ ಮಂಗಣ್ಣಗಳ ಹೆಣ ಮಲಗಿಸಿ, ಉಳಿದುಕೊಂಡ ಕೆಲವು ಜೀವಭಯದಿಂದ ಕಿರುಚುತ್ತಾ, ಕಾನಿನ ಕಡೆ ಕುಟ್ಟ ಕೀಸುವಾಗ, 'ತಮಾಷೇಂತ ಮಾಡಿದ್ರಿ ಅಲ್ವಾ? ಇನ್ನು ಬರ್ತೀರಾ ಈ ಕಡೆ? ಚಿಗುರು ಕಾಯಿ ಕಿತ್ತು ಹಣೇತೀರಾ? ತರ್ಕಾರಿ ಮಡಿ ನಾಶ ಮಾಡ್ತೀರಾ? ಎಲಕ್ಕಿ ಗೊಂಚಲಿಗೆ ಕೈಹಾಕ್ತೀರಾ?' ಎನ್ನುತ್ತಾ, ಥೇಟ್ ಭೀಮಸೇನ ಗದೆಯನ್ನೆತ್ತಿ ಹೆಗಲ ಮೇಲಿಟ್ಟು ಕೊಂಡಂತೆ, ಕೋವಿಯನ್ನು ಹೆಗಲ ಮೇಲಿಟ್ಟು ಕೊಂಡು, ಅಟ್ಟಹಾಸ ಮಾಡಿ... ಬೆಳಗಾಗುವವರೆಗೆ ತಿರುಗಾಮುರುಗಾ ಇಂತದೇ ಕನಸುಗಳು. ಹಾಳು ಕಪಿಗಳ ಬಗ್ಗೆ ಮನಸ್ಸೊಳಗ ಎಷ್ಟೊಂದು ವೈರತ್ವ ಇದೆ ಅನಿಸಿ ಆಶ್ಚರ್ಯ ಆಗಿತ್ತು. ಯಾಕಿರಬಾರದು? ಸುಕಾಸುಮ್ಮ ನಮ್ಮ ತೋಟಿಗೆ ಯಾಕೆ ಬರ್ಬೇಕಪ್ಪಾ? ಬೇಕಾದ್ದು, ಬೇಡಾ ದ್ದೆಲ್ಲಾ ನಾಶನ ಮಾಡಿ ಹೊಟ್ಟೆ ಉರಿಸ್ಬೇಕಪ್ಪಾ?

ಒಗ್ಗರಣೆ ಅವಲಕ್ಕಿ ತಿನ್ನುವಾಗ ಅಮ್ಮ ಹೇಳಿದ್ದಳು. 'ಕೊಲ್ಬೇಡ ಮತ್ತೆ, ಮಂಗನ್ನ ಕೊಲ್ಬಾರ್ದು ಅಂತಾರೆ. ಎರಡು ಈಡು ಹೊಡ್ದು ಹೆದ್ರಿಸು, ಸಾಕು...'

ಹೂಂಗುಟ್ಟಿದ್ದು ಹೌದು. ಕೊಲ್ಲಲೇ ಬೇಕೂಂತ ಮನಸ್ಸಿನಲ್ಲಿ ನಿಶ್ಚಯ ಮಾಡಿರಲೂ ಇಲ್ಲ. ಇಷ್ಟಕ್ಕೂ ಗುರಿ ಇಟ್ಟು ಹೊಡೆಯೋಕೆ ಗೊತ್ತಿದ್ದಿದ್ದರೆ ತಾನೇ? ಕೋವಿ ಅಂದ್ರ, ಹೆದರಿಸೋಕೆ ಒಂದು ಆಯುಧ. ಗುರಿ ಹಿಡಿದರೆ ಸಾಕು, ಎದುರಿದ್ದ ಎಂತವನಿಗೂ ಎದೆ ನಡುಗ ಬೇಕು. ಅದು ಯಾವ ದಿಕ್ಕಿನಿಂದ ವರ್ತಮಾನ ಹೋಗಿಮುಟ್ಟಿತ್ತೋ, ಒಂದರ ಮುಸುಡಾದರೂ ಅವತ್ತು ಕಣ್ಣಿಗ ಬಿತ್ತೇ? ಕೋವಿ ಹಿಡಿದು, ವೀರಯೋಧನಂತೆ ಎದೆ ಮುಂದು ಮಾಡಿ ಕೊಂಡು ಅಲ್ಲಾಯಿಸಿದ್ದೇ ಬಂತು. ಇವತ್ತಲ್ಲಾ ನಾಳೆ ಬರದೇ ಇರುತ್ತಾವಾ? ಬರಲಿ, ಗತಿ ಕಾಣಿಸ್ತೀನಿ. ಸ್ಫುರಿಸುತ್ತಿದ್ದ ಭುಜಕ್ಕೆ ಅಸಮಾಧಾನ. ಒಂದು, ಎರಡು, ಮೂರು, ಇಡೀ ಮೂರು ದಿನ ಅವು ರಾಷ್ಟದಲ್ಲಿ ಪತ್ತೆ ಇಲ್ಲ. ಇನ್ಯಾವ ಪಾಪಿಗೆ ಗ್ರಾಚಾರ ಕೆಟ್ಟಿತ್ತೋ, ಎಲ್ಲಿ, ಏನು, ಧ್ವಂಸ ಮಾಡಲು ಸೇನೆ ಸಮೇತ ಹೋಗಿದ್ದುವೋ? ನಾಲ್ಕನೇ ದಿನ ಹಳೇ ಜಾಡು ಹಿಡಿದು ಬಂದೇಬಂದುವು. ಕೊಬ್ಬಿದ ಗಡವಗಳು, ಮರಿ ಅವಚಿಕಂಡ ಹೆಣ್ಣುಗಳು, ಕಾನಿನ ಕಡೆಯಿಂದ ಒಂದು, ತೋಟ ಇಳಿದು, ಮರ ಏರಿ,

'ಏ,ಏ,ಏ, ಎಲ್ಲಿದ್ದೀಯೋ? ಮಂಗನ ಹಿಂಡು ತೋಟ ಹೊಕ್ಕಿದಾವೆ. ಕೋವಿ ತಗಂಡು ಜಲ್ದಿ ಬಾ...'

ಹಂಬೆ, ಹೊಂಬಾಳೆ, ಹೆರಕುವುದಕ್ಕೆ ಅಪ್ಪ ತೋಟ ಇಳಿದಿದ್ದ. ಅಷ್ಟು ದೂರದಿಂದ ಅವನ ಕೂಗು ಕೇಳಿಸಿದ್ದೇ, ಕುಡಿಯುತ್ತಿದ್ದ ಕಾಫಿ ನೆತ್ತಿಗೆ ಹತ್ತಿ, ತೆರು ಹೋಗಿ, ಎಡಗೈಯಿಂದ ನೆತ್ತಿಯ ಮೇಲೆ ತಟ್ಟಿಕೊಳ್ಳುತ್ತಾ, ಉತ್ಸಾಹದಿಂದ ಜೋರಾಗಿ ಬಡಿದುಕೊಳ್ಳುತ್ತಿದ್ದ ಎದೆಗುಂಡಿಗೆ ಯೊಂದಿಗೆ ಕೋವಿ ಹೊತ್ತು, ತೋಟದ ತಗ್ಗಿನಲ್ಲಿ ಇಳಿದು... ಚರೆ ತುಂಬಿಸಿ ಸಿದ್ಧ ಮಾಡಿಟ್ಟಿದ್ದ ಕೋವಿ, ಜೀಂವ ತೆಗಯದಿದ್ದರೂ ಕೈಕಾಲಿಗೆ ಹೊಡೆದು ಊನ ಮಾಡಿಬಿಡಬೇಕು. ಮತ್ತೆ ಈ ಕಡೆ ಮಕ ಹಾಕಬಾರದು. ನಿರ್ಭಯವಾಗಿ ಅಡಿಕೆ ಮರ ಏರಿ ಕೂತಿತ್ತು ಗಡವ. ಕೋವಿಯ ಗುರಿ ಹಿಡಿದರೆ, ಅಷ್ಟೆತ್ತರದಲ್ಲಿ ಕೂತು, ಕೆಳಗೆ ಮಕ ಮಾಡಿ ಹಲ್ಲುಬಿಲಿದು ಹೆದರಿಸುತ್ತೆ. ಭಾರಕ್ಕೆ ಒಂದು ಕಡೆ ವಾಲಿದ್ದ ಅಡಿಕ ಮರದ ಚಂಡೆ. ಜೊತೆಗೆ ಇದರ ಕೋತಿಯಾಟ. ಕೂತಲ್ಲಿ ಸುಮ್ಮನೆ ಕೂತಿರುತ್ತಾ? ಬಡವಾ, ಗಥವಾ, ಹೆದರಿಸ್ತಿದೀಯಾ? ಕೋವಿಯ ತುದಿ ಕಂಡರೂ ಅಂಜಿಕೆ ಅಂಬುದಿಲ್ಲ. ಏನೋ ಆಟ ಆಡುತ್ತಿದ್ದಾನೆ ಅನ್ನಿಸಿರಬೇಕು. ಕೈಗೆ ಸಿಗದ ಹಾಗೆ ಮೇಲೆ ಮೇಲೆ ಏರಿ ಕೂತ ಜಂಭ. ನನ್ನ ವ್ಯಕ್ತಿತ್ವಕ್ಕೇ ಸವಾಲು ಹಾಕುವಂತೆ ಏರಿ ಕೂತಿರುವುದನ್ನು ಹಾಗೇ ಬಿಟ್ಟರೆ ನಾನೆಷ್ಟರವನು? 'ಮಾಡ್ತೀನಿ ನಿಂಗೆ' ಎನ್ನುತ್ತಾ, ಪಿತ್ಥ ನೆತ್ತಿಗೇರಿದವನ ಹಾಗೆ ಗುರಿ ಇಟ್ಟು, ಉಢಾಯಿಸಿ... ಭಪ್ಪರೇ, ಗುರಿ ಅಂದರೆ ಗುರಿ, ಗುರಿ ಇಡಲು ಬರುವುದಿಲ್ಲ ಅಂದುಕೊಂಡಿದ್ದೇ ಭ್ರಮೆ. ಕಿರ್‍ರನೆ ಕಿರುಚುತ್ತಾ, ಅಷ್ಟೆತ್ತರದಿಂದ ಜಾರಿ, ಜಾರಿ ಕೆಳಗೆ ಉರುಳಿ, ಸಮಾ ಆಯಕಟ್ಟಿನ ಜಾಗಕ್ಕೇ ಬಿದ್ದಿರಬೇಕು ಹೊಡೆತ. 'ಢಾಂ...' ಶಬ್ದಕ್ಕೆ ಉಳಿದುವೆಲ್ಲಾ, ಕಣ್ಣುಮುಚ್ಚಿ



ಬಿಡುವುದ ರೊಳಗೆ, ಕಿರುಲುತ್ತಾ ಪರಾರಿ. ಹಸಿ ರಕ್ತ ಉಕ್ಕುತ್ತಾ, ಅಡಿಕೆ ಮರದ ಬುಡದಲ್ಲಿ ಗುಪ್ಪೆ ಯಾಗಿ ಬಿದ್ದಿದ್ದ ಹೆಣ. ಅಚೆಕಡೆ, ಈಚೆಕಡೆ ತೋಟಗಳಲ್ಲಿ ಗೆಯ್ಯುತ್ತಿದ್ದ ಆಳು ಮಕ್ಕಳೆಲ್ಲಾ ಜಮಾಯಿಸಿಬಿಟ್ಟರು. 'ಘನಾ ಕೆಲ್ಸ ಮಾಡಿದ್ರಿ ಅಯ್ಯ, ಕಾಟ ತಪ್ತು' ಎಂದು ಒಬ್ಬ ಗ್ರಾಸ್ತನಾದರೂ ಬೆನ್ನು ತಟ್ಟುವ ಮಾತಾಡಿದನೇ? ಏನೋ ಮಹಾಪಾಪ ಮಾಡಿದ್ದೇನೆಂಬಂತೆ ಗುಸುಗುಸು, ಪಿಸಪಿಸ.

'ತೆಗ್ದೇಬಿಟ್ಯೇನೋ ಮಾರಾಯಾ, ಥೋ, ಹೆದ್ರಿಸಿದ್ರೆ ಸಾಕಾಗ್ತಿತ್ತು...' ಎಂದು ಅಪ್ಪನೂ ರಾಗ ಎಳೆದ. ಮಂಗ ಅಂದರೆ ಹನುಮಂತ. ಆಂಜನೇಯ ಸ್ವಾಮಿಯ ಅವತಾರ. ಗುಂಡು ಹಾಕಿ ಕೊಂದವರುಂಟೇ? ಸಾಯುವಾಗ ಎರಡೂ ಕೈ ಮುಗಿದು, 'ರಾಮ, ರಾಮಾ...' ಎಂದು ರಾಮ ಧ್ಯಾನ ಮಾಡಿ ಪ್ರಾಣ ಬಿಡುತ್ತಂತೆ. ಏಳೇಳು ಜಲ್ಮಕ್ಕೆ ಪಾಪದ ಬುತ್ತಿ ಕಟ್ಟಿ ಕೊಂಡಂತಾಯ್ತು. 'ಜೀಂವ ತೆಗೀಬೇಡ ಅಂತ ಹೇಳಿರ್ಲಿಲ್ಲನೋ' ಎನ್ನುತ್ತಾಳೆ ಅಮ್ಮ. ಬೇಕೂಂತ ಕೊಂದಿದ್ದಲ್ಲ. ಆದರೂ ಕೊಂದಿದ್ದು ಹೌದು. ಹೂವು ಏರಿಸಿ, ಊದಿನ ಬತ್ತಿ ಹಚ್ಚಿ, ಗುಂಡಿ ತೋಡಿ ಹುಗಿದು, ಅಲ್ಲಲ್ಲ, ಸಂಸ್ಕಾರ ಮಾಡಿ... ಯಾವ ಗಳಿಗೇಲಿ ಎದ್ದಿದ್ನೋ ಅನ್ನಿಸಿಬಿಟ್ಟಿತ್ತು. ಯಾರವನು ಋಷಿ? ಮಾರ್ಕಂಡೇಯನೋ, ಚ್ಯವನನೋ? ಸಣ್ಣಕ್ಕಿದ್ದಾಗ, ಜೀರುಂಡೆ ಹುಳ ಹಿಡಿದು, ಕಡ್ಡಿ ಚುಚ್ಚಿ, ಹಿಂಸೆ ಮಾಡಿದ್ದನಂತೆ. ಸತ್ತಮೇಲೆ ನರಕದಲ್ಲಿ ಶೂಲಕ್ಕೇರಿಸುವ ಶಿಕ್ಷೆ. 'ಅರಿಯದ ವಯಸ್ಸಲ್ಲಿ ಮಾಡಿದ ಬಾಲಚೇಷ್ಟೆಗೆ ಇಂತಾ ಶಿಕ್ಷೆಯೇ? ಇನ್ನು ಮೇಲೆ ಎಂಟು ವರ್ಷದೊಳಗಿನ ಮಕ್ಕಳು ಮಾಡುವ ಯಾವ ಕೃತ್ಯಕ್ಕೂ ಶಿಕ್ಷೆ ಅನ್ನುವುದಿರಬಾರದು' ಎಂದು ಮುನಿ ವರ ಬೇಡಿದನಂತೆ. ಅಥವಾ ಕೊಟ್ಟನೋ? ಅರಿಯದೆ ಮಾಡಿದ ತಪ್ಪಿಗೆ ಶಿಕ್ಷೆ ಸರಿಯಲ್ಲ ಅಂದಮೇಲೆ ಅದಕ್ಕೆ ವಯಸ್ಸಿನ ಮಿತಿ ಯಾಕೆ? ಹೊಟ್ಟೆಯೊಳಗೆ ಸಿಟ್ಟಿದ್ದದ್ದು ಹೌದು. ಆದರೆ ಕೊಂದೇಬಿಡಬೇಕೆನ್ನುವಷ್ಟಲ್ಲ. ಏನೋ ಪರಾಮೋಶಿಯಾಯ್ತು. ಅಜ್ಜ ಮಹಾ ದೈವಭಕ್ತ. ಸತ್ತ ನಾಗರಹಾವು ಕಂಡರೂ, ಸಂಸ್ಕಾರ ಮಾಡುವ ಶ್ರದ್ಧೆ. ಬಾಯಿ ಕಳೆಸಿ, ಚಿನ್ನದ ಚೂರನ್ನೋ, ನಾಣ್ಯವನ್ನೋ ಇಟ್ಟು, ಒಣ ಹುಲ್ಲುಕಡ್ಡಿ ಒಟ್ಟಿ, ಚಿಟಚಿಟ ಹೊಗೆ ಕಾರುತ್ತಾ ಉರಿಯುತ್ತಿದ್ದ ಬೆಂಕಿಯಲ್ಲಿ ಮಾಂಸ ಕರಟುವ ವಾಸನೆ. ಒಂದು ನಾಗರದ ಶವ ಸಂಸ್ಕಾರ ಮಾಡಿದರ; ಒಬ್ಬ ಅನಾಥ ಬ್ರಾಹ್ಮಣನ ಶವ ಸಂಸ್ಕಾರ ಮಾಡಿದ ಪುಣ್ಯವಂತೆ.

ಅಂತವರ ಕುಲದಲ್ಲಿ ಹುಟ್ಟಿ ರಾಮಭಕ್ತನನ್ನು ಕೊಲ್ಲುವುದಾ? ಮುಂದಿನ ಜನ್ಮದಲ್ಲಾದರೂ ಶಿಕ್ಷೆ ಅನುಭೋಗಿಸದೆ ವಿಧಿ ಇಲ್ಲ.

ಜಗ್ಗನಿಗೆ ಆಡುಮಂಡೆ. ಒಂದು ಕ್ಷಣ ತಲೆ ನೆಟ್ಟಗೆ ನಿಲ್ಲುತ್ತಿರಲಿಲ್ಲ. ಅಚೆಗಿಚೀಗೆ ವಲೆ ದಾಡುತ್ತಲೇ ಇರುತ್ತಿತ್ತು. ಕಳೆದ ಜಲ್ಮದಲ್ಲಿ ಬೆಕ್ಕು ಕೊಂದರೆ, ಈ ಜಲ್ಮದಲ್ಲಿ ಆಡುಮಂಡ ಅಂತ ಯಾರು ಹೇಳಿದ್ದು? ಹಿರಿಯಮ್ಮನಾ? ಕಪ್ಪೆ ಕೊಂದರೆ ಬ್ರಾಹ್ಮಣನನ್ನು ಕೊಂದ ಪಾಪ. ಮುಳ್ಳುಹಂದಿಯ ಕಣೆ ಸೇರಿಸಿ ಹಿಡಿಕಟ್ಟಿನಂತೆ ಕಟ್ಟುಮಾಡಿಟ್ಟುಕೊಂಡ 'ವರಾಕೇಸರಿ', ಒಡವೆ ತೊಳೆಯುವುದಕ್ಕೆ ಹೈಕ್ಲಾಸು. ಅಮ್ಮನ ಬಿಳಿ ಹರಳಿನ ಬೆಂಡೋಲೆಯನ್ನು, ಅಂಟುವಾಳಕಾಯಿ ಜಜ್ಜಿದ ನೊರೆನೀರಲ್ಲಿ ಮುಳುಗಿಸಿ, ಕರಿಬಣ್ಣದ ಬಿರುಸು ಕೂದಲಿನ ವರಾಕೇಸರಿಯಿಂದ ಉಜ್ಜಿ ತೊಳೆಯುವುದು ಒಂದು ಗಮ್ಮತ್ತು. 'ಜೋಪಾನ, ಬೆಂಡೋಲೆ ತಿರುಪು ಕಳೆದುಹಾಕ್ಬಿಟ್ಟೀರಿ' ಎಂದು ಎಚ್ಚರ ಹೇಳುತ್ತಿದ್ದ ಅಮ್ಮ. ತಲೆ ಎಣ್ಣೆಯ ಗಿಮಟು, ಬೆವರಿನ ಜಿಡ್ಡು ಕೂತು ಕಪ್ಪಾಗಿರುತ್ತಿದ್ದ ಹರಳು, ಲಕಲಕ ಹೊಳೆಯತೊಡಗಿ... ಇಶ್ಶೀ, ಬೆಂಡೋಲೆಯ ತಿರುಪಿನಲ್ಲಿ ಕಿವಿಕುಗ್ಗೆಯಂತೆ ಎಷ್ಟೊಂದು ಕೊಳಕು ಸೇರಿಕೊಂಡುಬಿಟ್ಟಿರುತ್ತಿತ್ತು. ದೊಡ್ಡಮ್ಮ, ಕೆಂಪು ಹರಳಿನ ಮಣಕು ಬೆಂಡೋಲೆಯನ್ನು, ಅನ್ನದ ಚರಿಗೆಯಲ್ಲಿ ಹಾಕಿ ಚೊಕ್ಕ ಮಾಡಿಕೊಳ್ಳುತ್ತಿದ್ದಳಂತೆ. ಅನ್ನ ಕೊತಕೊತ ಕುದ್ದು ಬೇಯುವಾಗ, ಬೆಂಡೋಲೆಯ ಕೊಳೆ ಬಿಟ್ಟುಕೊಂಡು, ಅನ್ನದ ತಿಳಿ ಬಸಿದ ಮೇಲೆ, ಊಟಕ್ಕೆ ಬಡಿಸಲು ಹಂಚಿಗೆ ತೋಡಿಕೊಂಡಾಗ, ಬೆಂಡೋಲೆ ಹುಡುಕಿ ತೆಗೆದಿಟ್ಟುಕೊಳ್ಳುವ ಅವಳ ಚಾಳಿಯಿಂದ ಅಮ್ಮನಿಗೆ ಮೈಯೆಲ್ಲಾ ಉರಿ.

'ಶ್ವಪಚತನಾಂದ್ರೆ, ಎಲ್ಲೀವರೆಗೆ? ಹಿಂಗಿದ್ದೆಲ್ಲಾ ಸೈಸಲ್ಲ ನಾನು. ಹಂಗಿದ್ದ ಅನ್ನ ತಿನ್ನೋಕೆ ಅಸಂಯ್ಯ ಆಗಲ್ವಾ?' ಎಂದು ಅಮ್ಮ ಬೈದರೆ, ದೊಡ್ಡಮ್ಮನಿಗೆ ಪಿಕೀಲಿಲ್ಲ. ಬಳಗ ಅಂದರೆ ಕಾಗೆಗಳದ್ದಪ್ಪಾ. ಎಲ್ಲಾದರೂ ಒಂದು ಸತ್ತು ಬಿತ್ತು ಅಂದರೆ, 'ಕಾ..ಕಾ..ಕಾ..ಕಾ..' ಎಂದು ಎಲ್ಲೆಲ್ಲಿದ್ದೋವೆಲ್ಲಾ ಹಾರಿಬಂದು, ಗಂಟಲು ಹರಿದುಕೊಂಡು, ಕರ್ಕರೆ ಹಿಡಿಸಿಬಿಡುತ್ತಾವೆ. ಕಾಕಾಸುರನನ್ನು ಕೊಲ್ಲಲು ರಾಮ ಬಿಟ್ಟ ಬಾಣ ಅವನ ಒಂದು ಕಣ್ಣಿಗ ಹೆಟ್ಟಿ, ಕಾಗೆ ಬಳಗಕ್ಕೆಲ್ಲಾ ಒಕ್ಕಣ್ಣಂತೆ. ಪೆದ್ದುಗಳು. ಹಪ್ಪಳ, ಸಂಡಿಗೆ ಮಾಡಿ ಚಪ್ಪರದಲ್ಲಿ ಒಣಗಿಸುವಾಗ, ಉದ್ದಕೋಲಿನ ತುದಿಗೆ ಒಂದು ಕರಿಬಟ್ಟೆ ನೇತಾಡಿಸಿ ಇಟ್ಟುಬಿಟ್ಟರೆ, ಅತ್ತಕಡೆ ತಲೆ ಹಾಕುವುದಿಲ್ಲ. ತಮ್ಮ ಕುಲಸ್ಥನೊಬ್ಬನನ್ನು ಬಡಿದು ನೇತುಹಾಕಿದ್ದಾರೆ ಅಂತ ಹೆದರಿಕೆಯಂತೆ. ದೊಡ್ಡಮ್ಮ ಒಂದು ಸತಿ ಕಳಲೆ ಹೆಚ್ಚಿ, ದೊಡ್ಡ ದಬರಿಯಲ್ಲಿ ಹಾಕಿ, ನೀರು ತುಂಬಿಸಿಟ್ಟಿದ್ದಳು. ಎಳೆ ಬಿದಿರಿನ ಹುಳಿಪಲ್ಯ ಬಲು ರುಚಿ. ಮೂರು ದಿನ ನೀರು ಬದಲಾಯಿಸಿ, ಬದಲಾಯಿಸಿ, ಹೆಚ್ಚಿದ್ದನ್ನ ನೀರಲ್ಲಿ ಮುಳುಗಿಸಡದಿದ್ದರೆ ವಿಷ. ಹಿತ್ತಲ ಜಗುಲಿಯ ಒಂದು ಮೂಲೆಯಲ್ಲಿಟ್ಟಿದ್ದ ದಬರಿಗೆ, ಪುಟ್ಟ ಹೋರಿಕರುವೊಂದು ಬಾಯಿಹಾಕಿ, ನೀರು ಕುಡಿದುಬಿಟ್ಟಿದೆ. ಅವತ್ತಿನ್ನೂ ಹೆಚ್ಚಿಟ್ಟಿದ್ದ ಕಳಲೆ. ಹೊಟ್ಟೆ ಉಬ್ಬರಿಸಿ, ಕಾಲು ಚಾಚಿ, ಲಿಬಿ ಲಿಬಿ ಒದ್ದಾಡಿ, ಫಟ್ಟ. 'ಕೈಯಾರೆ ಕೊಂದು ಪಾಪ ಕಟ್ಕೊಂಡ್ನಲ್ಲೇ...' ಎಂದು ದೊಡ್ಡಮ್ಮನಿಗೆ ಸಂಕಟ. ಅಮ್ಮ ಸಂದರ್ಭದ ಸದುಪಯೋಗ ಮಾಡಿಕೊಂಡು, 'ನಿಮ್ದೆಲ್ಲಾ ಹಿಂಗಿದ್ದೇ ಕೆಲ್ಸ, ಅರ್ಧಂಬರ್ಧ. ದಬರಿ ತಂದು ಒಳಗಿಟ್ಟಿದ್ರೆ, ಕೈ



ಸಮೀತಿತ್ತಾ? ಅನ್ಯಾಯಾಗಿ ಕರೂನ ಕೊಂದ್ರಿ,' ಎಂದು ಉರಿಯುವ ಬೆಂಕಿಗೆ ಉಪ್ಪೆರಚುವ ಮಾತಾಡಿದ್ದಳು. ಆಮೇಲಿಂದ ದೊಡ್ಡಮ್ಮ ಕಳಲೆಯ ಮೇಲೋಗರ ಕೈಯಿಂದ ಮುಟ್ಟಲಿಲ್ಲ. ಆಳುಕಾಳುಗಳು ಕಳಲೆ ತಂದಿಟ್ಟರೆ ಹೆಚ್ಚುವ ಕಾರುಬಾರೂ ಮಾಡಲಿಲ್ಲ. ಹೌದಾ, ಸುಳ್ಳಾ ಗೊತ್ತಿಲ್ಲದ ಮತ್ತೊಂದು ಕತೆ ಉಂಟು. ಚರಮನುಷ್ಯ ರಕ್ತ, ನಾಯಿಗಳು ನೆಕ್ಕಿದ್ರೆ, ಅವಕ್ಕೆ ಹುಚ್ಚು ಹಿಡಿಯುತ್ತಂತೆ. ಹುಚ್ಚು ಹಿಡಿದ ನಾಯಿಗಳು, ಕಣ್ಣಿಗೆ ಕಂಡವರನ್ನು ಬೆರೆಸಿಕೊಂಡು ಹೋಗಿ ಕಚ್ಚುತ್ತವೆಯಂತೆ. ಕೋವಿ ತಗಂಡು, 'ಢಮಾರ್' ಅನ್ನಿಸಿ, ಹುಚ್ಚು ನಾಯಿಗಳ ಕತೆ ಮುಗಿಸಬೇಕೇ ಹೊರ್ತು ಬೇರೆ ಉಪಾಯ ಇಲ್ಲ. ಎಲ್ಲಾದರೂ ಎಡಗಿ, ಕಾಲು ಬೆರಳು ಒಡೆದು ಕೊಂಡು ರಕ್ತ ಬಂದರೆ, ಜೀವ ನಡುಗುತ್ತಿತ್ತು. ಮನೆಯಲ್ಲಿ ನಾಯಿಹಿಂಡು. ಯಾವುದೋ ಒಂದು, ಹುಂಡುಹುಂಡಾಗಿ ಬಿದ್ದ ರಕ್ತ ನೆಕ್ಕಿ, ಹುಚ್ಚು ಹಿಡಿಸಿಕೊಂಡುಬಿಟ್ಟರೆ? ಸಿಕ್ಕಸಿಕ್ಕಿ ದೋರಿಗೆ ಕಚ್ಚಿದರೆ? ಕಚ್ಚಿಸಿಕೊಂಡವರಿಗೂ ಹುಚ್ಚು ಹಿಡಿದರೆ? ಹುಚ್ಚು ಹಿಡಿದ ನಾಯಿಗಳನ್ನು ಕೊಂದರೆ ಪಾಪ ಇಲ್ಲವಂತಾ? ಸೊಕ್ಕು ಬಂದ ಮಂಗಗಳನ್ನು ಕೊಲ್ಲಬಾರದಂತಾ? ಅಮ್ಮ ಬಡಿಸಿದ ಸಾರಿಗೆ ಯಾಕೆ ಹಸಿಹಸಿ ರಕ್ತದ ಬಣ್ಣ? ವಾಸನೆ? ಹೊಟ್ಟೆಯೊಳಗೆ ಮಗುಚಿದಂತಾಗಿ ವಾಕರಿಕೆ ಬಂದೇಬಿಟ್ಟಿತು. ಎದ್ದು ಬಚ್ಚಲು ಮನೆಗೆ ಓಡುವುದಕ್ಕೂ ಪುರುಸೊತ್ತಿಲ್ಲ. 'ಉವ್ವೇ...' ಎಂದು ಖಾಲಿ ಹೊಟ್ಟೆಯೊಳಗಿನ ಕರುಳು ಕಿತ್ತು ಬರುವಂತೆ ವಾಕರಿಸುವಾಗ, ಬೆನ್ನ ಮೇಲೆ ಕೈಯಾಡಿಸುತ್ತಿದ್ದಾಳೆ ಅಮ್ಮ. ವಾಕರಿಸಿದ ಜೋರಿಗೆ ಕಣ್ಣತುಂಬಾ ನೀರು. ಒಳಚಡ್ಡಿ ಒದ್ದೆಯಾಯಿತಾ, ಥೋ... ಬಳುಕುತ್ತಾ ಹೋಗಿ ಕೋಣೆ ಸೇರಿಕೊಂಡು, ಹಾಸಿಗೆಯ ಮೇಲೆ ಬಿದ್ದುಕೊಂಡಾಗ, ಅಮ್ಮ ಹೇಳುವುದು ಕಿವಿಯ ಮೇಲೆ ಬೀಳುತ್ತಿದೆ,

'ಇಡೀ ಒಂದು ತಿಂಗಳಾಗ್ತಾ ಬಂತು, ಅನ್ನ ಕಂಡ್ರೆ ವಾಕರಿಸ್ತಾನೆ. ಮೈಮರೆತು ನಿದ್ದೆ ಮಾಡ್ದೆ ಕನವರಿಸ್ತಾನೆ. ಜಾಸ್ತಿ ಸೈತಾ ಮುಟ್ಟಲ್ಲ ಅಂದ್ರೆ, ಗತಿ ಎಂತ ಮಾರಾಯ್ರೇ, ಸತ್ತ ಮಂಗನ ಶಾಪಾನಾ ಅಂತೀನಿ...'

'ಆಂಜನೇಯನ ದೇವಸ್ಥಾನದಲ್ಲಿ ಏನಾದ್ರೂ ಸೇವೆಮಾಡ್ಸಾಣ. ಬಲವಾದ ಒಂದು ಹರಕೆ ಹೇಳ್ಕಂಡು ದುಡ್ಡು ಕಟ್ಟಿಡು. ದೇವ್ರಿದಾನೆ, ನೋಡ್ಕಂತಾನೆ....'



ಗುರಿ ಇಲ್ಲ ಅಥವಾ ಯಾಕೆ, [illegible], ಗುರಿ ಅಂದರೆ ಗುರಿ, ಗುರಿ ಇಡಲು ಬರುವುದಿಲ್ಲ

[illegible]

[illegible]

ವಸುಮತಿ ಉಡುಪ







# ಸಾಲ್‌ಮಿಂಚು

ಒಣಗಿದ ಅರಳಿ ಕೊನೆಯಲ್ಲಿ ಗರುಡ ಕೂತಿತ್ತು. ಅದರ ಹಿಂಭಾಗ ಮಾತ್ರ ಕಾಣುತ್ತಿತ್ತು.
ಗುಮಾನಿಯಾಗಿ ಗಮನಿಸಿದರೆ ಅದರ ಕಾಲಲ್ಲಿ ಮಾಂಸ ಇತ್ತು.
ಇನ್ನೂ ಸೂಕ್ಷ್ಮ ನೋಡಿದರೆ ಮಾಂಸದಲ್ಲಿ ಜೀವ ಇತ್ತು. **ಡಿ.ಆರ್. ಚಂದ್ರ ಮಾಗಡಿ**

ನಮ್ಮೊಡನೆ ಅವನಿಲ್ಲದ್ದು ಕಂಡು ಅವಳ ಕಣ್ಣು ಸುಣ್ಣ ಹೊಡೆದ ಗೋಡೆ. **ಸಂಘಮಿತ್ರ**

ಬೃಹತ್ ಕೆಲೈಡೋಸ್ಕೋಪಿನಂಥ ಆ ಟ್ರಯಲ್ ರೂಮಿನೊಳಗೆ, ತನ್ನವೇ ನೂರಾರು
ಬಿಂಬಗಳೆದುರು ಬಟ್ಟೆ ಬದಲಿಸಲು ಹುಡುಗಿ ನಾಚಿದಳು. **ಅಪಾರ**

ಅಂಗಳದ ನಿಯಾನ್ ದೀಪದ ಬೆಳಕಲ್ಲಿ ಸೊಯ್ಯೊ ಎಂದು ತೊಯ್ಯುತ್ತಿದೆ
ಬರ್ರೋ ಎಂದು ಸುರಿವ ಧಾರಾಕಾರ ಮಳೆ. **ಹರಿಯಪ್ಪ ಪೇಜಾವರ**

ಮರಕ್ಕೆ ಕಲ್ಲು ಹೊಡೆದು ಕಾಯುವುದಾಗಿದೆ. ಬಿದ್ದಿಲ್ಲ ಒಂದಾದರೂ ಫಲ, ಕಲ್ಲೂ
ಹಿಂತಿರುಗಿಲ್ಲ. ಮರವೇ ಹಿಡಿಯಿತೆ ಅದನ್ನು ಪಕ್ವವಾಗಿಸಲು? **ಪ್ರಭಾಮಣಿ ನಾಗರಾಜ**

ಅದೆಂದೋ ಕಾಣೆಯಾಗಿದ್ದ ಆಕೆ, ಮೊನ್ನೆಯ ಮಳೆಯ ಮುನ್ನ ಹಿಡಿದ
ಇರುವೆ ಸಾಲಗುಂಟ ತೆವಳಿ ಹೋದಾಗ ಸಿಕ್ಕುಬಿಟ್ಟಳು **ವಿಜಯಕಾಂತ ಪಾಟೀಲ**

ಸುಳಿ ಬಾಳೆಯ ಕಂದು, ನಳನಳಿಸುವ ಮಾವಿನೆಲೆ, ಮಲ್ಲಿಗೆ ಮಾಲೆ, ಎಲೆಗಳ ನಡುವೆ ಚುಚ್ಚಿದ
ಗುಲಾಬಿ, ಈ ವರ್ಣನೆಗಳೆಲ್ಲಾ ನಿನ್ನೆಗೆ. ಇದು ನಿನ್ನೆ ಕಟ್ಟಿದ ಚಪ್ಪರ. **ಪ್ರಭಾಮಣಿ ನಾಗರಾಜ**

ಬೆಂಕಿ ಮುಟ್ಟಿದರೇನೇ ಲೋಭಾನ ಅರಳುವುದು, ಹೊಮ್ಮುವುದು ಗಂಧಚೈತ್ರ.
**ವೆಂಕಟ್ರಮಣ ಗೌಡ**

ಮೋಡ ಕವಿದ ಈ ದಿನ ಸೂರ್ಯ ಕಾಲಿಗೆ ಗೆಜ್ಜೆ ಕಟ್ಟುವುದಿಲ್ಲ **ರವಿ ಬಿ.ಎಂ. ಮೂರ್ನಾಡು**







## ಜಾರ್ಜ್ ಬೋರ್ಡೆ

# ಹೊಸ್ತಿಲಲ್ಲಿ ಕೂತ ಮನುಷ್ಯ

ಕನ್ನಡಕ್ಕೆ: ಕೇಶವ ಮಳಗಿ

ಬಿಯೊ ಕರಾಲೆಸ್, ಲಂಡನ್ನಿನಿಂದ, ಮಮ್ಮೂಲೆಯ, ಚೂಪು ಮೊನೆ, ಎರಡು ನಾಮಾಕಾರದ ಹಿಡಿಕೆಯ ವಿಚಿತ್ರ ಚಾಕುವೊಂದನ್ನು ಇತ್ತೀಚೆಗೆ ತಂದಿದ್ದ. ಬ್ರಿಟಿಶ್ ಕೌನ್ಸಿಲ್ಲಿನಲ್ಲಿರುವ ನಮ್ಮ ಗೆಳೆಯ ಕ್ರಿಸ್ಟೋಫರ್ ದಿವೆ, ಇಂಥ ಮೊನಚು ಚಾಕುಗಳನ್ನು ಹಿಂದೂಸ್ತಾನದಲ್ಲಿ ಬಳಸುವುದು ತೀರ ಸಾಮಾನ್ಯ ಎಂದು ಹೇಳಿದರು.

ಅವರ ಹೇಳಿಕೆ, ಎರಡು ಮಹಾಯುದ್ಧಗಳ ನಡುವಿನ ಕಾಲದಲ್ಲಿ, ಅವರು ಹಿಂದೂಸ್ತಾನದಲ್ಲಿ ಕೆಲಸ ಮಾಡಿದಾಗಿನ ಅನುಭವವನ್ನು ಹಂಚಿಕೊಳ್ಳಲು ಅನುವು ಮಾಡಿಕೊಟ್ಟಿತು. ಆ ರಾತ್ರಿ ಅವರು ಹೇಳಿದ ಘಟನೆಗಳಲ್ಲಿ ಒಂದನ್ನು, ಇದೀಗ ಮರು ಸೃಷ್ಟಿಸುವ ಧೈರ್ಯವನ್ನು ತೋರುತ್ತಿರುವೆ. ನಿರೂಪಣೆ ಆದಷ್ಟು ಪ್ರಾಮಾಣಿಕವಾಗಿದೆ. ಪರದೇಶದ ಈ ಅದ್ಭುತ ಕಥಾನಕದಲ್ಲಿ, ರುಡ್ಯಾರ್ಡ್ ಕಿಪ್ಲಿಂಗ್‌ನಲ್ಲಿ ಇಲ್ಲದ ಒಂದೆರಡು ಸಾಂದರ್ಭಿಕ ವಿವರಗಳನ್ನು ಜೋಡಿಸಲು ಅನುವು ಮಾಡಿಕೊಡಲಿ. ಅತ್ಯಂತ ಪುರಾತನ ಲಕ್ಷಣವಿರುವ ಈ ಸುಂದರ ಕಥಾನಕವನ್ನು ಕೇಳದಿರುವುದೆಂದರೆ 'ಸಾವಿರದ ಒಂದು ರಾತ್ರಿ' ಕಥೆಗಳನ್ನು ಆಲಿಸದಿರುವಷ್ಟೇ ಮೂರ್ಖತನವಾದೀತು.

ನಾನು ಹೇಳುತ್ತಿರುವ ಭೌಗೋಳಿಕ ವಿವರಗಳು ಮುಖ್ಯವೇ ಅಲ್ಲ. ಜತೆಗೆ, ಬ್ಯುನೋಸ್ ಏರ್ಸ್ ನಗರದಲ್ಲಿ ಇರುವವರಿಗೆ ಅಮೃತಸರ, ಔಧ್ ನಗರಗಳ ಹೆಸರುಗಳು ಏನನ್ನು ತಾನೇ ತಿಳಿಸಬಲ್ಲವು? ಅಂದರೆ, ನನ್ನ ಮಾತಿನ ಅರ್ಥ, ಸುಮಾರು ವರ್ಷಗಳ ಹಿಂದೆ ಕೋಮು ಗಲಭೆಗೆ ಕುಖ್ಯಾತಿ ಹೊಂದಿದ್ದ ಮುಸ್ಲಿಂ ನಗರಕ್ಕೆ ಕಾನೂನು ಸುವ್ಯವಸ್ಥೆ ಹತೋಟಿಗೆ ತರಲು, ಕೇಂದ್ರ ಸರ್ಕಾರ, ಭಾರಿ ಜಿಗಟು ಆಸಾಮಿಯನ್ನು ಕಳಿಸಿತು, ಎಂಬುದು ಅಷ್ಟೇ. ಆ ವ್ಯಕ್ತಿ, ಸಮರ ಶೂರರ ವಂಶಕ್ಕೆ ಸೇರಿದ ಸ್ಕಾಟ್‌ಲ್ಯಾಂಡಿನವ. ಅವನಲ್ಲಿ ಹರಿವ ರಕ್ತಕ್ಕೆ ಹಿಂಸೆಯ ಇತಿಹಾಸವಿತ್ತು.

ನಾನು ಆತನನ್ನು ನೋಡಿದ್ದು ಒಂದೇ ಸಲವಾದರೂ-ಬಿರುಸು ಕಪ್ಪು ತಲೆಗೂದಲು, ಎದ್ದು ಕಾಣುವ ಎಮಕೆಗಳ ಗದ್ದ, ಚೂಪು ಮೂಗು-ಬಾಯಿ, ಅಗಲ ತೋಳು, ಕಡಲ್ಗಳ್ಳರ ಸಂತತಿಯ ಖಂಡ ಮಾಂಸಗಳು ಕಣ್ಣಲ್ಲಿಯೇ ಕೂತಿವೆ. ಡೇವಿಡ್ ಅಲೆಗ್ಸಾಂಡರ್ ಗ್ಲೆನ್‌ಕೈರ್ ಎಂಬುದು, ಇಂದು ರಾತ್ರಿ ಹೇಳುತ್ತಿರುವ ಕಥಾನಕದಲ್ಲಿ ಅವನ ಹೆಸರು. ಮೊದಲಿನ ಎರಡು ಹೆಸರುಗಳೂ ಉಕ್ಕಿನ ಆಡಳಿತ ನಡೆಸಿದ ಕ್ರಿಸ್ತ ದೊರೆಗಳದ್ದು.

ಡೇವಿಡ್ ಅಲೆಗ್ಸಾಂಡರ್ ಗ್ಲೆನ್‌ಕೈರ್, (ಹಾಗೆಂದೇ ಕರೆದು ರೂಢಿ ಮಾಡಿಕೊಳ್ಳುವ) ನನಗನ್ನಿಸಿದಂತೆ, ಭಾರಿ ನಡುಕ ಹುಟ್ಟಿಸುತ್ತಿದ್ದ ಆಸಾಮಿ. ಆದರೆ, ಹಾಗೆಂದು, ಕೆಲವು ಕಠಿಣ ಕ್ರಮ ಕೈಗೊಳ್ಳಲು ಆತನಿಗೆ ಇದು ಅಡ್ಡಿಯಾಗಲಿಲ್ಲ. ವರ್ಷ ಕಳೆದವು. ಸಿಖ್ಖ-ಮುಸ್ಲಿಂರ ನಡುವಿದ್ದ ಪುರಾತನ ದ್ವೇಷ ಮರೆತು ಶಾಂತಿ ನೆಲೆಸಿತು. ನಗರ ಮತ್ತು ಜಿಲ್ಲೆಗಳಲ್ಲಿ ಸಮಾಧಾನದ ವಾತಾವರಣ ಮೂಡಿತು. ಆಗ ಇದ್ದಕ್ಕಿದಂತೆ ಗ್ಲೆನ್‌ಕೈರ್ ನಾಪತ್ತೆಯಾಗಿದ್ದ! ಸಹಜವಾಗಿಯೇ, ಆತನನ್ನು ಅಪಹರಿಸಲಾಗಿದೆ, ಕೊಲೆ ಮಾಡಲಾಗಿದೆ ಎಂಬ ಗಾಳಿಸುದ್ದಿಗಳು ಎದ್ದವು. ಪತ್ರಿಕೆಗಳ ಮೇಲೆ ದಿಗ್ಬಂಧನ ಜಾರಿಯಿದ್ದ ಆ ದಿನಗಳಲ್ಲಿ, ಈ ಸುದ್ದಿ ನನಗೆ ತಿಳಿದಿದ್ದು ನಮ್ಮ ಮೇಲಧಿಕಾರಿಯಿಂದ. ಪತ್ರಿಕೆಗಳಲ್ಲಿ ಆ ಕುರಿತು ಕಿಂಚಿತ್ತೂ ಪ್ರಸ್ತಾಪವೇ ಇರಲಿಲ್ಲ.

ಭಾರತ ಈ ವಿಶ್ವಕ್ಕಿಂತ ದೊಡ್ಡದು ಎಂಬ ಆಡುಮಾತೊಂದುಂಟಲ್ಲ, ಗೊತ್ತಿರಬೇಕು. ಕೇವಲ ಆಜ್ಞಾಪತ್ರಗಳಿಗೆ ಸಹಿ ಮಾಡಿ, ಸಕಲವನ್ನೂ ನಡುಗಿಸುತ್ತಿದ್ದ ಗ್ಲೆನ್‌ಕೈರ್, ಚಕ್ರಾಧಿಪತ್ಯದ ಚಕ್ರತೀರ್ಥದ ಸುರುಳಿಯಲ್ಲಿ ಸುತ್ತುವ ಸೊನ್ನೆಯಾಗಿದ್ದ. ಸ್ಥಳೀಯ ಪೊಲೀಸರು ನಡೆಸಿದ ತನಿಖೆ ನಿಷ್ಪ್ರಯೋಜಕವಾಗಿತ್ತು. ಯಾರಾದರೂ ವೈಯಕ್ತಿಕ ಆಸಕ್ತಿ ತೆಗೆದುಕೊಂಡು ಹುಡುಕಿದರೆ, ಪರಿಣಾಮ ಇದಕ್ಕಿಂತ ಚೆನ್ನಾಗಿರಬಹುದೇನೋ ಎಂದು ನನ್ನ ಮೇಲಧಿಕಾರಿ ನನ್ನೊಂದಿಗೆ ಹೇಳುತ್ತಿದ್ದರು.

ನಾನು ಮೂರು-ನಾಲ್ಕು ದಿನಗಳ ನಂತರ, (ದೂರ ಎಂಬ ಪದಕ್ಕೆ ಭಾರತದಲ್ಲಿ ಬಹಳ

ವಿಶಾಲ ಅರ್ಥವಿದೆ) ವ್ಯಕ್ತಿಯೊಬ್ಬನನ್ನು ಮಂತ್ರಜಾಲದಲ್ಲಿ ನುಂಗಿ ಹಾಕಿದ್ದ ಈ ಕೆಂಪು ನಗರದ ಬೀದಿ ಬೀದಿಗಳಲ್ಲಿ, ಯಾವುದೇ ನಿರೀಕ್ಷೆ ಇರದೆ ಸುತ್ತತೊಡಗಿದ್ದೆ.

ಆ ಕ್ಷಣಕ್ಕೆ, ಕಾಲಾತೀತವಾದ ವಶೀಕರಣ ಮಂತ್ರವೊಂದು ಗ್ಲೆನ್‌ಕೈರ್‌ನನ್ನು ಹುದುಗಿಟ್ಟಿದೆ, ಆದರೆ ಆ ರಹಸ್ಯ ಮಂತ್ರವನ್ನು ಬಲ್ಲ ಯಾವ ವ್ಯಕ್ತಿಯೂ ಈ ಮಂತ್ರ ನಗರಿಯಲ್ಲಿಲ್ಲ ಅನ್ನಿಸಿದ್ದು ಸುಳ್ಳಲ್ಲ.

ನಾನು ವಿಚಾರಣೆ ನಡೆಸಿದವರಲ್ಲಿ ಅನೇಕರು -ಆ ವ್ಯಕ್ತಿ ಯಾರು, ಎಂಥವನು, ಅವನ ಬಗ್ಗೆ ನಾವು ತಿಳಿದೇ ಇಲ್ಲ ಎಂಬಂಥ ನಿರ್ಲಕ್ಷ್ಯ ಭಾವವನ್ನು ಪ್ರಕಟಿಸುತ್ತಿದ್ದರು. ಇನ್ನೂ ಕೆಲವರು, ಈಗ ಅರ್ಧ ಗಂಟೆಯ ಹಿಂದಷ್ಟೇ ಅವರನ್ನು




ಎಂಬತ್ತೇಳು ವರ್ಷಗಳ ದೀರ್ಘ ಬದುಕಿನಲ್ಲಿ, ಸುಮಾರು ನಲವತ್ತು ವರ್ಷ ಅಂಧನಾಗಿ ಕಳೆದ ಜಾರ್ಜ್ ಲೂಯಿ ಬೋರ್ಹೆ ತನ್ನ ಸಾಹಿತ್ಯವನ್ನು ಹೇಳಿ ಬರೆಯಿಸುತ್ತಿದ್ದ.

ಅರ್ಜೆಂಟೀನಾ ದೇಶದ ಆಧುನಿಕ ಸಾಹಿತ್ಯದ ಮಹಾಪುರುಷ ಎಂದು ಗುರುತಿಸಲಾಗುವ ಈತ ಹುಟ್ಟಿದ್ದು, ತನ್ನಿಡೀ ಬದುಕನ್ನು ಕಳೆದಿದ್ದು, ಆ ದೇಶದ ರಾಜಧಾನಿ ಬ್ಯುನೋಸ್ ಐರ್‌ಸ್‌ನಲ್ಲಿ. ಯುರೋಪಿಯನ್ ಶಿಕ್ಷಣ, ತಂದೆಯ ಬೃಹತ್ ಪುಸ್ತಕಾಲಯ, ಬೋರ್ಹೆನನ್ನು ಸಹಜವಾಗಿ ಸಾಹಿತ್ಯದತ್ತ ಸೆಳೆದವು.

ಸುಮಾರು ಎಂಬತ್ತೇಳು ವರ್ಷ ಬದುಕಿದ ಬೋರ್ಹೆ, ತನ್ನ 50ನೇ ವಯಸ್ಸಿನವರೆಗೂ ತನ್ನ ದೇಶದಲ್ಲೇ ಅಪರಿಚಿತನಾಗಿದ್ದ. ತನ್ನ ಮೊದಲ ಪ್ರಕಟಿತ ಪುಸ್ತಕದ 40 ಪ್ರತಿಗಳು ಖರ್ಚಾದಾಗ, ಕೊಂಡ ಪ್ರತಿ ಓದುಗನಿಗೂ ಖುದ್ದು ಭೇಟಿಯಾಗಿ ಕೃತಜ್ಞತೆ ಸಲ್ಲಿಸಬೇಕೆಂಬಷ್ಟು ಉದ್ವಿಗ್ನನಾಗಿದ್ದ.

ಇಂದು ಬೋರ್ಹೆನ ಸಾಹಿತ್ಯ, ವಿಶ್ವದ ಅನೇಕ ಭಾಷೆಗಳಿಗೆ ಅನುವಾದಗೊಂಡಿದೆ. ಬದುಕಿನ ಕೊನೆಯ ಅವಧಿಯಲ್ಲಿ, ಎಲ್ಲಾ ವಿಖ್ಯಾತ ಪುರಸ್ಕಾರ, ಪ್ರಶಸ್ತಿ, ಗೌರವ ಡಾಕ್ಟರೇಟ್‌ಗಳು ಆತನನ್ನು ಹುಡುಕಿಕೊಂಡುಬಂದವು.

ಸರ್ವಾಧಿಕಾರಿ ಪೆರೋನ ವಿರುದ್ಧ ದನಿ ಎತ್ತಿ, ಇರುವ ಕೆಲಸವನ್ನೂ ಕಳೆದುಕೊಂಡ ಬೋರ್ಹೆ ಬದುಕಿರುವವರೆಗೂ ಅತ್ಯಂತ ಪ್ರಾಮಾಣಿಕನಾಗಿ ಜೀವಿಸಿದ.

ಆತನ ಪ್ರಕಟಿತ ಕೃತಿಗಳಲ್ಲಿ ಕೆಲವು-'ಲ್ಯಾಬ್ರಿಯಾಂಥ್ಸ್', 'ಎ ಯೂನಿವರ್ಸಲ್ ಹಿಸ್ಟರಿ ಆಫ್ ಇನ್‌ಫೇಮಿ', 'ಫಿಕ್ಷನ್ಸ್', 'ಡಾಕ್ಟರ್ ಬ್ರೋಡಿಸ್ ರಿಪೋರ್ಟ್', 'ಕಲೆಕ್ಟಡ್ ಸ್ಟೋರಿಸ್'.



'ಕಡಲೆ ತೆರೆಗೆ ದಂಡೆ', 'ಮಾಗಿ' ಕಥಾಸಂಗ್ರಹಗಳು ಮತ್ತು 'ಕುಂಕುಮ ಭೂಮಿ' ಎಂಬ ಉತ್ಕೃಷ್ಟ ಕಾದಂಬರಿಯ ಮೂಲಕ ಮೆಲುದನಿಯ ವಿಶಿಷ್ಟ ಕಥನಕಾರನೆಂದು ಗುರುತಿಸಲ್ಪಟ್ಟಿರುವ ಕೇಶವ ಮಳಗಿ, ಈ ಕಥೆಯನ್ನು ಕನ್ನಡಕ್ಕೆ ತಂದಿದ್ದಾರೆ.

ಇಂತಿಂಥವರ ಜತೆ ಮಾತಾಡುವಾಗ ಕಂಡೆ, ಅವರು, ಅಗೋ ಆ ಮನೆಯನ್ನು ಹೊಕ್ಕರು ಎಂದು ಬೆರಳು ಮಾಡಿ ತೋರಿಸುತ್ತಿದ್ದರು. ಅಲ್ಲಿಗೆ ಹೋದರೆ, ಆ ವ್ಯಕ್ತಿ, ಆ ವ್ಯಕ್ತಿ ಈಗಷ್ಟೇ ಹೋಗಿ ಅರೆಗಳಿಗೆಯಾಯಿತು ಎಂಬಂಥ ಮಾತು ಬರುತ್ತಿದ್ದವು. ಇಂಥ ಹಸಿಸುಳ್ಳು ಹುಟ್ಟಿಸುತ್ತಿದ್ದವರಿಗೆ ಒಂದೆರಡು ಬಾರಿ ನಾನು ಕಪಾಳಮೋಕ್ಷ ಮಾಡಿದ್ದೂ ಇದೆ. ನನ್ನ ಹತಾಶೆಯ ಅಂಚನ್ನು ಕಂಡ ಆ ಸುದ್ದಿಗಾರರು ಮತ್ತಷ್ಟು ಹುಸಿ ಸುದ್ದಿಗಳನ್ನು ಹುಟ್ಟುಹಾಕುತ್ತಿದ್ದರು. ಅವರ ಮಾತನ್ನು ನಾನು ನಂಬುತ್ತಿರಲಿಲ್ಲವಾದರೂ, ಆಗ, ತಿರಸ್ಕರಿಸುವ ಧೈರ್ಯ ಇರಲಿಲ್ಲ. ಒಂದು ಸಂಜೆ, ಯಾರೋ, ಒಂದಿಷ್ಟು ಗುರುತುಗಳನ್ನು ಹಾಕಿಕೊಟ್ಟು, ಲಕೋಟೆಯೊಂದನ್ನು ನನ್ನ ಕೈಗೆ ಕೊಟ್ಟು ಹೋದರು.

ನಾನು ಅಲ್ಲಿಗೆ ತಲುಪುವಾಗ ಸೂರ್ಯ ಮುಳುಗಿದ್ದ. ಚೌಕಾಕಾರವಾಗಿದ್ದ ಆ ಮನೆಯಲ್ಲಿನ ಜನ ತೀರ ಮುಗ್ಧರು. ಬೀದಿಯ ರಸ್ತೆಯಿಂದ ಕಂಡಾಗ ಹತ್ತಾರು ಅಂಗಳ, ಪೇರಿಸಿದ ಮಣ್ಣು, ಹಿತ್ತಲುಗಳಲ್ಲಿ ಬೆಳಕು ಕಾಣುತ್ತಿತ್ತು. ಕೊನೆಯ ಮನೆಯ ಹಿತ್ತಲಿನಲ್ಲಿ ಯಾವುದೋ ಮುಸ್ಲಿಂ ಆಚರಣೆ ನಡೆಯುತ್ತಿತ್ತು. ಕುರುಡನೊಬ್ಬ ಕೆಂಪು ಕಟ್ಟಿಗೆಯಿಂದ ಮಾಡಿದ ತಂತಿ ವಾದ್ಯವನ್ನು ಹಿಡಿದುಕೊಂಡು ಒಳಗೆ ಅಡಿಯಿಟ್ಟ.

ನಾನು ನಿಂತಿದ್ದ ಮನೆಯ ಹೊಸ್ತಿಲಿಗೆ, ನಿಶ್ಚಲ ಶಿಲೆಯಂತಿದ್ದ ಪುರಾತನ ವ್ಯಕ್ತಿಯೊಬ್ಬ ನೆಲಕ್ಕೆ ಹೂತುಹೋದಂತಿದ್ದ. ಈ ಕಥೆಗೆ ಅಗತ್ಯವಾದ ಪಾತ್ರವಾದುದರಿಂದ ನಾನು ಅವನನ್ನು ವಿವರಿಸಬೇಕು. ಆತನ ವೃದ್ಧಾಪ್ಯ, ಕಲ್ಲನ್ನು ನೀರು, ಗಾದೆ ಮಾತನ್ನು ಜನಪದ, ಬಳಸಿ ನುಣುಪು ಮಾಡುವಂತೆ ಅವನ ದೇಹವನ್ನು ಸವೆಸಿತ್ತು.

ಆತನ ಮೈಯನ್ನು ಚಿಂದಿ ಬಟ್ಟೆ ಮುಚ್ಚಿದಂತಿದ್ದವು. ಅವನ ತಲೆಗೆ ಸುತ್ತಿದ್ದ ರುಮಾಲಿನಿಂದಾಗಿ ಆತ ಚಿಂದಿಬಟ್ಟೆಯ ಗಂಟಿನಂತೆ ಕಾಣುತ್ತಿದ್ದ. ಕತ್ತಲಾವರಿಸುತ್ತಿದ್ದ ಆ ಸಂಜೆಯಲ್ಲಿ, ಮುಸುಕು ತೆಗೆದಾಗ, ಅವನ ಕರೀ ಮುಖ, ಬಿಳಿಬಿಳಿ ಗಡ್ಡ ಹೊಳೆದವು. ಈಗಾಗಲೇ ಡೇವಿಡ್ ಅಲೆಗ್ಸಾಂಡರ್ ಗ್ಲೆನ್‌ಕೈರ್‌ನ ಬಗ್ಗೆ ಎಲ್ಲ ಆಶಾಭಾವನೆಗಳನ್ನೂ ಬಿಟ್ಟುಕೊಟ್ಟಿದ್ದ ನಾನು, ಯಾವುದೇ ಪೀಠಿಕೆಯಿಲ್ಲದೆ ಆತನೊಂದಿಗೆ ಮಾತಿಗಿಳಿದೆ. ನಾನು ಹೇಳುವುದು ಆತನಿಗೆ ಅರ್ಥವಾಗಲಿಲ್ಲ, ಅಥವಾ ಕೇಳಿಸುತ್ತಿರಲಿಲ್ಲವೊ. ಕೊನೆಗೆ, ಗ್ಲೆನ್‌ಕೈರ್ ಒಬ್ಬ


ಸಂಗ್ರಹ: ಕೇಶವ ಮಳಗಿ



ಸ್ಪ್ಯಾನಿಷ್ ಕಲಾಕೃತಿ

ನ್ಯಾಯಾಧೀಶನೆಂದೂ, ನಾನು ಆತನನ್ನು ಹುಡುಕುತ್ತಿರುವುದಾಗಿಯೂ ಬಿಡಿಸಿ ಹೇಳಬೇಕಾಯಿತು. ಈ ಮಾತುಗಳನ್ನು ಆಡಿದ್ದೇ ಅಸಂಬದ್ಧ ಬೊಂತೆ ಎನ್ನಿಸಿತು. ಅದೂ, ವರ್ತಮಾನವೊಂದು ಗಾಳಿ ಸುದ್ದಿಯಲ್ಲದೆ ಬೇರೇನೂ ಅಲ್ಲದ ಈ ಪುರಾತನ ಕುಳ ವ್ಯಕ್ತಿಯೆದುರು. ನಾನಂದುಕೊಂಡೆ-ಸೈನ್ಯದ ದಂಗೆ, ಅಕ್ಬರ್‌ನ ಹೊಸ ಮಾತುಗಳಂಥ ವಿಷಯ ಗೊತ್ತಿರಬಹುದೆ ಹೊರತು, ಗ್ಲೆನ್‌ಕೈರ್ ಬಗ್ಗೆ ಈ ವ್ಯಕ್ತಿಗೆ ಖಂಡಿತವಾಗಿ ಗೊತ್ತಿರಲಾರದು. ಆತ ಹೇಳಿದ ಮಾತುಗಳಿಂದ ಇದು ಖಚಿತವಾಯಿತು.

''ನ್ಯಾಯಾಧೀಶ!'', ಭಾರಿ ಆಶ್ಚರ್ಯದಿಂದ ಮುದುಕ ಕೇಳಿದ. ''ನಾಪತ್ತೆಯಾದ, ಹುಡುಕುತ್ತಿರುವ ನ್ಯಾಯಾಧೀಶ? ಈ ಘಟನೆ ನಡೆದಿದ್ದು ನಾನು ಬಹಳ ಚಿಕ್ಕವನಿದ್ದಾಗ, ದಿನಾಂಕ, ವರ್ಷಗಳು ನೆನಪಿಲ್ಲ. ಆದರೆ ಈ ನಿಕ್ಕಲ್ ಸೆನ್ಯಾ, ಇನ್ನೂ ದಿಲ್ಲಿ ಗೋಡೆ ಬಳಿ ಸತ್ತಿರಲಿಲ್ಲ ನೋಡು'' ಅಂದ. ಅವನ ಅರ್ಥದಲ್ಲಿ ನಿಕ್ಕಲ್ ಸೆನ್ಯಾ ಅಂದರೆ ನಿಕಲ್‌ಸನ್! ''ಗತಕಾಲ ಯಾವಾಗಲೂ ನೆನಪಿನಲ್ಲಿ ಜೀವಂತವಾಗಿರುತ್ತೆ. ಆಗ ಏನು ನಡೀತು ಅಂತ ನಾನೂ ನೆನಪಿಸಿಕೊಳ್ಳಬಲ್ಲೆ. ಅಲ್ಲಾನ ಕೋಪದ ನುಡಿಗೆ ತುತ್ತಾದ ಜಗತ್ತು ಭ್ರಷ್ಟವಾಯಿತು. ಮನುಷ್ಯರ ಬಾಯಲ್ಲಿ ಬರೀ ಶಾಪದ ನುಡಿಗಳು ತುಂಬಿಕೊಂಡವು. ಸುಳ್ಳು, ತಟವಟ, ವಂಚನೆ. ಆದರೆ ಎಲ್ಲರೂ ಆಸೆ ಬಿಟ್ಟು ಕೂತಿರಲಿಲ್ಲ. ರಾಣಿ, ಇಂಗ್ಲೆಂಡಿನ ಕಾನೂನು ಕಟ್ಟಳೆಗಳನ್ನು ಈ ನೆಲದಲ್ಲಿ ಲಾಗೂ ಮಾಡಲು ವ್ಯಕ್ತಿಯೊಬ್ಬನನ್ನು ಕಳಿಸಲಿದ್ದಾಳೆ ಎಂಬ ಸುದ್ದಿ ಬಂತು. ಇನ್ನೂ ಅಲ್ಪಸ್ವಲ್ಪ ಒಳ್ಳೇತನ ಉಳಿಸಿಕೊಂಡವರು ಇದರಿಂದ ಸಂತೋಷಪಟ್ಟರು. ಅರಾಜಕತೆಗಿಂತ ಎಂಥದೂ ಒಂದು ಕಟ್ಟಳೆ ಇರೋದು ವಾಸಿ ಅನ್ನಿಸಿತ್ತು.''

''ಆ ಕ್ರಿಶ್ಚಿಯನ್ ಬಂದ. ಆದರೆ ಮಾತು ತಪ್ಪಲು, ಅನಗತ್ಯವಾಗಿ ಅಮಾಯಕರಿಗೆ ಹಿಂಸೆ ನೀಡಲು, ನ್ಯಾಯವನ್ನು ಹಣಕ್ಕೆ ಮಾರಿಕೊಳ್ಳಲು ಆತನಿಗೆ ಬಹಳ ಸಮಯ ಬೇಕಾಗಲಿಲ್ಲ. ಆರಂಭದಲ್ಲಿ ನಾವು ಆತನ ಬಗ್ಗೆ ದೂರಲಿಲ್ಲ. ನಮಗೆ ಇಂಗ್ಲಿಷ್ ನೆಲದ ಕಾನೂನು-ಕಟ್ಟಳೆ ತಿಳಿದಿರಲಿಲ್ಲ. ನ್ಯಾಯಾಧೀಶನ ನಡವಳಿಕೆಯ ಹಿಂದೆ ಬಲವಾದ ಕಾರಣಗಳಿರಬೇಕು ಎಂದುಕೊಂಡೆವು. ಆತನ ಎಲ್ಲ ಕ್ರಿಯೆಗಳಿಗೂ ಅವನಲ್ಲಿ ಸಮರ್ಥನೆಗಳಿದ್ದವು. ಆದರೆ,

ದಿನಕಳೆದಂತೆ, ಜಗತ್ತಿನ ಎಲ್ಲ ನೀಚ ನ್ಯಾಯಾಧೀಶರಂತೆಯೇ ಈತನೂ ಎಂದು ಸ್ಪಷ್ಟವಾಗತೊಡಗಿತು. ಆತನೊಬ್ಬ ನೀಚ ಮನುಷ್ಯ ಎಂಬುದು ನಿಚ್ಚಳವಾಗತೊಡಗಿತು. ಆತ ಪ್ರಜಾಪೀಡಕನಾಗಿದ್ದ. ನಮ್ಮ ಪಾಪದ ಜನಗಳು (ಹಿಂದೊಮ್ಮೆ ಆತನ ಮೇಲೆ ಭಾರಿ ಭರವಸೆ ಇಟ್ಟಿದ್ದಕ್ಕಾಗಿ ವ್ಯಥೆಪಟ್ಟು) ಅವನನ್ನು ಅಪಹರಿಸಿ, ವಿಚಾರಣೆ ನಡೆಸಲು ನಿರ್ಧರಿಸಿದರು. ಬಣ್ಣದ ಮಾತುಗಳು ನಿಷ್ಪ್ರಯೋಜಕವಾಗಿದ್ದವು. ಹೀಗಾಗಿ ಕ್ರಿಯೆಯನ್ನು ಕೈಗೆತ್ತಿಕೊಂಡೆವು. ಹರೆಯದ ಹುಡುಗರು, ಮುಗ್ಧರನ್ನು ಬಿಟ್ಟರೆ ಇಂಥ ವಿಚಾರವನ್ನು ಯಾರೂ ನಂಬಿರಲಿಲ್ಲ. ಆದರೆ ಯಾವುದನ್ನು ಸಾಧಿಸುವುದು ಅಸಾಧ್ಯವೆಂದು ಭಾವಿಸಿದ್ದರೊ, ಅದನ್ನು ಅಪಹರಿಸಿ, ವಿಚಾರಣೆಗಾಗಿ ನಗರದಿಂದ ದೂರವಿರುವ ತೋಟದ ಮನೆಯಲ್ಲಿ ಕೂಡಿಟ್ಟರು.

ಅವನಿಂದ ಚಿತ್ರಹಿಂಸೆಗೊಳಗಾದವರನ್ನು ಜನ ಸಂಪರ್ಕಿಸಿದರು. ಪೀಡನೆಗೆ ಒಳಗಾಗಿ ಗಂಡಂದಿರನ್ನು ಕಳೆದುಕೊಂಡ ವಿಧವೆಯರನ್ನು, ಅನಾಥರನ್ನು ಭೇಟಿ ಮಾಡಿದರು. ಕೊನೆಗೆ ಅತ್ಯಂತ ಕಠಿಣವಾದ ಆಯ್ಕೆಗೆ ಬಂದು ತಲುಪಿದರು. ನ್ಯಾಯಾಧೀಶನ ವಿಚಾರಣೆ ನಡೆಸಿ, ನ್ಯಾಯ ನೀಡುವುದಕ್ಕೆ ಒಬ್ಬ ನ್ಯಾಯಾಧೀಶನನ್ನು ನೇಮಿಸುವುದು.''

ಈ ಸಮಯಕ್ಕೆ ಮುದುಕನೊಂದಿಗೆ ಮಾತಾಡಲು ಒಂದಿಷ್ಟು ಹೆಂಗಸರು ಬಂದರು. ಅವರೆಲ್ಲ ಮನೆಯೊಳಗೆ ಹೋದ ಮೇಲೆ ಆತ ಮುಂದುವರಿಸಿದ. ನಿಧಾನಕ್ಕೆ

''ಮಾನವರ ಪ್ರತಿ ಜನಾಂಗದಲ್ಲೂ ನಾಲ್ಕು ಜನ ಅತ್ಯಂತ ಪ್ರಾಮಾಣಿಕರು ಹುಟ್ಟುತ್ತಾರೆ. ಅವರು ಇಲ್ಲಿಯದೆಲ್ಲವನ್ನೂ ದೇವರಿಗೆ ಒಪ್ಪಿಸುತ್ತಾರೆ ಎಂದು ಯಾರೋ ಹೇಳಿದ್ದಾರೆ. ಅವರೆಲ್ಲ ವಿಶ್ವದ ರಹಸ್ಯವನ್ನು ತಮ್ಮ ಕೈಯಲ್ಲಿ ಹಿಡಿದಿಟ್ಟುಕೊಂಡಿರುತ್ತಾರೆ ಎಂದೂ ಹೇಳುತ್ತಾರೆ.

ಆ ನಾಲ್ವರಲ್ಲಿ ಒಬ್ಬ, ನ್ಯಾಯಾಧೀಶ
ನ್ಯಾಯಾಧೀಶನಾಗಬಹುದಿತ್ತು. ಆದರೆ ಅವರ
ಹುಡುಕುವುದೆಲ್ಲಿ? ಅಂಥವರು ಎದುರಿ
ಬಂದರೂ ಗುರುತು ಹಿಡಿಯಲಾದೀತೆ
ಹೀಗಾಗಿಯೇ, ಜ್ಞಾನಿಗಳ ಸಂಗ ಸಿಗದಂತೆ ಎ
ತಡೆದಾಗ, ಮೂರ್ಖರನ್ನು ಆಯುವು
ಮೇಲು ಎಂಬ ನಿಲುವಿಗೆ ಬಂದರು. ನಿಲುವಿ
ಮಾನ್ಯತೆ ಸಿಕ್ಕಿತು.

ಕುರಾನಿನ ಪಂಡಿತರು, ಕಾನೂನು ತಜ್ಞರ
ಸಿಖ್ಖರು, ಹಲವಾರು ದೇವತೆಗಳನ್ನು ಪೂಜಿಸು
ಹಿಂದೂಗಳು, ಅಹಿಂಸೆಯ ಮಹಾವೀರ ಭಕ್ತರ
ಅಗ್ನಿಯನ್ನು ಪೂಜಿಸುವವರು, ಎಲ್ಲ ಇದ್ದರು
ಅಂತಿಮ ತೀರ್ಪನ್ನು ಒಬ್ಬ ಹುಚ್ಚ ನಿರ್ಧರಿಸಿದ!

ಇಲ್ಲಿ ಆಚರಣೆಯನ್ನು ಮುಗಿಸಿ ಹೊರ
ವರು ಮತ್ತೆ ಮುದುಕನನ್ನು ಮಾತಾಡಿಸಿದರು.

''ಒಬ್ಬ ಹುಚ್ಚ!'', ಮುದುಕ ಮತ್ತೊ
ಹೇಳಿದ.-''ದೇವರ ವಾಕ್ಯಗಳನ್ನು ಹುಚ್ಚ
ಬಾಯಿಯಲ್ಲಿ ಹೇಳಿಸಿ, ಮನುಷ್ಯ
ದುರಹಂಕಾರ, ಸ್ವಪ್ರತಿಷ್ಠೆಗೆ ಅವಮಾ
ಮಾಡುವುದು. ಆ ಮನುಷ್ಯನ ಹೆಸರು ಅಳಿ
ಹೋಗಿತ್ತು. ಅಥವಾ ಗೊತ್ತೇ ಇರಲಿಲ್ಲ.
ಹುಚ್ಚ, ಚಿಂದಿ ತೊಟ್ಟೋ ಅಥವ
ಬೆತ್ತಲೆಯಾಗಿಯೋ ಈ ಬೀದಿಗಳಲ್ಲಿ ಸುತ್ತುತ್ತಿ
ತನ್ನ ಹೆಬ್ಬೆರಳಿಂದ ಬೆರಳುಗಳನ್ನು ಎಣಿಸು
ಮರಗಿಡಗಳನ್ನು ತಪಿಸುತ್ತ ಒಡಾಡುತ್ತಿದ್ದ.''

ನನ್ನ ವಿಚಾರಶಕ್ತಿ ಇದನ್ನು ವಿರೋಧಿಸಿತ
ಹುಚ್ಚನ ಬಾಯಿಂದ ತೀರ್ಪನ್ನು ಕೊಡಿಸು
ದೆಂದರೆ ವಿಚಾರಣೆಯನ್ನು ಪ್ರಹಸನವನ್ನಾ
ಮಾಡುವುದೆಂದ ಅರ್ಥ.

ಆದರೆ ಅಪರಾಧಿ ಇದನ್ನು ಒಪ್ಪಿಕೊಂ
ಎಂಬುದು ಉತ್ತರವಾಗಿತ್ತು. ಆತನಿಗೆ ತನ್ನ ಜೀ
ಉಳಿದರೆ ಈ ಹುಚ್ಚನಿಂದ, ಹೋದರೂ ಈ
ಹುಚ್ಚನಿಂದ ಎಂದು ಗೊತ್ತಿತ್ತು. ನ್ಯಾಯಾಧೀ
ಯಾರು ಎಂದು ತಿಳಿದಾಗ ಆತ ಜೋರಾ

ಕ್ಕನಂತೆ. ವಿಚಾರಣೆ ಅನೇಕ ಹಗಲು ರಾತ್ರಿ ನಡೆಯಿತು. ಅಸಂಖ್ಯಾತ ಸಾಕ್ಷಿಗಳು ಹಾಜರಾದವರು.

ಆತ ಮೌನವಾದ-ಯಾವುದೋ ಗಹನ ವಿಚಾರದಲ್ಲಿ ಮುಳುಗಿದವನಂತೆ. ಮೌನವನ್ನು ಮುರಿಯಲು ಎಷ್ಟು ವಿಚಾರಣೆ ನಡೆಯಿತು ಎಂದು ನಾನು ಕೇಳಿದೆ.

''ಹೆಚ್ಚು ಕಡಿಮೆ ಹತ್ತೊಂಬತ್ತು ದಿನಗಳು'', ಆತ ಉತ್ತರಿಸಿದ. ಜನ ಆಚರಣೆ ಮುಗಿಸಿ ಹೊರಟಿರುವುದರಿಂದ ಆತ ಗಲಿಬಿಲಿಗೊಳಗಾದಂತಿದ್ದ. ಮುಸ್ಲಿಮರಿಗೆ ಪಾನ ನಿಷೇಧ ಇದ್ದರೂ, ಅಲ್ಲಿದ್ದವರ ಮುಖ ನೋಡಿದರೆ ಕುಡಿಸಿದ್ದಾರೆ ಅನ್ನಿಸುತ್ತಿತ್ತು. ಯಾರೋ ಒಬ್ಬ ಹೋಗುವ ಮೊದಲು ಮುದುಕನತ್ತ ಜೋರಾಗಿ ಕೂಗಿದ.

''ಸರಿಯಾಗಿ ಹತ್ತೊಂಬತ್ತು ದಿನಗಳು'', ಆತ ಖಚಿತವಾಗಿ ನುಡಿದ. ''ಆ ಧರ್ಮಲಂಡ ನಾಯಿ ತೀರ್ಪನ್ನು ಆಲಿಸಿತು. ಚೂಪಾದ ಚಾಕು ಆತನ ಕತ್ತನ್ನು ಕತ್ತರಿಸಿ ಹಾಕಿತು.''

ಆತ ಆನಂದ ತುಂಬಿದ ರೋಷದಿಂದ ಮಾತನಾಡುತ್ತಿದ್ದ. ಆದರೆ ಆತ ಈ ಕಥೆಯನ್ನು ಮುಗಿಸಿದ್ದು ಬೇರೆಯ ಧ್ವನಿಯಲ್ಲಿ.

''ಆ ಮನುಷ್ಯ ಮರಣದ ನಂತರವೂ ಇನ್ನೊಂದು ವಿಧಿ ಕಾದಿದೆ ಎಂಬಂತೆ ನಿರ್ಭಯವಾಗಿ ಸತ್ತ.''

''ನೀನು ಹೇಳಿದ ಈ ಕಥೆ ನಡೆದದ್ದೆಲ್ಲಿ? ತೋಟದ ಮನೆಯಲ್ಲಿಯೆ?'', ನಾನು ಕೇಳಿದೆ.

ಮೊದಲ ಬಾರಿಗೆ ನನ್ನ ಕಣ್ಣಲ್ಲಿ ಕಣ್ಣಿಟ್ಟು ಆತ ನೋಡಿದ. ಆನಂತರ ನಿಧಾನಕ್ಕೆ ಮಾತುಗಳನ್ನು ತೂಗುತ್ತ ಹೇಳಿದ.

''ನಾನು ಹೇಳಿದ್ದು, ತೋಟದ ಮನೆ ಅವನ ಸೆರೆಯಾಗಿತ್ತೆಂದು ಅಷ್ಟೇ. ವಿಚಾರಣೆ ನಡೆದಿದ್ದು ಅಂತ ಹೇಳಲಿಲ್ಲ. ಆತನ ವಿಚಾರಣೆ ನಡೆದಿದ್ದು ಇದೇ ನಗರದಲ್ಲಿ, ಎಲ್ಲ ಮನೆಗಳಂತಿರುವ ಇಂಥ ಮನೆಯಲ್ಲೇ. ಪ್ರತಿ ಮನೆಯೂ ಒಂದನ್ನೊಂದು ಹೋಲುತ್ತವೆ. ತಿಳಿದುಕೊಳ್ಳಬೇಕಾಗಿರುವುದೆಂದರೆ ಅದನ್ನು ಸ್ವರ್ಗದಲ್ಲಿ ಕಟ್ಟಿದಂತೋ ಅಥವಾ ನರಕದಲ್ಲೋ ಎಂಬುದನ್ನು''

ಅಪಹರಿಸಿದವರ ಕಥೆ ಏನಾಯಿತು ಎಂದು ನಾನು ಕೇಳಿದೆ.

ಬಹಳ ಸಹನೆಯಿಂದ, 'ನನಗೆ ತಿಳಿಯದು' ಎಂದು ಆತ ನುಡಿದ. ''ಈ ಘಟನೆಗಳು ನಡೆದಿದ್ದು ಬಹಳ ವರ್ಷಗಳ ಹಿಂದೆ. ಎಲ್ಲ ಮರೆತು ಹೋಗಿದೆ. ಮನುಷ್ಯನು ಅವುಗಳನ್ನು ಖಂಡಿಸಬಹುದು. ಆದರೆ ದೇವರು ಹಾಗೆ ಮಾಡಲಾರ.''

ಇದನ್ನು ಹೇಳಿದ್ದೇ ಆತ ಎದ್ದು ನಿಂತ. ನನ್ನನ್ನು ಆತ ತಿರಸ್ಕರಿಸುತ್ತಿದ್ದಾನೆ ಎಂದು ನನಗನ್ನಿಸಿತು. ಆ ಗಳಿಗೆಯಿಂದಲೇ ಅವನಿಂದ ನಾನು ಮರೆಯಾದೆ ಅಂತಲೂ ಅನ್ನಿಸಿತು. ಹೆಂಗಸರು-ಗಂಡಸರು ಇದ್ದ ಸಿಖ್ಖರ ಭಾರಿ ಗುಂಪೊಂದು ನಮ್ಮನ್ನು ಸುತ್ತುವರಿಯಿತು. ಅವರು ಹಾಡುತ್ತಿದ್ದರು. ಪ್ರಾರ್ಥನೆ ಸಲ್ಲಿಸುತ್ತಿದ್ದರು. ನಮ್ಮನ್ನು ತಳ್ಳಿಕೊಂಡು ಹೊರಟು ಹೋಗುತ್ತಿದ್ದರು. ಇಂಥ ಅತಿ ಕಿರಿದಾದ ಓಣಿಯಲ್ಲಿ ಇಷ್ಟೊಂದು ಜನ ಪ್ರವಾಹವಿತ್ತೆ? ಎಂದು ನನಗೆ ಆಶ್ಚರ್ಯವಾಯಿತು. ಇನ್ನಷ್ಟು ಜನ, ಗೋಡೆಗಳಿಂದ ಹಾರಿ, ಅಕ್ಕಪಕ್ಕದ ಮನೆಯಿಂದ ಹೊರಬಂದರು. ಹಿಡಿಶಾಪ ಹಾಕುತ್ತ ಒಬ್ಬರನ್ನೊಬ್ಬರು ತಳ್ಳುತ್ತಿದ್ದರು. ನಾನು ನನಗಾಗಿ ದಾರಿ ಮಾಡಿಕೊಂಡೆ. ಓಣಿಯ ಮೂಲೆಯಲ್ಲಿ, ತಲೆಗೆ ಹಳದಿ ಹೂಗಳಿಂದ ಸಿಂಗರಿಸಿದ ಬೆತ್ತಲೆ ವ್ಯಕ್ತಿಯೊಬ್ಬನನ್ನು ಕಂಡೆ. ಜನ ಅವನಿಗೆ ಬಾಗಿ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಿದ್ದರು. ಆತನ ಕೈಯಲ್ಲಿ ಖಡ್ಗವಿತ್ತು.

ಆ ಖಡ್ಗ ರಕ್ತಸಿಕ್ತವಾಗಿತ್ತು. ಆ ಖಡ್ಗ ಗ್ಲೈನ್‌ಕೈರ್‌ನನ್ನು ಕತ್ತರಿಸಿ ಹಾಕಿತ್ತು. ತುಂಡು ತುಂಡಾದ ಆತನ ದೇಹದ ವಿಕಲಾಂಗಗಳನ್ನು ಆ ರಸ್ತೆಯ ಮೂಲೆಯಲ್ಲಿ ನಾನು ಕಂಡೆ.





## ಕೃಷ್ಣಮೂರ್ತಿ ಚಂದರ್

# ಹೆಸರು

ಐದೂವರೇಗೆಲ್ಲ, ಅಲಾರಂ ಹೊಡೆದಂತೆ, ರತ್ನಮ್ಮ, ಪಕ್ಕದಲ್ಲೇ ಇನ್ನೂ ಗೊರಕೆ ಹೊಡೆಯುತ್ತಿದ್ದ ತಮ್ಮ ಯಜಮಾನರಿಗೆ ತಿವಿದು, ''ರೀ, ಏಳ್ರೀ, ಸೀಮೆಣ್ಣೆ ಗಾಡಿ ಬಂದುಬಿಟ್ಟಿದುತ್ತೆ...'' ಅಂದರು. ಅವರು ತಿವಿದಿದ್ದು ರಾಯರ ಪಕ್ಕೆಗೇ. ಹಾಗಾಗಿ, ಅದರಿಂದ ರಾಯರ ಉಸಿರು ಸಿಕ್ಕಿಹಾಕಿಕೊಂಡಂತಾಗಿ, ಅವರು ತಮಗೆ ಹಾರ್ಟ್ ಅಟ್ಯಾಕ್ ಆಗಿದೆ ಅಂದು ಬೆದರಿ, 'ಅಯ್ಯಯ್ಯೋ' ಅಂತ ಕೂಗಿ ಎದ್ದುಕೂತು, 'ನೀರು, ನೀರು' ಅಂದರು. ಅವರ ಕುಟುಂಬ, ಅಲ್ಲೇ ಇಟ್ಟಿದ್ದ ಬೋಸಿಯಿಂದ ನೀರು ಹುಯ್ದು ಕುಡಿಸಿದರು. ರಾಯರ ಉಸಿರಾಟ ಸ್ತಿಮಿತಕ್ಕೆ ಬಂದಹಾಗೆ, ಅವರ ಪತ್ನಿ, ಸರಿಹೋದ್ರಲ್ಲ, ಮನೇಲಿ ಒಂದು ತೊಟ್ಟೂ ಸೀಮೆಣ್ಣೆ ಇಲ್ಲ, ಎದ್ದು ಹೋಗ್ರಿ ಅಂದರು.

ರಾಯರು, 'ತಾಳೇ, ತಾಳೇ' ಅನ್ನುತ್ತ, ಎದ್ದು ಬಚ್ಚಲಮನೆಗೆ ಹೋಗಿ, ಬೇಗ ಬೇಗ ರೆಡಿಯಾದರು. ಪ್ಯಾಂಟೇರಿಸಿಕೊಂಡು ಹೋಗಿ ಪಕ್ಕದ ಬೀದಿಯಲ್ಲಿನ ಸೀಮೆಣ್ಣೆ ಸಾಲಿನಲ್ಲಿ ನಿಂತರು.

ಇನ್ನೂ ಕತ್ತಲು ಪೂರ್ತಿಯಾಗಿ ಹರಿದಿರಲಿಲ್ಲ. ಆದರೆ ತುಂಬ ದಿನಗಳಿಂದ ಕೊಡದೇ, ಕೊಡದೇ ಇದ್ದುದ್ದರಿಂದ ಸಿಕ್ಕಾಪಟ್ಟೆ ಜನ ಸೇರಿಬಿಟ್ಟು, ಯಾರು ಹತ್ತಿರ ಬಂದರೂ, 'ಸಾಲಿನಲ್ಲಿ ಬನ್ರಿ ರೀ, ಕ್ಯೂ' ಅಂತೆಲ್ಲ ಕೂಗುವರು.

ಹಾಗೂ ಹೀಗೂ ರಾಯರು, ಆ ಜನಜಂಗುಳಿಯಲ್ಲೂ ನುಗ್ಗಿ, ಎಣ್ಣೆ ಗಾಡಿಯ ಬಳಿ ಬಂದುನಿಂತು, ಚೀಟಿ ಬರೆಸಿ, ರಸೀತಿ ಹಾಕಿಸಿ, ಸೀಮೆಣ್ಣೆ ಹಾಕಿಸಿಕೊಳ್ಳಲು ನೋಡಿದರೆ, ಕ್ಯಾನೇ ಇಲ್ಲ! ಅದ್ಯಾಕೇ ಅಂದರೆ ಹಿಂದೆ ಎಲ್ಲೋ ಇಟ್ಟುಬಿಟ್ಟು ಮರೆತುಬಿಟ್ಟಿದ್ದರು; ಆತನಿಗೆ ಕಾಡಿ, ಬೇಡಿ, ಹಿಂದೆ ನಡೆದು ಕ್ಯಾನ್ ತಂದು ಸೀಮೆಣ್ಣೆ ಹಾಕಿಸಿಕೊಳ್ಳುತ್ತಿದ್ದಂತೆ, ಯಾರೋ, ''ಏನು ಪಾಂಡುರಂಗ ರಾಯರೇ, ಸೀಮೆಣ್ಣೆ ಸಿಕ್ಕಿತೇ'' ಅಂದರು.

ರಾಯರು ಸರಕ್ಕನೆ ಹಿಂದುಗಡೆ ತಿರುಗಿನೋಡಿದ್ದರಿಂದ ಸೀಮೆಣ್ಣೆಯ ಕ್ಯಾನು ಅಲ್ಲಾಡಿ, ಜೋಯ್ ಅಂತ ಸುರೀತಿದ್ದ ಸೀಮೆಣ್ಣೆ ಕ್ಯಾನಿನ ಮೇಲೆಲ್ಲ ಸಿಡಿದು, ರಾಯರ ಕಾಲು, ಪ್ಯಾಂಟು, ಶರ್ಟ್‌ಗೆಲ್ಲ ಆಗಿಹೋಯಿತು. ಆ ಗಾಡಿಯವನು, ''ಸಾರ್, ತಿರುಗಬೇಡಿ ಸಾರ್'' ಅಂದು, ''ನೋಡಿ, ಕಾಲು ಲೀಟರಷ್ಟು ಚೆಲ್ಲೀಹೋಯ್ತಲ್ಲ'' ಅಂದ. ಪಕ್ಕದಲ್ಲೇ, ಸೀಮೆಣ್ಣೆ ಕಾರ್ಡಿಲ್ಲದೆ, 'ಒಂದು ಲೀಟರ್ ಕೊಡಣ್ಣ, ಬೆಳಿಗ್ಗೇಯಿಂದ ನಿಂತಿವ್ನಿ' ಅಂತ ಗಿಂಜುತ್ತಿದ್ದ ಮುದುಕಿಯೊಂದು, 'ಸೀಮೆಣ್ಣೆಗೆ ಅಂತ ಸಾಯ್ತಾ ಇದ್ದೀನಿ, ಈ ಯಪ್ಪ ಹಿಂಗೆಲ್ಲ ಚೆಲ್ತಾ ಐತೆ ನೋಡಿ' ಅಂತ ಬೇರೆಯವರಿಗೆಲ್ಲ ನ್ಯಾಯ ಹೇಳಿದಳು.

ರಾಯರು ಮತ್ತೆ ಹಿಂದೆ ತಿರುಗಿನೋಡಿದರೆ, ಆ ಪ್ರಶ್ನೆ ಕೇಳಿದವ ಕಾಣಲೇ ಇಲ್ಲ. ಪಾಂಡುರಂಗರಾಯರಂತೆ, ಪಾಂಡುರಂಗರಾಯ. ಇವರಪ್ಪ ಪಾಂಡುರಂಗರಾಯ.

ಸರಿಯಾಗಿ ಹೆಸರೂ ತಿಳಿದಿರಲ್ಲ, ಮಾತು ಬೇರೆ ಆಡ್ತಾನೆ. ನಂಗೆ ಸೀಮೆಣ್ಣೆ ಸಿಕ್ಕಲಿ, ಬಿಡಲಿ, ಇವರ ತಾತನ ಮನೆ ಗಂಟು ಹೋಯ್ತೆ ಅಂತ ರೇಗಿದರು ರಾಯರು.

ಮನೆ ತಲುಪುತ್ತಿದ್ದಂತೆ, ರಾಯರು, ಸೀಮೆಣ್ಣೆ ಟಿನ್ನನ್ನು ಅದರ ಜಾಗದಲ್ಲಿಟ್ಟು, ''ನೋಡು, ಸ್ವಲ್ಪ ಮಜ್ಜಿಗೆ ಕೈಗೆ ಹಾಕು'' ಅಂದರು. ಅವರ ಧರ್ಮಪತ್ನಿ, ''ಅಯ್ಯಯ್ಯೋ, ನಿಮಗೇಂತ ಕಾಫಿ ಮಾಡಿಟ್ಟದೀನಲ್ರಿ, ಏಕೆ ಮಜ್ಜಿಗೆ? ಹೊಟ್ಟೆ ಸರಿ ಇಲ್ಲವೇ; ಅದಕ್ಕೇ ಹೇಳಿದ್ದು, ರಾತ್ರಿ ಹಾಳು ಮೂಳು ತಿನ್ನಬೇಡಿ ಅಂತ'' ಅಂದರು. ರಾಯರಿಗೆ ಕೋಪ ನೆತ್ತಿಗೇರಿ, ''ಕುಡಿಯೋಕ್ಕಲ್ಲವೇ ಕೇಳಿದ್ದು, ಕೈ ತೊಳೆಯೋಕ್ಕೇ. ಕೈಯೆಲ್ಲ ಸೀಮೆಣ್ಣೆ ವಾಸನೆ. ಮಜ್ಜಿಗೇಲಿ ಕೈ ತೊಳೆದರೆ ವಾಸನೆ ಹೋಗುತ್ತೆ ಅಂತ'' ಅಂದು, ಹಾಕಿಸಿಕೊಂಡು ಕೈತೊಳೆದರು. ''ಕಾಫಿ ಕೊಡು ಮತ್ತೆ'', ಅಂದು ಕಾಫಿ ಕುಡೀತಾ ಕೂತರು. ಹಾಗೇ ತಮ್ಮ ಕುಟುಂಬಕ್ಕೆ ವರದಿ ಕೊಟ್ಟರು: ನೋಡು, ಸೀಮೆಣ್ಣೆ ಹಾಕಿಸಿಕೊಳ್ತಾ ಇದ್ದಾಗ ಅದ್ಯಾವನೋ ಮುಂಡೇಮಗ 'ಸೀಮೆಣ್ಣೆ ಹಾಕಿಸಿಕೊಂಡಿರೇನ್ರಿ, ಪಾಂಡುರಂಗರಾಯ್ರೇ' ಅಂತ ಕೇಳಿ, ನಾನು ಸೀಮೆಣ್ಣೆ ಚೆಲ್ಲೋ ಹಾಗೆ ಮಾಡಿದ ಅಂದರು. ''ಸರಿ, ಏನಾಯ್ತು? ಯಾರೋ ಅಂತ ಅಂದುಕೊಂಡು ಕೇಳ್ದ ಅಂತ ಕಾಣುತ್ತೆ, ಸಾಲದ್ದಕ್ಕೆ ಕತ್ತಲು ಕತ್ತಲಲ್ಲವೇ, ನೀವ್ಯಾರೋ ಅಂತ ಅಂದುಕೊಂಡ ಅನ್ನಿಸುತ್ತೇರೀ, ಎದ್ದು ಮಾರ್ಕೆಟಿಂದ ಏನಾದರೂ ಒಳ್ಳೇ ತರಕಾರಿ ಹಿಡಕೊಂಡು ಬನ್ನೀ'' ಅಂತ ಅಮ್ಮಾವರು ಅಪ್ಪಣೆ ಕೊಡಿಸಿದರು.

ರಾಯರು ತಿಂಡಿ ತಿಂದು, ಮತ್ತೊಮ್ಮೆ ಕಾಫಿ ಕುಡಿದು, ಸೈಕಲ್ಲೇರಿ ಮಾರ್ಕೆಟ್ಟಿಗೆ ನಡೆದರು. ತರಕಾರಿ ಎಲ್ಲ ತೂಗೊಂಡು ಹೊರಗಡೆ ಬರ್ತಾ, ಹೂವಿನೋಳ ಹತ್ತಿರ ಅರ್ಧ ಮಾರು ಮಲ್ಲಿಗೆ ವ್ಯಾಪಾರ ಮಾಡ್ತಾ ಇದ್ದಹಾಗೆ, ''ಏನು ರಾಯರೂ, ಏನ್ಸಮಾಚಾರ?'' ಅಂತ ದನಿ ಕೇಳಿಸಿತು. ರಾಯರಿಗೆ ತಮ್ಮ ಬೆಳಗಿನ ಅನುಭವ ಮರುಕಳಿಸಿ ಜಾಗರೂಕತೆಯಿಂದ ತಿರುಗಿನೋಡಿದರೆ, ತಮ ಜೊತೆ ಕೆಲಸ ಮಾಡುತ್ತಿದ್ದ ಚಂದ್ರಪ್ಪನೇ ''ಓಹೋಹೋ, ಚಂದ್ರಪ್ಪ ಹೇಗಿದ್ದೀ? ಮಕ್ಕಳುಮರಿ ಎಲ್ಲಾ ಸೌಖ್ಯ ತಾನೇ'' ಅಂದರು ಆತ, ''ಸಾರ್, ನೀವು ಸಿಕ್ಕಿದ್ದು ಒಳ್ಳೇದೇ ಆಯ್ತು ನನ್ನ ಮಗ ಒಂದು ಚಿಕ್ಕ ಮನೆ ಕಟ್ಟಿದ್ದಾನೆ ದಟ್ಟಗಳ್ಳಿನಲ್ಲಿ, ಎಮ್ ಬ್ಲಾಕು. ಖಂಡಿತ ಗೃಹ ಪ್ರವೇಶಕ್ಕೆ ಬರಬೇಕು'' ಅಂದು ರಾಯರ ಹೆಸರನ್ನು ಇನ್ವಿಟೇಷನ್ ಮೇಲೆ ಗೀಚಿ ಕೊಟ್ಟ. ರಾಯರು, ''ಖಂಡಿತ ಬರ್ತೀನಿ, ಖಂಡಿತ'' ಅಂದು ಇಸಕೊಂಡು, ಸೈಕಲ್ ಹೊಡೆಯುತ್ತಾ ವಾಪಸ್ಸಾದರು. ''ನೋಡು, ತರಕಾರಿ ಎಲ್ಲ ಎತ್ತಿಟ್ಟುಕೊಂಡು ಬ್ಯಾಗ್ ವಾಪಸ್ ಕೊಡು ಈಗಲೇ, ನೀನು ಎಲ್ಲೆಲ್ಲೋ ಬಿಸಾಕಿಬಿಡ್ತೀಯಾ ಆಮೇಲೆ ಬೇಕಾದಾಗ ಸಿಗಲ್ಲ'' ಅಂತಲೂ ಅಂದಿದ್ದಕ್ಕೆ ಆಕೆ, ''ಕೊಡ್ತೀನಿ ಸುಮ್ನಿರಿ, ಅದೇನು ಬ್ಯಾಗೂ ಬ್ಯಾಗೂ ಅಂತ ಹಾರಾಡ್ತೀರಿ'' ಅಂದರು ನಿನಗೇನು ಗೊತ್ತು ಬೇಕಾದಾಗ ಸಿಗದಿದ್ರೆ? ಅಂದು ರಾಯರು ರೂಮಿಗೆ ಬಟ್ಟೆಬದಲಾಯಿಸಲು ನಡೆದರು.

ರಾಯರ ಕುಟುಂಬ, 'ರೀ, ಅದ್ಯಾರದ್ರಿ ಇನ್ವಿಟೇಷನ್ ಇಸಕೊಂಡು ಬಂದೀದೀರಲ್ಲ' ಅಂದರು. 'ಯಾರದ್ಯಾಕೆ? ಮಾರ್ಕೆಟನಲ್ಲಿ ಅ ಯುಡಿಸಿ ಚಂದ್ರಪ್ಪ ಸಿಕ್ಕಿದ್ದ. ಗೃಹಪ್ರವೇಶ ಅಂತೆ ಇನ್ವಿಟೇಷನ್ ಕೊಟ್ಟಿದ್ದಾನ' ಅಂದರು ರಾಯರು.

'ಅದು ಸರೀರಿ, ಅದ್ಯಾಕ್ರಿ ಪಾಂಡುರಂಗ ರಾವ್ ಅಂತ ನಿಮ್ಮ ಹೆಸರು ಬರೆದೀದಾನಲ್ರೀ' ಅಂದರು ಕುಟುಂಬ. ರಾಯರಿಗೂ ಬೆಳಗಿನ ಘಟನೆ ನೆನಪಾಗಿ, ಕೋಪ ನೆತ್ತಿಗೇರಿತು. ಅವನಿಗೆ ತಲೆಗಿಲೆ ಕೆಟ್ಟಿದೆ ಅಂತ ಕಾಣುತ್ತೆ. ಪಾಂಡು ರಂಗರಾವ್ ಅಂತೆ, ಪಾಂಡುರಂಗರಾವ್ ಅವರಪ್ಪ ಅವರತಾತ ಪಾಂಡುರಂಗರಾವ್ ಅಂತ ಹಾರಾಡಿದರು.

ಆಕೆ, 'ಸಮಾಧಾನ ಮಾಡಿಕೊಳ್ರೀ, ಇಲ್ಲ ಸುಮ್ಮನೆ ಬಿಪಿ ಜಾಸ್ತಿ ಆಗುತ್ತೆ. ಏನೋ

ಕನ್‌ಫ್ಯೂಸ್ ಮಾಡಿಕೊಂಡ ಅಂತ ಕಾಣುತ್ತೆ. ಅದೇ ಬೆಳಿಗ್ಗೆ ಸೀಮೆಣ್ಣೆ ತರೋವಾಗಲೂ ಆಯ್ತು ಅಂದರಲ್ಲ, ಹಾಗೇ ಈಗಲೂ ಆಗಿರಬೇಕು ಅಷ್ಟೇ' ಅಂದರು.

ರಾಯರು ಉರಿ ಉರಿ ಅನ್ನುತ್ತಲೇ ಇದ್ದರು. ಹಾಗೇ ಊಟ ಮಾಡಿ ಮೈ ಚಾಚಿದರು. ಇನ್ನೇನು ನಿದ್ದೆ ಮಂಪರು. ಅಷ್ಟರಲ್ಲಿ, ಬೀದಿಯಿಂದ, 'ರಾಯರೇ, ರಾಯರೇ, ಪೋಸ್ಟ್' ಅಂತ ಪೋಸ್ಟ್‌ಮನ್ನಿನ ದನಿ ಕೇಳಿಸಿತು. ಯಾರ ಮನೆಗೋ, ಏನೋ ಅಂದುಕೊಂಡು ರಾಯರು, ಅರೆನಿದ್ದೆಕಣ್ಣಿನಲ್ಲೇ, ಮಲಗಿದ್ದ ಕಡೆಯಿಂದಲೇ, 'ಲೇ, ಅದೇನು ನೋಡ್ತೀಯಾ' ಅಂದರೆ ಅಡಿಗೆ ಮನೆಯಲ್ಲೇ ಚಕ್ಕಳಮಕ್ಕಳ ಹಾಕಿಕೊಂಡು ಊಟಮಾಡುತ್ತಿದ್ದ ಆಕೆ, 'ರೀ, ಏಗಿ ಏಗಿ ಸಾಕಾಗಿ ಹೋಗಿದೆ. ಒಂದು ತುತ್ತು ಊಟ ಮಾಡಕ್ಕೂ ಪುರೂಸೊತ್ತಿಲ್ಲ ಅಂದರೆ ಹೇಗೆ? ಆಮೇಲೆ ನಿದ್ದೆ ಮಾಡೋರಂತೆ, ಅದ್ಯಾರದ್ದು ಪೋಸ್ಟ್ ನೀವೇ ನೋಡಿ ಬೇಕಾದರೆ' ಅಂತ ಗುಡುಗಿದರು. ರಾಯರು ಗೊಣಗಿಕೊಂಡೇ ನಡೆದು, ಬಾಗಿಲು ತೆಗೆದರೆ, ಪೋಸ್ಟ್‌ಮನ್ನು ಕಾಂಪೌಂಡಿನ ಗೇಟಿನ ಹತ್ತಿರವೇ ನಿಂತಿದ್ದು, ರಾಯರೇ, ರಿಜಿಸ್ಟರ್ಡ್ ಪೋಸ್ಟ್ ನೋಡಿ ಅಂತ ಕಾಗದ ಇಟ್ಟ.

ರಾಯರು ಕಾಗದ ನೋಡಿದರು. ಅರ್ರೇ! ಯಾವುದೋ ಹೈದರಾಬಾದಿನಿಂದ ಬಂದಿರುವ ಕಾಗದ. ಯಾರದ್ದಿರಬಹುದು? ನಿಮ್ಮ ಎಕ್ಸ್‌ಪರ್ಟ್ ಒಪೀನಿಯನ್ ಬೇಕು ಅಂತ ಅಲ್ಲಿನ ಹೈಟೆಕ್ ಮುಖ್ಯಮಂತ್ರಿ, ಚಂದ್ರಬಾಬು ನಾಯುಡು ಕಾಗದ ಬರೆದಿರಬಹುದೇ ಅಂತ ತಮ್ಮನ್ನು ತಾವೇ ಕೇಳಿಕೊಂಡರು. ಆ ಯೋಚನೆಗೇ ನಗು ಬಂದುಬಿಟ್ಟಿತು. ಆ ಪೋಸ್ಟ್‌ಮನ್, 'ಸಾರ್ ಕಾಗದ ನಿಮ್ಮದೇ ಅಂತ ಕೇಳಿದರೆ ನಗ್ತಾ ಇದ್ದೀರಲ್ಲ. ನಿಮ್ಮದಾದರೆ ಇಲ್ಲಿ, ಇಕೋ, ಸೈನ್ ಮಾಡಿ' ಅಂದ. ರಾಯರು, ನನ್ನದಲ್ಲದೇ ನಿಮ್ಮಪ್ಪಂದಾ ಅಂತ ಅನ್ನಬೇಕೂ ಅಂದುಕೊಂಡರೂ, ಅನ್ನಲಾಗದೆ, ಪೆನ್ ಇಸಕೊಂಡು ಸೈನ್ ಮಾಡಲೆಂದು ರೆಡಿ ಆಗಿ, ಹಾಗೆ ಪತ್ರ ತೆಗೆದುಕೊಳ್ಳುವವರ ಸಹಿ ಅಂತ ಇರುವ ಕಡೆ ಸಹಿ ಹಾಕಲೆಂದು ನೋಡಿದರೆ, ಅರ್ರೇ, ಅಡ್ರೆಸ್ಸು, ಮನೆ ನಂಬರೂ, ಬೀದಿ, ಕ್ರಾಸೂ, ಊರು ಎಲ್ಲ ಸರಿಯಾಗೇ ಇದೆ. ಆದರೆ ಹೆಸರು ಮಾತ್ರ ಶ್ರೀ ಪಾಂಡುರಂಗರಾವ್ ಎಲ್.ಎಮ್.ಈ. ಅಂತ ಇದೆ. ಕ್ವಾಲಿಫಿಕೇಶನ್ ಸರಿಯಾಗೇ ಇದೆ. ಆದರೆ ಹೆಸರು? ರಾಯರಿಗೇಕೋ ತುಂಬಾ ಕಸಿವಿಸಿಯಾಯ್ತು. ಪೋಸ್ಟ್‌ಮನ್‌ನ ಕಡೆ ನೋಡಿದರೆ, ಆತ ಇವರ ಮುಖವನ್ನೇ ನೋಡುತ್ತಾ, ಸೈಕಲ್ ಮೇಲೆ ನಿಂತು ಕಾಲಿನಿಂದಲೇ ಬ್ಯಾಲೆನ್ಸ್ ಮಾಡಿಕೊಳ್ಳುತ್ತಿದ್ದು, 'ಯಾಕೆ ಸಾರ್, ಏನಾಯ್ತು' ಅಂದ. ರಾಯರು, 'ರ್‍ರೀ, ಅದ್ಯಾರದ್ದೋ ಕಾಗದ ನನಗೆ ತಂದು ಕೊಟ್ಟಿದ್ದೀರಲ್ರೀ, ಅದ್ಯಾರೋ ಪಾಂಡುರಂಗ ರಾವ್ ಅನ್ನೋನ್ಗೆ ಬಂದಿರೋ ಕಾಗದ ರೀ ಇದು' ಅಂತ ಅಂದರೆ, ಆತ, 'ಹೌದೆ, ಅರ್ರೇ ಹೌದು, ಆದರೆ ನಿಮ್ಮ ಅಡ್ರೆಸ್ಸಿಗೇ ಬಂದಿದೆಯಲ್ಲ. ಫರ್‌ಫೆಕ್ಟ್ ಆಗಿ, ಛೆ, ಛೆ ನಿಮ್ಮ ಹೆಸರೇನೇಳಿ' ಅಂತ ಅವರನ್ನೇ ಕೇಳಿದ. ರಾಯರ ಪತ್ನಿ ಇಷ್ಟು ಹೊತ್ತಿಗೆ ಊಟ ಮುಗಿಸಿದ್ದವರು, ಸೆರಗಿಗೇ ಒದ್ದೆ ಕೈ ಒರೆಸಿಕೊಳ್ಳುತ್ತ, 'ಅದ್ಯಾವುದೋ ಏನೋ ತೂಗೊಂಡು ಓದಿ ನೋಡಬಾರದೆ, ಯಾರೋ ನಿಮ್ಮ ಹೆಸರನ್ನು ತಪ್ಪಾಗಿ ಹಾಕಿಬಿಟ್ಟದ್ದಾರೆ ಅಷ್ಟೇ' ಅಂದರು.

ಹಾಗಾದರೆ ನಾನೇನು ಮಾಡಲಿ ಅಂದ ಪೋಸ್ಟ್‌ಮನ್ನು. 'ಮುಖ ಮೂರು ಕಡೆ ಮಾಡಿ ಮಣ್ಣು ತಿನ್ನು' ಅನ್ನೋಣವೇ ಅಂದುಕೊಂಡು ರಾಯರು', ಅದು ನಿನಗೇ ಗೊತ್ತಿರಬೇಕಪ್ಪ, ನನ್ನನ್ನು ಕೇಳಿದರೆ ಏನು ಪ್ರಯೋಜನ' ಅಂದು, ಗೇಟುಹಾಕಿ, ವಾಪಸ್ಸು ಮನೆ ಒಳಗೆ ಬಂದು, ದಿವಾನಿನ ಮೇಲೆಯೇ ಮೈಚಾಚಿದರು.



'ಅಲ್ಲ ಇದ್ಯಾವನು ಇವ ಪಾಂಡುರಂಗ ರಾಯ? ಬೆಳಗಿಂದ ನನಗೂ ಉತ್ತರ ಹೇಳಿ, ಹೇಳಿ ಸಾಕಾಗಿಬಿಟ್ಟದೆ. ಅವನು ಯಾರಿರ ಬಹುದು? ಲೆಟರ್ ತೆಗೆದುನೋಡಿದ್ರ, ಗೊತ್ತಾಗ್ತ ಇತ್ತೇನೋ, ಅವಳು ಹೇಳಿದ ಹಾಗೆ ಅಂದು ಕೊಂಡರು. ಅಂದುಕೊಳ್ಳುತ್ತಿದ್ದಂತೆ ಅವರಿಗೆ, ತಾವು ಚಿಕ್ಕವರಿದ್ದಾಗ ತನ್ನ ಅಮ್ಮನಿಗೆ 'ನನ್ನ ಹೆಸರು ಬದಲಾಯಿಸು, ನನಗೆ ವಾಸುದೇವರಾವ್ ಅನ್ನೋ ಹೆಸರು ಇಷ್ಟ ಇಲ್ಲ' ಅಂದು, ತಮ್ಮ ಶಾಲೆಯಲ್ಲಿದ್ದ ಸ್ನೇಹಿತರ ಹೆಸರನ್ನೆಲ್ಲ ಸೂಚಿಸು ತ್ತಿದ್ದುದು ನೆನಪಿಗೆ ಬಂದು ನಗು ಬಂದುಬಿಟ್ಟಿತು. ಅದೇನ್ರೀ, ನೀವೇ ಮುಸುಮುಸು ನಗ್ತಾ ಇದ್ದೀರಲ್ಲ ಅಂತ ಅವರ ಹೆಂಡತಿ ಕೇಳಿದ್ದಕ್ಕೆ, ಏನು ಇಲ್ಲ ಬಿಡೆ ಏನೋ ಜ್ಞಾಪಿಸಿಕೊಂಡೆ. ನಗು ಬಂತು ಅಷ್ಟೇ, ಅಂದರು. ಆಕೆನೂ ಸುಮ್ಮನಿರಲಾರದೆ, ಅದ್ಯಾವಳನ್ನ ನೆನಸಿಕೊಂಡಿರೋ, ಸಂತೋಷ ಆಗಿಬಿಡ್ತು ಅಂತ ಕಾಣುತ್ತೆ ಅಂದರು. ಇಲ್ಲ ಕಣೇ ಅಂದಿದ್ದಕ್ಕೆ ನೀವು ಗಂಡಸರೆಲ್ಲ ಹೀಗೇನೇ, ನಂಗ ಗೊತ್ತಿಲ್ಲವಾ ಅಂದರು ಆಕೆ. ರಾಯರಿಗೆ ರಾತ್ರಿಯ ನಿದ್ದೆಯಲ್ಲೆಲ್ಲ ಇದೇ. ಕೆಲವು ಸಾರಿ ತಮ್ಮ ಹೆಸರು ವಾಸುದೇವರಾವ್, ಆದರೆ ಕೆಲವು ಸಾರಿ ಪಾಂಡುರಂಗರಾವ್, ವಾಸು, ಪಾಂಡು ಪಾಂಡು, ವಾಸು, ಹೀಗೆಯೇ. ಬೆಳಿಗ್ಗೆಯೂ, ಈ ಜಿಜ್ಞಾಸೆ ಮುಗಿಯದೇ ಹೋದಾಗ, ಕಾ ಕುಡಿದು, ತಮ್ಮ ಹಳೆಯ ರಿಕಾರ್ಡುಗಳನ್ನೆಲ್ಲ ಬಿ ಕೂತುಕೊಂಡರು. ಬೆಳಬೆಳಗೇನೇ ತೆಗೆದ್ರ, ನಿವ ಹಡಪಾನಾ? ಅನ್ನಿಸಿಕೊಂಡರು ಬೇರೆ. ಹೂ ಕಣೇ, ಸುಮ್ಮನಿರೆ ಅಂದರು ರಾಯರು.

ಯಾವುದ್ಯಾವುದೋ ಡಾಕ್ಯುಮೆಂಟ್‌ಗ ನ್ನೆಲ್ಲ ತೆಗೆದು ನೋಡುತ್ತಿದ್ದಂತೆ, ಆ ಗಂಟಿನೊ ಗಡೆಯಿಂದ ಟಪ್ ಅಂತ ಯಾವುದೋ ಪುಸ್ತ ಬಿದ್ದಹಾಗಾಯಿತು. ನೋಡಿದರೆ, ಅರ್ರೇ! ತಮ ಬ್ಯಾಂಕಿನ ಪಾಸ್‌ಬುಕ್ಕು, ಎಫ್‌ಡೀದು. ಅದ ಮೆಚ್ಯೂರ್ ಆಗಿ ಹದಿನೈದು ದಿನ ಆದರೂ ಆಗಿದ್ದಿರಬೇಕು. ರಾಯರಿಗೆ ಅದು ಮೆಚ್ಯೂರ ಆದ ದಿನ ಯಾವುದೂ ಅಂತ ಜ್ಞಾಪಕ ಇದ್ದರೂ ಎಷ್ಟು ಹುಡುಕಿದರೂ ಆ ಪಾಸ್‌ಬುಕ್ ಸಿಗ ಸುಮ್ಮನೆ ಹಾರಾಡಿದ್ದರು, ಪತ್ನಿಯ ಮೇಲ ಕೆಲಸದವಳ ಮೇಲೆ. ಕಡೇಗೆ ತಮ್ಮ ಮೇಲೆಯ ರೇಗಿಕೊಂಡಿದ್ದರು. ನೋಡಿದಿರಾ, ನಿವ

ಕಡತದೊಳಗೇ ಇಟ್ಟುಕೊಂಡು ನನ್ನ ಮೇಲೆ ಹಾರಾಡಿದ್ದಿರಲ್ಲ ಅಂತೆಲ್ಲ ಅಮ್ಮನವರು ರೇಗಾಡಿ ತಮ್ಮ ಕೋಪವೆಲ್ಲ ತೀರಿಸಿಕೊಂಡರು.

ರಾಯರು ತಿಂಡಿ ತಿಂದು, ಪಾಸ್‌ಬುಕ್ ಅನ್ನು ಜೋಪಾನವಾಗಿ ಇಟ್ಟುಕೊಂಡು ಬ್ಯಾಂಕಿನತ್ತ ನಡೆದರು. ಕೌಂಟರಿನಲ್ಲಿ ಎಫ್‌ಡೀದು ಪಾಸ್‌ಬುಕ್ ಇಟ್ಟು, ಮೆಚೂರ್ ಆಗಿದೆ ನೋಡಿ ಅಂದರು. ಖಾತ್ರಿಪಡಿಸಿಕೊಂಡ ಆತ, 'ಸಾರ್ ಚಲನ್‌ನ್ನು ತುಂಬಿಸಿಬಿಡಿ. ಎಸ್.ಬಿಗೇ ಹಾಕಲೋ ಅಥವಾ ಎಫ್‌ಡಿನೋ' ಅಂದ. ರಾಯರು 'ಸ್ವಲ್ಪ ದಿನ ಎಸ್‌ಬೀಲೇ ಇರಲಿ, ಮುಂದಿನ ವಾರ ಡಿಸೈಡ್ ಮಾಡ್ತೀನಿ' ಅಂದರು. ನಿಮ್ಮಿಷ್ಟ ಸಾರ್ ಅಂದು ಆತ, ಒಂದೈದು ನಿಮಿಷ ಕೂತಿರಿ ಸಾರ್ ಅಂದು, ಹಾಗೇ ಸೋಫಾದ ಮೇಲೆ ಕೂಡಿಸಿದ. ಹಾಗೇ ಲೆಡ್ಜರ್‌ನಲ್ಲಿ ಎಂಟ್ರಿಮಾಡಿಸಿ, ಕೌಂಟರ್‌ಸೈನ್‌ಗೆ ಅಂತ ಮ್ಯಾನೇಜರ್ ಹತ್ತಿರ ಕಳುಹಿಸಿದ. ರಾಯರು ಕೂತ ಹಾಗೇ, ಪೇಪರ್ ಓದುತ್ತ, ಇಲ್ಲೇನು ಆಗ್ತಾ ಇದೇ ಅಂತನೂ ನೋಡ್ತಾ ಇದ್ದರು.

ಮ್ಯಾನೇಜರು, ಲೆಡ್ಜರ್ ನೋಡಿದರು. ಇನ್ನೇನು ಸೈನ್ ಮಾಡಬೇಕೂ ಅನ್ನೋ ಹೊತ್ತಿಗೆ ಅವರ ಗಮನ ಪಕ್ಕದಲ್ಲಿ ಹರಿಯಿತು. ಮುಖ ಗಂಟಿಕ್ಕಿ, ತಕ್ಷಣ ಕೌಂಟರಿನಲ್ಲಿದ್ದ ಕ್ಲರ್ಕ್‌ನ ಕರೆಸಿದರು.

ಏನಾಯ್ತಪ್ಪ ಅಂದುಕೊಂಡರು ರಾಯರು. ತಾನೇನಾದರೂ ಈ ಎಫ್‌ಡಿನಲ್ಲಿ ತಪ್ಪು ಮಾಡಿದೀನ್ಯೇ? ಅಥವಾ ಆ ನೋಟುಗಳು ಕಳ್ಳತನದ್ದಾಗಿದ್ದು ಈಗ ಗುರುತಾಗಿದೆಯೇ? ರಾಯರಿಗೆ ಆ ಕ್ಷಣ, ತಮ್ಮನ್ನು ಗರುಡ ಜೀಪಿನಲ್ಲಿ ಬಂದ ಸ್ಕ್ವಾಡು ಅರೆಸ್ಟ್ ಮಾಡುತ್ತಿರುವುದಾಗಿಯೂ, ತಾವು ನಾನೇನೂ ಮಾಡಿಲ್ಲ ಅಂತ ಅಂಗಲಾಚುತ್ತಿದ್ದುದೂ ಭ್ರಮಿಸಿ ಬೆವರಿಳಿದಂತಾಯಿತು. ತಮಗರಿವಿಲ್ಲದಂತೆಯೇ ರಾಯರು ಎದ್ದು ನಿಲ್ಲುವುದಕ್ಕೂ, ಅಟೆಂಡರು, ಹತ್ತಿರ ಬಂದು, 'ಸಾರ್', ಮ್ಯಾನೇಜರ್ ಕರೀತಿದ್ದಾರೆ' ಅನ್ನುವುದಕ್ಕೂ ಸರಿ ಹೋಯಿತು. ರಾಯರ ಜಂಘಾಬಲವೇ ಉಡುಗಿ ಹೋಯಿತು. ಅಟೆಂಡರು, ಮತ್ತೆ 'ಸಾರ್' ಅಂದಾಗಲೇ ರಾಯರು ವಾಸ್ತವ ಪ್ರಪಂಚಕ್ಕೆ ಬಂದು ಮ್ಯಾನೇಜರ್ ಛೇಂಬರಿಗೆ ನಡೆದರು. ಒಳಗಡೆ ಕಾಲಿಟ್ಟ ಹಾಗೇ, ಆ ಮ್ಯಾನೇಜರು, ಯಾವ ಮಾತನ್ನೂ ಆಡದೆ, ರಾಯರು ಇತ್ತಿದ್ದ ಪಾಸ್‌ಬುಕ್, ಛಲನ್ನನ್ನು ಪಕ್ಕಪಕ್ಕದಲ್ಲಿಟ್ಟು, 'ಇದೇನು ರಾಯರೇ, ತಮಾಷೆ ಮಾಡ್ತಿದ್ದೀರಾ' ಅಂದರು,

ರಾಯರು, 'ಯಾಕೆ, ಏನು?' ಅನ್ನುತ್ತ ಟೇಬಲ್ಲಿನ ಮೇಲೆ ಕಣ್ಣಾಡಿಸಿದರು. ಎಲ್ಲ ಸರಿಯಾಗಿದೆಯಲ್ಲ ಅಂದರೆ ಆತ, 'ಸರಿಯಾಗಿ ನೋಡಿ ಸಾರ್' ಅಂದ. ರಾಯರು ಮತ್ತೆ ತಮ್ಮ ಪಾಸ್‌ಬುಕ್ಕನ್ನು, ಛಲನ್‌ನ್ನು ನೋಡಿದರು. ಏನು ಅಂದರು.

ಕ್ಲರ್ಕು, 'ನಿಮ್ಮ ಸೈನ್ ನೋಡಿ ಸಾರ್' ಅಂದ.

ರಾಯರು ನೋಡಿದರು. ತಮ್ಮದೇ ಸೈನು, ಗುಂಡಾಗಿ-ಲಕ್ಷಣವಾಗಿ 'ಪಾಂಡುರಂಗರಾವ್' ಅಂತ ಸೈನ್ ಮಾಡಿದ್ದಾರೆ-ತಾವೇ! ತಮ್ಮ ಪೆನ್ನಲ್ಲೇ! ದಂಗಾಗಿ ಹಾಗೇ ನಿಂತರು.



ಪ್ರೀತಿಯಿಂದ

ಕೃಷ್ಣಮೂರ್ತಿ






# ಕೊಟ್ಟದ್ದು ತನಗೆ ಬಚ್ಚಿಟ್ಟದ್ದೂ ತನಗೆ!

ನಮಗ ಬಾಡಿಗೆ ಕೊಟ್ಟ ಮಾಲಕರ ತವರೂರು, ನಮ್ಮೂರು ಒಂದೇ. ರಜೆಗೆ ಊರಿಗೆ ಹೊರಟರೆ ಅವರ ಒಂದಿಷ್ಟು ಸಾಮಾನು ಯಾವಾಗಲೂ ರೆಡಿ. ಒಂದೊಂದು ಸಲ, ಅವಸರದಿಂದ ಮುಂಜಾನ ಹೋಗಿ ಸಾಯಂಕಾಲ ಬರುವುದೆಂದು ಸೂಕ್ಷ್ಮವಾಗಿ ಹೇಳಿದರೂ, ಗಡಬಡಿಸಿ ಒಂದು ಬ್ಯಾಗ ತಯಾ ಮಾಡಿಯೇಬಿಡವ್ರು. ಮಾಲಕರು ತವರಮನೆಗೆ ಸಾಗಿಸೋ ಸಾಮಾನುಗಳ ಜವಾಬ್ದಾರರಾಗಿ, ಮೈತುಂ ಕಣ್ಣಟಗೊಂಡು, ಕೊಟ್ಟ ಸಾಮಗ್ರಿಗಳನ್ನೆಲ್ಲಾ ಜೋಪಾನವಾಗಿ ಒಯ್ದು ಮುಟ್ಟಿಸುದರಾಗ ಬಸ್‌ನಲ್ಲಿ ನಿದ ಮಂಪರಿನ ಸೌಭಾಗ್ಯವೂ ಇಲ್ಲ ನಮಗೆ.

ಇದ ಹೀಂಗ ನಿರಂತರ ನಡದೇ ಇತ್ತು. ಆ ಕಡೆಯವರಿಂದ ಈ ಕಡೆಯವರಿಗೆ, ಈ ಕಡೆಯಿಂದ ಕಡೆಯವರಿಗೆ ತಂದುಕೊಡು ಕಾಯಕ ಖಾಯಂ ಆಗಿತ್ತು. ನಮಗ ಒಜ್ಜೆ ಮಾಡಕೋಬಾರದಂತ ನ ಸಾಮಾನ ಕಡಿಮೆ ಮಾಡಿಕೊಂಡ್ರೂ, ಅವರ ಸಾಮಾನ ಮಾತ್ರ ಜಾಸ್ತಿನೇ ಆಗಿರತಿದ್ದು.

ಒಂದು ಸಲ, ಅವರ ತವರ ಮನೆಯಿಂದ ಎರಡು ಹೊಸ ನಮೂನೆ ಸೀರಿ ಕೊಟ್ಟಕಳಿಸಿದ್ರು ಬಂದಕೂಡಲೇ ಕೊಡಬೇಕಂದ್ರ, ಅವರ ಮನೆಗೆ ನಾಲ್ಕೈದು ಜನ ಊರಿಂದ ಬಂದಿದ್ರು. ಗದ್ದಲದಾಗ ನಾನೆಲ್ಲಿ ಹೋಗೂದು? ಅವರಃ ನಮ್ಮ ಮನೆಗೆ ಬಂದು ತಗೊಂಡಹೋಗಲಿ ಅನಕೊಂಡು ಅದನ್ನ ಅಪ್ಪೂಟ್ ಮರೆತೇ ಬಿಟ್ಟೆ!

ಕೆಲ ನಾಲ್ಕೈದು ದಿವಸ ಬಿಟ್ಟು ಹವಾಸೇವನೆಗೆಂದು ಅವರು ಬಂದಾಗ ನೆನಪಾಗಿ, ಬೆಟ್ಟಿ ಬಿದ್ದು, ಸೀ ವಿಷಯ ಹೇಳಿ, ''ತಗೊಂಡು ಹೋಗರಿ, ನಾನು ಬರಬೇಕಂದ್ರ, ವೇಳೆ ಸಿಕ್ಕಿಲ್ಲ'' ಅಂತ ಅಳುಕುತ್ತಲೆ ಅಂದೆ. ಇನ್ನು ಅವರ ಗೊಣಗಾಟ ಖಾತ್ರಿ ಎಂದುಕೊಂಡಾಗ, ''ನೀ ಬರದೇ ಇದ್ದದ್ದು ಚಲೋ ಆಯ್ತು ಇನ್ನೂ ಎರಡು ದಿನಾ ನಿಮ್ಮನ್ಯಾಗ ಇರ್ಲಿ, ಈಗ ಒಯ್ಯಲಾರೆ, ನಮ್ಮ ನಾದಿನಿ ಬಂದಾಳು. ಆಕಿಯಂತ ಏನ ನೋಡಿದರೂ ತನಗೂ ಪಾಲ ಹೊಡಕೊದಕ್ಕ ಸಾಧಿಸತಾಳ. ಎಷ್ಟು ಕೊಟ್ಟರೂ ಕಡಿಮೆ, ಗಂಡ ಮನ್ಯಾಗ ಸಾಕಷ್ಟು ಶ್ರೀಮಂತ ಇದ್ದರೂ ತವರು ಮನೆ ಕಡೆದ ಆಸೆ ತಟ್ಟಿಲ್ಲ ಮಹಾರಾಯತಿಗೆ' ಅಂದರು ಈಗ ಬಂದದ್ದೂ ತಮ್ಮ ತವರ ಮನೆಯಿಂದ ಅನ್ನೋ ಎಚ್ಚರಿಕೆ ಇಲ್ಲದೆ ಸೀರಿ ಉಳಿಸಿಕೊಂಡೆ ಎನ್ನು ಹುಶಾರಿನೊಳಗ ಹೊರಟರು.



ಅಂದೇ ಕೊಡಬೇಕಾದದ್ದನ್ನು ಕೊಡದ ನನ್ನ ತಪ್ಪು, ಅವರಿಗೆ ಒಳ್ಳೆಯದೇ ಮಾಡಿತು ಆಮ್ಯಾಲ, ನಾದಿನಿ ಹೋದ ಮುಂದಿನ ತಾಸಿನೊಳಗ ಬಂದು ಸೀರಿ ತೆಗೆದುಕೊಂಡ ಹೋಗುವಾಗ, ನನಗಂತೂ ಸಾವಿರ ಸಲ ಒಳ್ಳೆಯದಾಗಲೆಂದು ಹರಸಿ, ಹಾರೈ ಖುಷಿಪಟಗೊಂಡರು.

**ವಿಜಯಾ ಧಡೇ**



ಬಿ.ಎಂ. ಬಶೀರ್

# ಹಲೋ... ಹಲೋ...



ಪ್ರೀತಿ ಸಂಯುಕ್ತಾ

ಅವೆಷ್ಟೋ ಬಂಧುತ್ವಗಳನ್ನು ಬಚ್ಚಿಟ್ಟುಕೊಂಡ ಅಚ್ಚ ಬಿಳಿ ಬಣ್ಣದ ಟೆಲಿಫೋನ್! ಹೀಗೆ, ಈ ಕತ್ತಲಲ್ಲಿ ನನ್ನ ಕೈ ಬಿಟ್ಟು ಹೋದ ವಿದ್ಯುತ್ ದೀಪಕ್ಕೆ ಪರ್ಯಾಯವಾಗಿ ಎನ್ನುವಂತೆ ಬೆಳಗುತ್ತಿತ್ತು. ಒಂದು ಭರವಸೆ ಇದ್ದಕ್ಕಿದ್ದಂತೆ ನನ್ನ ಆತ್ಮವನ್ನು ತಟ್ಟಿದಂತಾಗಿ, ನೆಮ್ಮದಿಯ ಉಸಿರುಬಿಟ್ಟೆ.

ರಿಸೀವರ್ ತಾಯಿಯ ಮಡಿಲಲ್ಲಿ ನಿದ್ದೆ ಹೋದ ಮಗುವಿನಂತೆ ಮಲಗಿತ್ತು. ಉರಿಯುತ್ತಿರುವ ಮೊಂಬತ್ತಿಯ ಬೆಳಕಿನಲ್ಲಿ ಅದು ಪ್ರತಿಫಲನಗೊಳ್ಳುತ್ತಾ, ನಿಧಾನಕ್ಕೆ, ಶಿಲುಬೆಯಿಂದಿಳಿಸಿದ ರಕ್ತಸಿಕ್ತ ಯೇಸುವನ್ನು ಮಡಿಲಲ್ಲಿರಿಸಿದ ಮರಿಯಾಳ ಚಿತ್ರದಂತೆ... ಪಕ್ಕನೆ ರಿಸೀವರ್ ಎತ್ತಿ ಕಿವಿಗೆ ಹಿಡಿದೆ. ನಿದ್ದೆಗಣ್ಣಲ್ಲಿರುವ ತಾಯೊಬ್ಬಳು ಜೋಗುಳವನ್ನು ಗುನುಗುನಿಸುತ್ತಿರುವಂತೆ... ಸ್ಮಶಾನದಂತಹ ಆ ರಾತ್ರಿಯೂ ಕೂಡ ಆ ಜೋಗುಳಕ್ಕೆ ತನ್ನನ್ನು ಒಪ್ಪಿಸಿಕೊಂಡಿರುವಂತೆ ಅನ್ನಿಸಿ, ಜೋಗುಳಕ್ಕೆ ಮನಸಿಟ್ಟೆ. ಆ ಹಾಡು ನನಗೆ ಮಾತ್ರ ಸ್ಪಷ್ಟವಾಗುತ್ತಿಲ್ಲ ಅನ್ನಿಸಿತು. ಆತಂಕದಲ್ಲಿ ಕಿವಿಗೆ ಇನ್ನಷ್ಟು ಒತ್ತಿ ಹಿಡಿದೆ. ಕದ್ದು ಕೇಳುವ ನನ್ನ ದುರಾಸೆಯನ್ನು ಆ ತಾಯಿ ಅರಿತಳೋ ಎನ್ನುವಂತೆ, ಜೋಗುಳ ಇದ್ದಕ್ಕಿದ್ದಂತೆ ಕಡಿದು ಹೋಯಿತು. ಕಡಿದ ತಂತಿಯನ್ನು ಮತ್ತೆ ಜೋಡಿಸಿದೆ. ಜೊತೆಗೆ, ತೀರಾ ಸಹಜ ಎನ್ನುವಂತೆ, ಕೈಗೆ ದಕ್ಕಿದ ಮೂರು ಅಂಕಿಗಳನ್ನು ಅದುಮಿದೆ. ಊಹುಂ... ರಾಗದ ಜಾಡು ಸಿಗದೆ ಚಡಪಡಿಸುವ ಹಾಡುಗಾರನಂತೆ ನನ್ನೆದೆ ತಡಪಡಿಸತೊಡಗಿತು. ಮತ್ತೊಮ್ಮೆ ಅದೇ ಅಂಕಿಯ



ಅಪೂರ್ವ

ಗುಂಡಿಗಳನ್ನು ಅದುಮಿದೆ. ಈಗ 'ನೀವು ಅದುಮಿದ ಅಂಕಿ ಸರಿಯಿಲ್ಲ' ಎಂಬ ಹೆಣ್ಣಿನ ಮೃದು ದನಿ ಕೇಳಿಸಿತು. ಅದು ನನಗೆ, 'ಸರಿಯಿರುವ ಅಂಕಿ ಬೇರೆಯಿದೆ' ಎಂದು ನನ್ನನ್ನು ತಿದ್ದುವಂತೆ ಕೇಳಿಸಿತು. ಸುಮ್ಮನೆ ಅದೇ ಅಂಕಿಗೆ ಇನ್ನೆರಡು ಅಂಕಿಗಳನ್ನು ಸೇರಿಸಿ ಅದುಮತೊಡಗಿದೆ.

ಇದ್ದಕ್ಕಿದ್ದಂತೆ, ಇನ್ನಾವುದೋ ಒಂದು ತೀರ ಸ್ಪಂದಿಸತೊಡಗಿತು. ಒಂದು ಸಣ್ಣ ಮಗು ಚೀರುವಂತೆ, ಆ ತೀರದಲ್ಲಿ ಟೆಲಿಫೋನ್ ರಿಂಗಾಗತೊಡಗಿತು. ಒಮ್ಮೆಲೆ ಇಟ್ಟುಬಿಡಬೇಕೆನಿಸಿತು. ದುರಾಸೆಯೊಂದು, 'ಬೇಡ ಬೇಡ' ಎಂದು ಚೀರುತ್ತಿತ್ತು. ಬೇಕು ಬೇಡಗಳ ತಳಮಳದ ನಡುವೆ, ಅದು ರಿಂಗಾಗುತ್ತಲೇ ಇರಲಿ, ನಾನು ಹೀಗೆಯೇ ಕಾಯುತ್ತಿರಬೇಕು ಅನ್ನಿಸಿತು. ಯಾರೂ ಎತ್ತಲೇ ಬಾರದು ಮತ್ತು ನಾನು ಹೀಗೆಯೇ, ಯಾರಾದರೂ ಎತ್ತಿಯಾರು ಎಂಬಂತೆ ಕಾಯುತ್ತಿರಬೇಕು ಎನ್ನುವ ವಿಚಿತ್ರ ಆಸೆ ಹುಟ್ಟಿತು.

ಆದರೆ ಇದ್ದಕ್ಕಿದ್ದಂತೆಯೇ ಆ ತೀರ 'ಹಲೋ' ಎಂದು ಧ್ವನಿಸಿತು. ನನ್ನ ಆಸೆ, ದುರಾಸೆಯೆಲ್ಲವನ್ನು ಗ್ರಹೀತದಲ್ಲಿಟ್ಟು, ಪಿಸುಗುಟ್ಟುವಂತೆ, ಮೆದುವಾಗಿ, 'ಹಲೋ' ಎಂದು ಮಗುವೊಂದು ಉತ್ತರಕ್ಕಾಗಿ ಕಾಯತೊಡಗಿತು. ನಾನು ಕಂಪಿಸಿ, ಏನೊಂದೂ ಹೇಳಲಾರದಾದೆ. ನನ್ನ ಮೌನ ತೀರದಾಚೆಯ ಮಗುವಿನ ಸಹನೆಯನ್ನು ಕೆಣಕಿರಬೇಕು. ''ಹಲೋ, ಯಾರು ಬೇಕು. ಡ್ಯಾಡಿ ಮಲಗಿದಾರೆ'', ಜೋರಿನಿಂದ ಅಂದಿತು.

''ಸಾರಿ, ರಾಂಗ್ ನಂಬರ್'' ಎಂದು ನಾನು ದಡಬಡಿಸಿ ಇನ್ನೇನು ಇಡಬೇಕೂ... ''ಅಲ್ಲೂ ಕರೆಂಟ್ ಹೋಗಿದೆಯಾ ಅಂಕಲ್?'' ಮಗು ಪ್ರಶ್ನಿಸಿ, ಸಾವಿರ ಉತ್ತರಗಳಿರುವ ನನ್ನೆದೆಯ ಭಾರವನ್ನೆಲ್ಲ ಇಳಿಸಿತು.

''ಹೌದು ಮರಿ. ಇಲ್ಲೂ ಬೆಳಕಿಲ್ಲ, ಎಲ್ಲ ಕತ್ತಲೆ'' ಎಂದೆ.

''ಕೆಇಬಿಯೋನಿಗೆ ಫೋನ್ ಮಾಡಿ ಜೋರು ಮಾಡ್ತೀರಾ ಅಂಕಲ್? ಕರೆಂಟಿಲ್ಲದೆ ಇದ್ರೆ ನನಗೆ ಭಯಾ ಆಗುತ್ತೆ. ಡ್ಯಾಡಿ ನಿದ್ದೆ ಮಾಡ್ಬಿಟ್ಟಿದ್ದಾರೆ''

ನನಗೆ ಆತಂಕದ ನಡುವೆಯೂ ನಗು ಬಂತು. ''ಹೂಂ ಮರಿ, ಈಗ್ಲೆ ಫೋನ್ ಮಾಡ್ತೀನಿ'' ಎಂದೆ.

''ಒಳ್ಳೆ ಅಂಕಲ್. ಫೋನ್ ಇಡ್ಲಾ, ಗುಡ್ ನೈಟ್''

''ಮರಿ... ನಿನ್ನ ಹೆಸ್ರು?'' ನಾನು ಕೇಳುವಷ್ಟರಲ್ಲಿ ಫೋನ್ ಇಟ್ಟ ಸದ್ದು. ಇದ್ದಕ್ಕಿದ್ದಂತೆ, ಮೊಂಬತ್ತಿಯ ಬೆಳಕನ್ನು ಎತ್ತಿ ಎಸೆಯುವ ಹಾಗೆ, ಕೋಣೆ ತುಂಬಾ ವಿದ್ಯುತ್ ಬೆಳಕು. ಕೋಣೆಯಲ್ಲಿ ಸ್ಫೋಟಿಸಿದ ಬೆಳಕು ಮೊಂಬತ್ತಿಯ ಕ್ಷಣಗಳನ್ನು ಅಸ್ಪಷ್ಟ ಮಾಡಿಬಿಟ್ಟಿತು.

ಆ ಕತ್ತಲಲ್ಲಿ ನಾನು ಕಂಡ ಟೆಲಿಫೋನ್, ಅದುಮಿದ ಅಂಕಿಗಳು, ಸಿಕ್ಕಿದ ಸಾಂತ್ವನಗಳು ಆ ಸ್ಫೋಟಕ್ಕೆ ದಿಕ್ಕಾಪಾಲಾಗಿಬಿಟ್ಟವು. ಬೆಳಕಲ್ಲೇ ಅವುಗಳಿಗಾಗಿ ತಡವರಿಸಿ, ತಡವರಿಸಿ ಹುಡುಕಾಡತೊಡಗಿದೆ. ನಾನು ಅದುಮಿದ ಅಂಕಿಗಳನ್ನು ಹುಡುಕಲೆಂದು, 'ರಿಸೀವರ್' ಮೇಲೆತ್ತಿದೆ ದೇವರೇ... ಒಂದು ಸಂಬಂಧಕ್ಕಾಗಿ, ಯಾವ ಅಂಕಿಗಳ, ಎಷ್ಟು ಅಂಕಿಗಳ ಮನೆಯ ಬಾಗಿಲನ್ನು ತಟ್ಟಲಿ.? ನನಗ ಆ ಒಂದು ಕ್ಷಣದ ಸಾಂತ್ವನವನ್ನು ನೀಡಿದ ನನ್ನ ಬಂಧು, ಯಾವ ಅಂಕಿಗಳ ಮರೆಯಲ್ಲಿ ಕುಳಿತು 'ಒಳ್ಳೆಯ ಅಂಕಲ್' ಅಂದ.?

ಕುರುಡನಂತೆ ಐದು ಅಂಕಿಗಳ ಒಂದು ಮನೆಯ ಬಾಗಿಲನ್ನು ತಟ್ಟಿದೆ. ಆ ಕಡೆಯಿಂದ ಫೋನ್ ಎತ್ತಿದ ಸದ್ದು. ''ಹಲೋ ಯಾರ್ರಿ ಅದು?'', ಒಬ್ಬ ಮುದುಕ. ಗೊಗ್ಗರು ಒರಟಾದ ಸ್ವರ. ನಾನು ಯಾರೆನ್ನಲಿ? ಓ ದೇವರೇ... ನಾನು ಯಾರೆಂದು ಹೇಳಿದರೆ ಅವನು ನನ್ನನ್ನು ಅರಿತಾನು''

“ಯಾರ್ರಿ ಅದು? ಯಾರು ಬೇಕಿತ್ರಿ?” ನಾನು ಕಂಪಿಸಿದೆ. ಯಾರು ಬೇಕಿತ್ತೆಂದರೆ ಆತ ನನಗೆ ಅದನ್ನು ಕೊಟ್ಟಾನು! “ಒಂದು ಮಗು... ಈಗ ತಾನೇ ಫೋನ್ ಮಾಡಿದ್ದೆ. ಒಂದು ಮಗು ಮಾತಾಡ್ತು. ಆ ಮಗು ಬೇಕಿತ್ತು”

“ತಲೆ ಕೆಟ್ಟಿದೆಯೇನ್ರಿ, ಇಲ್ಲಿ ಮಕ್ಕಳು ಯಾರೂ ಇಲ್ಲ. ಈ ರಾತ್ರೀಲಿ ಫೋನ್ ಮಾಡಿ ಡಿಸ್ಟರ್ಬ್ ಮಾಡ್ತೀರಲ್ರೀ... ರಾಂಗ್ ನಂಬರ್” ಎಂದದ್ದೇ ಫೋನ್ ಕುಕ್ಕಿದ ಸದ್ದು. ಆ ಸದ್ದು ಸಾಗರದ ಅಲೆಯಂತೆ ನನ್ನೆದೆಗೆ ಅಪ್ಪಳಿಸಿತು.

ಮಹಾನಗರವೊಂದರ ವಿವಿಧ ಗಲ್ಲಿಗಳಂತಿರುವ ಟೆಲಿಫೋನ್‌ನ ಆ ಅಂಕಿಯ ಬಟನ್‌ಗಳನ್ನು ದಾರಿ ತಪ್ಪಿದ ಅನಾಥನಂತೆ ನೋಡಿದೆ. ಕಂಪಿಸುವ ಕೈಗಳಿಂದ ಇನ್ನೈದು ಅಂಕಿಗಳ ಬಾಗಿಲು ತಟ್ಟಿದೆ. ಕೆಲವೇ ಹೊತ್ತಲ್ಲಿ ರಿಂಗಾಗತೊಡಗಿತು... ಒಂದೇ ಸಮನೆ. ಯಾಕೆ ಎತ್ತುತ್ತಿಲ್ಲ? ಎಲ್ಲರೂ ನಿದ್ದೆ ಹೋಗಿರಬಹುದೆ! ಅಥವಾ ಯಾವುದೋ ದುಃಖದ ವಾರ್ತೆಯ ಹಿಂದೆ ಮನೆಗೆ ಚಿಲುಕ ಹಾಕಿ ಹೋಗಿರಬಹುದೆ? ಒಂದು ‘ಅಥವಾ’ದ ಹಿಂದೆ ಅಡಗಿರುವ ಸಾವಿರಾರು ಆತಂಕಗಳು ಒಮ್ಮಿಂದೊಮ್ಮೆಗೆ ನನ್ನ ಭರವಸೆಯ ದಿಬ್ಬಕ್ಕೆ ಅಪ್ಪಳಿಸತೊಡಗಿದವು. ತಾಯಿಯ ಸ್ಪರ್ಶಕ್ಕಾಗಿ ಅರಚಿ ಬಾಯಾರಿ ಅಳುವನ್ನು ನಿಲ್ಲಿಸುವಂತೆ ಬಿಕ್ಕಳಿಸುತ್ತಾ ಟೆಲಿಫೋನ್ ಸುಮ್ಮಗಾಯಿತು.

ಮತ್ತೆ ಇನ್ನೊಂದು ಗಲ್ಲಿಯನ್ನು ಆರಿಸಿದೆ. ರಿಂಗಾದದ್ದೇ, ಬಾಣದ ಅಲಗಿನಂತೆ ಹರಿತ, ಮೊನಚಾದ ಹೆಣ್ಣಿನ ಸ್ವರವೊಂದು ಚಿಮ್ಮಿತು, “ಹಲೋ, ರಂಗನಾಥ್ ಮನೆಯಲ್ಲಿಲ್ಲ. ಏನಾದ್ರು ಹೇಳೋದಕ್ಕಿತ್ತ?” ಇದಲ್ಲ ಅನ್ನಿಸಿ ಫೋನಿಟ್ಟೆ. ಮತ್ತೆ ಮೆಲ್ಲಗೆ ಆಸೆಯನ್ನು ಬೆರಳ ತುದಿ ತನಕ ತಂದು ಐದಂಕಿಗಳನ್ನು ಅದುಮಿದೆ. “ಹಲೋ...” ಆ ಕಡೆಯಿಂದ ಗಂಡು ದನಿಯೊಂದು ಉತ್ತರಕ್ಕಾಗಿ ಕಾಯತೊಡಗಿತು. “ನಾನು... ಈಗಷ್ಟೇ ಫೋನ್ ಮಾಡಿದ್ದೆ. ಒಂದು ಮಗು... ಮಾತಾಡಿತ್ತು. ಆ ಮಗು ಬಳಿ ಮಾತಾಡ್ಬೇಕಾಗಿತ್ತು...” ನನ್ನ ಮುಖಕ್ಕೆ ಅಪ್ಪಳಿಸುವಂತೆ ಫೋನಿಟ್ಟ ಸದ್ದು. ಆ ಸಪ್ಪಳದ ಬಿರುಸಿಗೆ ಕುಳಿತಲ್ಲೇ ಕಂಪಿಸಿದೆ.

ಈಗ ಇಲ್ಲದ ಧೈರ್ಯವನ್ನು ಒಂದುಗೂಡಿಸಿದೆ. ನನಗೆ ಬೇಕಾದ ಅಂಕಿಯನ್ನು ಹುಡುಕಿಯೇ ತೀರಬೇಕು ಎನ್ನುವ ಹಟಕ್ಕೆ ಬಿದ್ದೆ. ಕುಳಿತಲ್ಲಿಂದ ಎದ್ದು ವಿದ್ಯುತ್ ದೀಪವನ್ನು ಆರಿಸಿದೆ. ಕೋಣೆಯಲ್ಲಿ ದಟ್ಟ ಕತ್ತಲೊಂದು ಕವುಚಿ ಬಿತ್ತು. ತಡವರಿಸುತ್ತಾ, ಬೆಂಕಿಕಡ್ಡಿ ಗೀರಿ, ಅರ್ಧ ಕರಗಿದ್ದ ಮೊಂಬತ್ತಿಯನ್ನು ಬೆಳಗಿಸಿದೆ. ಈಗ ಎಲ್ಲಾ ಸರಿಯಾಗಿದೆ ಎನ್ನುವ ನೆಮ್ಮದಿಯೊಂದು ನನ್ನನ್ನು ಆವರಿಸತೊಡಗಿತು. ಬೆಳಕಲ್ಲಿ ಕಳೆದು ಹೋದ ನನ್ನ ಅಂಕಿಗಳು ಈ ಕತ್ತಲಲ್ಲಿ ಮತ್ತೆ ಕೈಗೆಟಕುತ್ತಿದೆಯೆನಿಸಿತು.

ಮತ್ತೆ ಐದಂಕಿಗಳ ಬಾಗಿಲು ತಟ್ಟಿದೆ. ಆ ತೀರದಲ್ಲಿ ನನ್ನ ಎದೆ ಬಡಿತ ಮೊಳಗತೊಡಗಿದೆ. ಅದರ ಆಕ್ರಂದನ ಅವರ ನರನಾಡಿಗಳನ್ನು ಹೊಕ್ಕುಬಿಡಬೇಕು... ಅಷ್ಟು ತೀವ್ರವಾಗಿ... ಅಷ್ಟರಲ್ಲಿ ಫೋನ್ ಎತ್ತಿದ ಸದ್ದು.

“ಅಲ್ರೀ... ಯಾರ್ರೀ ನೀವು? ತಲೆಕೆಟ್ಟಿದೆಯೇನ್ರಿ ನಿಮಗೆ?”

“ನಾನು... ನಾನು...” ನನಗೆ ಅಷ್ಟರಲ್ಲಿ ಅರ್ಥವಾಯಿತು. ಈತ ಆರಂಭದಲ್ಲಿ ಫೋನೆತ್ತಿದ ಅದೇ ಮುದುಕ. ಅದೇ ಗೊಗ್ಗರು ದನಿ. ನನಗೆ ಅಳಬೇಕೆನಿಸಿತು. ನನ್ನ ಮಾತುಗಳನ್ನು ಕೇಳಲು ಸಿದ್ಧನಿಲ್ಲದ ಮುದುಕ, ನನ್ನ ಮೌನವನ್ನು ಆಲಿಸಿದನೋ ಎಂಬಂತೆ, ಇದ್ದಕ್ಕಿದ್ದಂತೆಯೇ ದ್ರವಗೊಂಡ ದನಿಯೊಂದು, ಆ ಬದಿಯಿಂದ ಬಂತು. “ಯಾರಪ್ಪಾ ನೀನು? ಯಾರು ಬೇಕಿತ್ತು ಮಗು?”

ನಾನು ತಲ್ಲಣಗೊಂಡು ಫೋನಿಟ್ಟೆ. ಮುಖ ಮುಚ್ಚಿ ಅಳತೊಡಗಿದೆ.



ಇದ್ದಕ್ಕಿದ್ದಂತೆ ಇನ್ನಾವುದೋ ಒಂದು ತೀರ ಸ್ಪಂದಿಸತೊಡಗಿತು.

ಬಿ.ಎಂ. ಬಶೀರ್



ಒಂದೇ ಸಮನೆ ಎಡೆಬಿಡದೆ ಕೆಲಸ ಮಾಡುತ್ತಿದ್ದರೂ, ಮೇಜಿನ ಮೇಲಿದ್ದ ಫೈಲುಗಳ ರಾಶಿ ಬಹಳ ನಿಧಾನವಾಗಿ ಕರಗುತ್ತಿತ್ತು. ಇದು ಮುಗಿಯದ ಕೆಲಸ, ನಾಳೆಯಾದರೂ ಮಾಡೋಣ ಎಂದು ಕೈ ಗಡಿಯಾರ ನೋಡಿಕೊಂಡಾಗ, ಆಗಲೇ ಏಳುವರೆಯಾಗಿತ್ತು. ಮನೆಗೆ ಹೋಗೋಣ ಎಂದರೆ ಐದು ಘಂಟೆಯಿಂದ ಒಂದೇ ಸಮನೆ ಮಳೆ ಸುರಿಯುತ್ತಿದ್ದು, ಇನ್ನೂ ನಿಲ್ಲುವ ಸೂಚನೆಯೇ ಕಾಣುತ್ತಿರಲಿಲ್ಲ. ಒಂದುವೇಳೆ ಕಡಿಮೆಯಾದರೂ, ಈ ಮಳೆಯಲ್ಲಿ, ಎಲ್ಲೆಲ್ಲೂ ಹಳ್ಳ ಕೊಳ್ಳ ಇರುವ ರಸ್ತೆಯಲ್ಲಿ, ಗಾಢಾಂಧಕಾರದಲ್ಲಿ, ಹೇಗಪ್ಪಾ ಸ್ಕೂಟರ್‌ನಲ್ಲಿ ಹೋಗುವುದು ಎಂದು ಯೋಚಿಸುತ್ತಿದ್ದ. ಇನ್ನೂ ಸ್ವಲ್ಪ ಹೊತ್ತು ಕೆಲಸ ಮಾಡಿದರೆ, ನಾಳೆ ತಲೆನೋವು ಕಡಿಮೆಯಾಗುತ್ತದೆ ಎಂದುಕೊಂಡು, ಮತ್ತೊಂದು ಫೈಲನ್ನು ಕೆಳಗೆ ಇಳಿಸಿ ಕಾರ್ಯಮಗ್ನನಾದ ಪ್ರಶಾಂತ.

ಟ್ರಿನ್, ಟ್ರಿನ್, ಟ್ರಿನ್ ಎಂದು ಟೆಲಿಫೋನ್ ಧ್ವನಿಸಿತು. ಇಷ್ಟು ಹೊತ್ತಿನಲ್ಲಿ ಯಾರಪ್ಪಾ ಫೋನ್ ಮಾಡುವುದು ಎಂದುಕೊಂಡು ರಿಸೀವರ್ ಎತ್ತಿದ.

''ಹಲೋ, ಪ್ರಶಾಂತ್ ಮಾತನಾಡ್ತಾ ಇರೋದು. ತಾವು ಯಾರು?''

''ರೀ, ನಾನು, ರೀ''

''ನಾನು ಅಂದ್ರೆ''

''ರೀ, ನಾನು ಅಂದ್ರೆ ಗೊತ್ತಾಗಲ್ವೇ. ನನ್ನ ಧ್ವನಿ ಗೊತ್ತಾಗಲ್ವೇ. ನಾನು ವೀಣಾ.''

''ಏನು ಸಮಾಚಾರ?''

''ಬೇಗ ಮನೆಗೆ ಬಂದ್ಬಿಡಿ. ಆಗಲೇ ಎಂಟು ಘಂಟೆ ಆಗ್ತಾ ಇದೆ. ನಿಮಗೋಸ್ಕರ ಕಾದು ಕಾದು ಬೇಜಾರಾಗ್ತಿದೆ.''

''ಇಲ್ಲಿ ತುಂಬಾ ಮಳೆ ಕಣೆ. ಇಲ್ಲಿಂದ ಹೊರಗೆ ಬರೋಕೆ ಆಗೋಲ್ಲ.''

''ಇಲ್ಲೂ ಅಷ್ಟೆ. ತುಂಬಾ ಮಳೆ, ಗುಡುಗು, ಸಿಡಿಲು, ದೀಪ ಬೇರೆ ಹೊರಟ್ಹೋಗಿದೆ. ನನಗೆ ತುಂಬಾ ಭಯವಾಗ್ತಿದೆ. ಬೇಗ ಬಂದ್ಬಿಡಿ, ಪ್ಲೀಸ್.''

''ದೀಪ ಹೊರಟ್ಹೋದ್ರೆ, ಕ್ಯಾಂಡಲ್ಸ್ ಹಚ್ಚು. ಅದಕ್ಕೇನು ಭಯ.''

''ಇಲ್ಲರೀ, ತುಂಬಾ ಭಯವಾಗುತ್ತೆ. ಕ್ಯಾಂಡಲ್ ದೀಪದಿಂದ ಎಂಥಾ ನೆರಳುಗಳು ಗೋಡೆ ಮೇಲೆ ಬೀಳುತ್ತೆ ಎಂದ್ರೆ, ಮೈ ಎಲ್ಲಾ ನಡುಕ ಬರುತ್ತೆ. ಇಲ್ಲೇ ಹತ್ತಿರದಲ್ಲೇ ಸಿಡಿಲು ಹೊಡಿತಾ ಇದೆ ಎಂದು ಕಾಣುತ್ತೆ. ನನಗೆ ತುಂಬಾ ಭಯ. ಬೇಗ ಬಂದ್ಬಿಡಿ.''

''ಏನೇ ಇದು? ಗ್ರ್ಯಾಜುಯೇಟ್ ಆಗಿ ಇಷ್ಟು ಸಣ್ಣ ವಿಷಯಕ್ಕೆ ಇಷ್ಟು ಹೆದರುತ್ತೀ. ಮತ್ತೆ ಕ್ಲಬ್‌ನಲ್ಲಿ ಸ್ತ್ರೀ ಸ್ವಾತಂತ್ರ್ಯ ಎಂದು ಎಷ್ಟೊಂದು ಭಾಷಣ ಮಾಡ್ತಿ?''

''ರೀ, ಹಾಸ್ಯ ಮಾಡ್ಬೇಡಿ. ಬೇಗ ಬಂದುಬಿಡಿ''

''ಈಗಲೇ ಹೊರಡ್ತೀನಿ. ಭಯ ಆದ್ರೆ, ಪಕ್ಕದ ಮನೆಯಲ್ಲಿ ನಿನ್ನ ಸ್ನೇಹಿತೆ ಇದ್ದಾರಲ್ಲ. ಅವರನ್ನು ಮನೆಗೆ ಕರಿ. ಫೋನ್ ಬೇರೆ ಇದೆಯಲ್ಲಾ, ಇಲ್ಲಿ ಭಾರಿ ಜೋರು ಮಳೆ. ಸ್ವಲ್ಪ ಕಡಿಮೆಯಾದ್ರೆ ತಕ್ಷಣ ಬರ್ತೀನಿ.''

"ರೀ, ಮತ್ತೆ ರೈನ್‌ಕೋಟ್ ತೆಗೆದುಕೊಂಡು ಹೋಗಿಲ್ಲಾ. ಮತ್ತೆ ಪೂರ್ತಿ ನೆನೆದುಬಿಟ್ಟೀರಲ್ಲಾ."

"ಬೆಳಗ್ಗೆ ಆಫೀಸಿಗೆ ಹೊರಟಾಗ ಮಳೆ ಬರುತ್ತೆ ಎಂದು ಕನಸು ಬಿದ್ದಿತ್ತೆ? ಸ್ವಲ್ಪ ಮಳೆ ಕಡಿಮೆಯಾದ ಕೂಡಲೇ ಬರ್ತೀನಿ. ಸರೀ ತಾನೆ? ಫೋನ್ ಇಡಲಾ?"

"ಓ.ಕೆ."

"ಒಂಬತ್ತು ಘಂಟೆ ಒಳಗೆ ಬಂದುಬಿಡ್ತೀನಿ. ಅದಕ್ಕೆ ಮುಂಚೆ ಆಗೋಲ್ಲ. ಭಯ ಆದರೆ ಪಕ್ಕದ ಮನೆಯವರನ್ನು ಕರೆ, ಆಯ್ತಾ."

"ಆಗಲಿ, ಬೇಗ ಬನ್ನಿ. ನಿಮಗೋಸ್ಕರ ಕಾಯ್ತಾ ಇರ್ತೀನಿ."



ರಿಸೀವರ್ ಕೆಳಗಿಟ್ಟೊಡನೇ, ಹೊರಗಡೆ ಭಾರಿ ಗುಡುಗು, ಸಿಡಿಲಿನ ಶಬ್ದ ಉಂಟಾಗಿ, ದೀಪ ಜಗ್ಗನೆ ಆರಿ, ಗಾಂಧಾಂಧಕಾರ ಉಂಟಾಯಿತು. ಪ್ರಶಾಂತನ ಆಫೀಸು, ದೊಡ್ಡ ವರ್ಕ್‌ಶಾಪ್‌ನ ಮೊದಲಿನ ಮಹಡಿಯಲ್ಲಿತ್ತು. ರೂಮಿನಿಂದ ಹೊರಗೆ ಬಂದೊಡನೆ, ವರ್ಕ್‌ಶಾಪ್‌ಗೆ ಇಳಿಯಲು ಮೆಟ್ಟಲುಗಳು ಇದ್ದವು. ಕಾರ್ಯಾಗಾರ ಬಹಳ ದೊಡ್ಡದಾಗಿದ್ದು, ಸೂರು ಸುಮಾರು ಮೂವತ್ತು ಅಡಿಗಳ ಮೇಲೆ ಇತ್ತು. ಬೆಳಗ್ಗೆ, ಸಾಕಷ್ಟು ಬೆಳಕು, ಗಾಳಿ ಇದ್ದು, ಬಹಳ ವಿಶಾಲವಾಗಿ ಕಾಣುತ್ತಿತ್ತು. ಈಗ ಸ್ವಲ್ಪವೂ ಬೆಳಕಿಲ್ಲದೆ, ಆಳವಾದ ಬಾವಿಯಲ್ಲಿ ತಾನಿದ್ದಂತೆ ಭಾಸವಾಯಿತು. ಎಷ್ಟು ಸಮಯವಾದರೂ, ಆ ಕಗ್ಗತ್ತಲಿಗೆ ತನ್ನ ಕಣ್ಣನ್ನು ಹೊಂದಿಸಿಕೊಳ್ಳಲಾಗದೆ, ಯಾವ ದಿಕ್ಕಿನಲ್ಲಿ ಚಲಿಸಬೇಕೆಂದು ಗೊತ್ತಾಗಲಿಲ್ಲ. ಆದರೂ ಅಭ್ಯಾಸ ಬಲದಿಂದ ನಿಧಾನವಾಗಿ ಹೆಜ್ಜೆ ಹಾಕುತ್ತಾ, ಕಾರ್ಯಾಗಾರದ ಹೆಬ್ಬಾಗಿಲಿನ ಕಡೆಗೆ ಸಾಗಿದ್ದ. ಅಷ್ಟರಲ್ಲಿ, ಒಬ್ಬ ಸೆಕ್ಯೂರಿಟಿಯವನು ಪೆಟ್ರೋಮ್ಯಾಕ್ಸ್ ದೀಪವನ್ನು ತಂದಿದ್ದರಿಂದ, ಪ್ರಶಾಂತ್ ಹೊರಗೆ ಬರಲು ಸುಗಮವಾಯಿತು.

ಹೊರಬಂದ ಮೇಲೆ ಕತ್ತಲು ಕಡಿಮೆಯ
ಮಳೆಯಲ್ಲಿಯೇ ಸ್ಕೂಟರ್ ನಿಲ್ದಾಣದ ಕಡೆಗೆ ನ



ನಿಲ್ದಾಣದ ಆಸರೆಯಲ್ಲಿ ನಿಂತು, ಹೊ
ಆಗಾಗ್ಗೆ ಹೋಗುತ್ತಿದ್ದ ಕಾರು, ಲಾ
ಬೆಳಕಿನಲ್ಲಿ ಮಳೆ ಧಾರಾಕಾರವಾಗಿ ಸುರಿಯು
ದನ್ನು ಕಂಡ. ಮಳೆಯ ನೀರು ನದಿಯ
ಹರಿಯುತ್ತಿತ್ತು. ಅವನು ಕೆಲಸ ಮಾಡುವ
ಊರಿನಿಂದ ಆಚೆ ಇದ್ದುದರಿಂದ, ಸುಮ
ಹತ್ತು ಕಿಲೋಮೀಟರ್‌ವರೆಗೂ, ಅವ
ಮಧ್ಯೆ ಮಳೆಯಿಂದ ರಕ್ಷಣೆ ಪಡೆಯಲು
ನಿಲ್ದಾಣವೂ ಸಿಕ್ಕುತ್ತಿರಲಿಲ್ಲ. ರಸ್ತೆಯ ಎ
ಕಡೆಗೂ ಗಗನದೆತ್ತರಕ್ಕೆ ಬೆಳೆದಿದ್ದ ಮರಗಳ
ಮಳೆ ನಿಂತ ಮೇಲೂ ನೀರು ಸುರಿ
ಸಂಭವವಿತ್ತು. ಮಳೆಯ ಜತೆಗೆ ಪ್ರ
ಬಿರುಗಾಳಿ, ಮರಗಳನ್ನು ಪೂರ್ತಿ ನೆಲದ
ವಾಲಿಸುತ್ತಿತ್ತು. ಖಂಡಿತ, ಎಲ್ಲಾದರೂ ವ
ಕೊಂಬೆಗಳು ದಾರಿಗಡ್ಡಲಾಗಿ ಬಿದ್ದಿ
ವಾಹನವನ್ನು ತಳ್ಳಬೇಕಾದ ಪ್ರಸಂಗ ಬ
ದಿತ್ತು. ಆದರೂ, ಎಷ್ಟು ಹೊತ್ತು ಇಲ್ಲೇ
ವುದು, ಮನೆಯಲ್ಲಿ ಪಾಪ ವೀಣಾ ಕಾಯು
ತ್ತಾಳೆ. ಎಷ್ಟು ಹೆದರಿರುತ್ತಾಳೋ
ಸ್ಕೂಟರ್ ಸ್ಟಾರ್ಟ್ ಮಾಡಿ ಮನೆಯ
ಹೊರಟ. ಸುಮಾರು ಇಪ್ಪತ್ತು-ಮೂವತ್ತು
ಹೋಗುವಷ್ಟರಲ್ಲಿ, ಪ್ರಶಾಂತ ಪೂರ್ತಿ ನೆ
ಹೋಗಿದ್ದ. ಮುಖದ ಮೇಲೆ ಸಾವಿರ ಬಾಣ
ಹೊಡೆಯುವ ಹಾಗೆ ಮಳೆ ರಭಸದ
ಬೀಳುತ್ತಿತ್ತು. ಕಣ್ಣೆಲ್ಲಾ ಉರಿಯಾಗಿ,
ತೆರೆದಿಡಲು ಕಷ್ಟವಾಗುತ್ತಿತ್ತು. ಆದರೂ, ಬ
ಎಚ್ಚರದಿಂದ, ಯಾವ ಹಳ್ಳವೂ ಮಧ್ಯ ಬರದ
ಎಂದು ದೇವರನ್ನು ಪ್ರಾರ್ಥಿಸುತ್ತಾ ನಿಧಾನ
ಬರುತ್ತಿದ್ದ. ಅವನ ಅದೃಷ್ಟಕ್ಕೆ, ಸ್ಕೂಟರಿನ
ಲೈಟ್ ಕೆಲಸ ಮಾಡುತ್ತಿದ್ದು, ಆ ಕಡುಗತ್ತಲ



ಮಂಕಾದ ಬೆಳಕನ್ನು ಬೀರುತ್ತಿತ್ತು. ಅಷ್ಟರಲ್ಲಿ, ಎದುರುಗಡೆ ಜೋರಾಗಿ ಬರುತ್ತಿದ್ದ ಲಾರಿಯೊಂದು ತನ್ನ ಪಕ್ಕದಲ್ಲಿಯೇ ಸರಿದು, ರಸ್ತೆಯಲ್ಲಿದ್ದ ನೀರೆಲ್ಲಾ ತನ್ನ ಮೇಲೆ ಬೀಳುವಂತಾಯಿತು. ಬೇರೆಯವರಿಗೆ ಸ್ವಲ್ಪವೂ ಕರುಣೆ ತೋರಿಸದ ಡ್ರೈವರ್‌ಗಳನ್ನು ಶಪಿಸುತ್ತಾ, ಇಷ್ಟೊಂದು ನೆಂದ ಮೇಲೆ ಮಧ್ಯೆ ಇನ್ನೇಕೆ ನಿಲ್ಲಬೇಕು ಎಂದು ಸ್ಕೂಟರಿನ ವೇಗ ಹೆಚ್ಚಿಸಿದ. ಹಾಕಿದ್ದ ಬಟ್ಟೆ ಪೂರ್ತಿ ಒದ್ದೆಯಾಗಿ, ರಾತ್ರಿಯ ತಣ್ಣನೆಯ ಗಾಳಿಯಲ್ಲಿ ಮೈಯೆಲ್ಲಾ ನಡುಗಲು ಪ್ರಾರಂಭವಾಯಿತು. ಚಳಿ, ಮೂಳೆಗಳ ತನಕ ಇಳಿದು, ಕೈಯೆಲ್ಲಾ ಮರಗಟ್ಟಿತ್ತು. ಈ ಗಾಢಾಂಧಕಾರದಲ್ಲಿ, ಬಾನೊಡೆದು ಭೂಮಿಗೆ ಬೀಳುತ್ತಿದ್ದ ಜಲಧಾರೆಯಲ್ಲಿ, ಗುಡುಗಿನ ಅರ್ಭಟದ ನಡುವೆ, ಕೋಟಿ ಸೂರ್ಯಗಳ ಬೆಳಕನ್ನು ಒಮ್ಮೆಲೇ ಪ್ರಜ್ವಲಿಸುವ ಮಿಂಚಿನ ಬೆಳಕಿನಲ್ಲಿ, ಪ್ರಶಾಂತನಿಗೆ ತಾನ್ಯಾವುದೋ ಬೇರೆ ಆಯಾಮಕ್ಕೆ ಹೋಗುವಂತೆ ಭಾಸವಾಯಿತು. ಪ್ರಕೃತಿಯ ಪ್ರಚಂಡ ಶಕ್ತಿಯ ತಾಂಡವನೃತ್ಯ ಆದಿ ಮಾನವನಲ್ಲಿ ಉಂಟು ಮಾಡುತ್ತಿದ್ದ ಭಯ ಪ್ರಶಾಂತನಿಗಾಯಿತು.



ಪ್ರಶಾಂತ ಮನೆ ತಲುಪಿದಾಗ, ದೂರದಲ್ಲಿದ್ದ ಗೋಪುರದ ಗಡಿಯಾರ ಢಣ್, ಢಣ್, ಎಂದು ಒಂಬತ್ತು ಘಂಟೆ ಸೂಚಿಸುತ್ತಿತ್ತು. ಮಳೆ ಇನ್ನೂ ಜೋರಾಗಿಯೇ ಬರುತ್ತಿತ್ತು. ಸ್ಕೂಟರನ್ನು ಒಳಗೆ ನಿಲ್ಲಿಸಿ, ಪ್ರಶಾಂತ ಮೆಲ್ಲನೆ ಮೆಟ್ಟಿಲನ್ನು ಹತ್ತಿ, ತನ್ನ ಮನೆಯ ಬಾಗಿಲನ್ನು ತಲುಪಿದ. ಇನ್ನೂ ದೀಪ ಬಂದಿರಲಿಲ್ಲವಾದ್ದರಿಂದ, ಒಳಗೆ ಮಿಣುಕು ದೀಪ ಉರಿಯುತ್ತಿತ್ತು.

ಟಕ್, ಟಕ್, ಟಕ್, ಎಂದು ಬಾಗಿಲನ್ನು ತಟ್ಟಿದ. ಒಳಗಿನಿಂದ ಉತ್ತರವಿಲ್ಲ.

''ವೀಣಾ, ಬಾಗಿಲು ತೆಗಿ, ನಾನು ಪ್ರಶಾಂತ್ ಬಂದಿದೀನಿ.''

''ಯಾರು?''

''ನಾನು ಕಣೆ, ಬೇಗ ತೆಗಿ, ಬಹಳ ಚಳಿಯಾಗ್ತಾ ಇದೆ.''

''ಬಂದೆ ತಾಳಿ'' ಎಂದು ವೀಣಾ ಸರಸರನೆ ಬಂದು ಬಾಗಿಲನ್ನು ತೆಗೆದಳು. ಕೈಯಲ್ಲಿ ಹಿಡಿದಿದ್ದ ದೀಪದ ಬೆಳಕಿನಲ್ಲಿ, ಪೂರ್ತಿ ತೊಯ್ದು ನಿಂತಿದ್ದ ಪ್ರಶಾಂತನನ್ನು ನೋಡಿ ಗಾಬರಿಯಾದಳು. ''ಬೇಗ ಬನ್ನಿ ಒಳಗೆ, ಬಟ್ಟೆ ಎಲ್ಲಾ ಬದಲಾಯಿಸಿರಿ'' ಎಂದು ದೀಪದ ಹಣತೆಯನ್ನು ಮೇಜಿನ ಮೇಲೆ ಇಟ್ಟು, ಬೇರೆ ಬಟ್ಟೆ, ಟವಲನ್ನು ತರಲು ಒಳಗೆ ಓಡಿದಳು. ಪ್ರಶಾಂತ್ ಅಲ್ಲೇ ಕುರ್ಚಿಯ ಮೇಲೆ ಕುಳಿತು, ತಾನು ಹಾಕಿದ್ದ ಷೂಸನ್ನು ತೆಗೆಯಲುತೊಡಗಿದ. ಮೈ ಒಂದೇ ಸಮನೆ ನಡುಗುತ್ತಿದ್ದು, ಷೂ ಲೇಸ್‌ಗಳನ್ನು ಬಿಚ್ಚಲು ಬಹಳ ಕಷ್ಟವಾಯಿತು. ಎಲ್ಲ ಒಣಗಿದ್ದ

ಡ್ರೆಸ್ ಹಾಕಿಕೊಂಡು, ಒದ್ದೆಯಾದ ತಲೆಗೂದಲನ್ನು ಟವಲಿನಿಂದ ಬಿರುಸಾಗಿ ಒರೆಸಿದ ಮೇಲೂ, ಮೈ ನಡುಗುವುದು ನಿಲ್ಲದೆ, ತಾನು ಮತ್ತೆ ಬಿರುಗಾಳಿ, ಮಿಂಚು, ಸಿಡಿಲಿನಲ್ಲಿ, ಸಿಕ್ಕ ಅನುಭವವಾಯಿತು. ಹೊರಗಡೆ ಇನ್ನೂ ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು.

ಬೆಚ್ಚನೆಯ ಸ್ವೆಟರ್ ಹಾಕಿಕೊಂಡ ಮೇಲೆ ಪ್ರಶಾಂತನಿಗೆ ಸ್ವಲ್ಪ ಹಾಯೆನಿಸಿತು. ಆದರೂ ತನ್ನ ಇಡೀ ದೇಹವನ್ನು ನಡುಗಿಸುತ್ತಿದ್ದ ಚಳಿ ತನ್ನ ಮೂಳೆಯಲ್ಲಿಯೇ ಉದ್ಭವವಾಗುತ್ತಿದೆಯೋ ಎಂದು ಅನಿಸುತ್ತಿತ್ತು. ವೀಣಾಗಂತೂ ಏನೂ ತೋಚಲೇ ಇಲ್ಲ. ಬಿಸಿ ಬಿಸಿಯಾಗಿ ಕಾಫಿ ಮಾಡಿ ತಂದುಕೊಟ್ಟು, ಅವನು ಕುಡಿಯುತ್ತಿದ್ದಂತೆಯೇ, ರಾತ್ರಿ ಊಟಕ್ಕೆ ಎಲ್ಲಾ ತಯಾರು ಮಾಡಿದಳು.

''ಯಾಕೋ, ಅನ್ನಾನೇ ಸೇರ್ತಾ ಇಲ್ಲ ಕಣೆ. ಜ್ವರ ಬಂದಿದೆ ಎಂದು ಕಾಣುತ್ತೆ'' ಎಂದ ಪ್ರಶಾಂತ. ವೀಣಾ ಹತ್ತಿರ ಬಂದು ಹಣೆಯನ್ನು ಮುಟ್ಟಿ ನೋಡಿದಳು.

''ಹೌದ್ರಿ, ಹಣೆ ಸುಡ್ತಾ ಇದೆ. ಎಷ್ಟು ಸೇರುತ್ತೋ ಅಷ್ಟು ತಿನ್ನಿ, ಸ್ವಲ್ಪವಾದರೂ ಶಕ್ತಿ ಬರಲಿ. ನಾನು ಹಾಗೇ ಅಂಕಲ್‌ಗೆ ಫೋನ್ ಮಾಡ್ತೇನೆ'' ಎಂದಳು.

ವೀಣಾಳ ಸೋದರ ಮಾವ ನಗರದಲ್ಲಿಯೇ ಪ್ರಖ್ಯಾತರಾದ ಡಾಕ್ಟರ್. ಅವರು ಬಂದರೆ ತನಗ ಎಷ್ಟೋ ಧೈರ್ಯ ಎಂದುಕೊಂಡಳು.

''ಇಷ್ಟಕ್ಕೆಲ್ಲಾ ಅವರಿಗ್ಯಾಕೆ ತೊಂದರೆ ಕೊಡ್ತಿ, ನಾನು ಎರಡು ರಗ್ ಹೊದ್ದು ಮಲಗ್ತೇನೆ. ಎಲ್ಲಾ ಸರಿಯೋಗುತ್ತೆ'' ಎಂದು ಊಟ ಮುಗಿಸಿ, ಪ್ರಶಾಂತ್ ಕೂಡಲೇ ಮಲಗುವ ಕೋಣೆಗೆ ಹೋಗಿ ಮಲಗಿದ. ಆದರೆ ಅವನು ಎಷ್ಟು ರಗ್ ಹೊದ್ದರೇನು, ಚಳಿಯೇನೂ ಬಿಡಲಿಲ್ಲ. ಅವನ ಮೈ ನಡುಗಿ ಹಾಸಿಗೆಯಿಂದ ಮೇಲೆ ಎತ್ತಿ ಹಾಕುತ್ತಿತ್ತು. ಮೈ ಎಲ್ಲಾ ಸುಡುವ ಅನುಭವವಾಗುತ್ತಿತ್ತು.

''ಏನ್ರೀ, ಬಹಳ ಜ್ವರ ಇದ್ದ ಹಾಗೆ ಕಾಣುತ್ತೆ. ಮೈ ಎಲ್ಲಾ ಸುಡ್ತಾ ಇದೆ. ನೂರ ಮೂರು-ನೂರ ನಾಲ್ಕಾದರೂ ಇರುತ್ತೆ. ಈಗ್ಲೇ ಡಾಕ್ಟರನ್ನು ಕರೆಯಬೇಕು. ಆಮೇಲೆ ಏನು ಮಾಡೋದು ಎಂದು ತೋಚಲ್ಲ'' ಎಂದಳು. ವೀಣಾ ಥರ್ಮಾಮೀಟರ್ ಇಟ್ಟು ನೋಡಿದಾಗ, ತನ್ನ ಕಣ್ಣನ್ನೇ ನಂಬಲಿಲ್ಲ. ಥರ್ಮಾಮೀಟರ್ ನೂರನಾಲ್ಕರ ಮೇಲೆ ತೋರಿಸುತ್ತಿತ್ತು.



ಪ್ರಶಾಂತ್ ಕಣ್ಣುಬಿಟ್ಟು ನೋಡಿದಾಗ, ಸೂರಿನಲ್ಲಿದ್ದ ದೀಪ ಕಣ್ಣು ಚುಚ್ಚಲು ಪ್ರಾರಂಭಿಸಿತ್ತು. ಅವನಿಗೆ ಅದು ಅಷ್ಟು ಕಣ್ಣು ಬಿಟ್ಟು ಕೋರೈಸುವಷ್ಟು ಪ್ರಜ್ವಲವಾಗಿದೆ ಎಂದು ಯಾವತ್ತೂ ಅನಿಸಿರಲಿಲ್ಲ. ಹಾಗೆಯೇ, ಆ ದೀಪದ ಸುತ್ತ, ಇಡೀ ಕೊಠಡಿ ಸುತ್ತುತ್ತಿರುವಂತೆ ಭಾಸವಾಯಿತು.

''ವೀಣಾ, ದಯವಿಟ್ಟು ಆ ದೀಪ ಆರಿಸೇ. ನನಗೇಕೋ ತುಂಬಾ ಭಯವಾಗುತ್ತೆ.''

''ಈಗತಾನೇ ದೀಪ ಎಲ್ಲಾ ಬಂತು. ಅದಕ್ಕೇ ನಿಮಗೆ ಹಾಗೆ ಅನಿಸಿರಬಹುದು'' ಎಂದು ವೀಣಾ ದೀಪ ಆರಿಸಿ, ಅಲ್ಲೇ ಮೇಜಿನ ಮೇಲಿದ್ದ ಬೆಡ್‌ಲ್ಯಾಂಪನ್ನು ಹಾಕಿದಳು.

''ಅಮ್ಮನನ್ನು ಈಗಲೇ ಕರೆಯಿಸು. ಅವಳು ಜತೆಗಿದ್ದರೆ ನನಗೆ ಹಾಯೆನಿಸುತ್ತೆ.''

ಪ್ರಶಾಂತನ ತಾಯಿ ಸತ್ತು ಆಗಲೇ ಎರಡು ವರ್ಷವಾಗಿತ್ತು. ವೀಣಾ ಹೊಸದಾಗಿ ಮನೆಗೆ ಬಂದಾಗ, ಅತ್ತೆಗೆ ಹೊಂದಿಕೊಂಡು ಅವರ ಬಗ್ಗೆ ಬಹಳ ಅಭಿಮಾನ, ಪ್ರೀತಿ ಬೆಳೆಸಿಕೊಂಡಿದ್ದಳು. ಅವರೂ ಕೂಡ ವೀಣಾಳನ್ನು ತನ್ನ ಸ್ವಂತ ಮಗಳಿನಂತೆ ನೋಡಿಕೊಂಡು, ಅವಳಿಗೆ ಯಾವ ಕೊರತೆಯೂ ಬರದ ಹಾಗೆ ನೋಡಿಕೊಂಡಿದ್ದರು. ಅವರು ಹೋದಾಗ, ಅವಳ ಬಹಳ ದುಃಖಪಟ್ಟುಕೊಂಡಿದ್ದಳು. ಆದರೆ

ಈಗೇಕೆ ಇವರು ತನ್ನ ತಾಯಿಯನ್ನು ಜ್ಞಾಪಿಸಿ ಕೊಳ್ಳುತ್ತಿದ್ದಾರೆ ಎಂದೆನಿಸಿತು.

''ರೀ, ಅವರು ಹೋಗಿ ಆಗಲೇ ಎರಡು ವರುಷ ಆಗ್ತಾ ಇದೆ. ಈಗ ಎಲ್ಲಿಂದ ಅವರನ್ನು ಕರೆದುಕೊಂಡು ಬರಲಿ. ನಾನಿದೀನಿ ಇಲ್ಲೇ. ಸಮಾಧಾನ ಮಾಡ್ಕೊಳ್ಳಿ'' ಎಂದಳು. ಆದರೆ, ಪ್ರಶಾಂತ ಏನೇನೋ ಬಡಬಡಿಸತೊಡಗಿದ. ಕೆಲವು ತನ್ನ ಆಫೀಸಿನ ಬಗ್ಗೆಯಾದರೆ, ಇನ್ನು ಕೆಲವು ತನ್ನ ಸ್ಕೂಲು, ಕಾಲೇಜಿನ ಬಗ್ಗೆ. ಹಾಗೆಯೇ ಮಧ್ಯೆ ಜೋರಾಗಿ ನಗತೊಡಗಿದ. ವೀಣಾಗೆ ದಿಕ್ಕೇ ತೋಚದಂತಾಯಿತು. ''ಏನ್ರೀ, ಈ ತರಹ ಮಾತಾಡ್ತಾ ಇದೀರಿ, ಸುಮ್ಮನೆ ಮಲಗಿಕೊಳ್ಳಿ. ಬೆಳಿಗ್ಗೆ ಅಷ್ಟೊತ್ತಿಗೆ ಜ್ವರ ಎಲ್ಲಾ ಇಳಿದುಬಿಡುತ್ತೆ'' ಎಂದು ತಕ್ಷಣ ಫೋನಿನ ಕಡೆಗೆ ಹೋಗಿ, ತನ್ನ ಸೋದರಮಾವನಿಗೆ ಫೋನ್ ಮಾಡತೊಡಗಿದಳು.

''ಥೂ, ಯಾವಾಗ ನೋಡಿದ್ರೂ ಎಂಗೇಜ್ ಆಗಿರುತ್ತೆ. ಈಗ ಆಗಲೇ ಹನ್ನೊಂದು ಘಂಟೆ ಆಗ್ತಾ ಇದೆ. ಮುಕ್ಕಾಲು ಪಾಲು ಕೆಟ್ಟು ಹೋಗಿದೆ ಅಂತ ಕಾಣುತ್ತೆ'' ಎಂದು ಅಂದು ಕೊಂಡರೂ, ಎಡೆಬಿಡದ ಅದೇ ನಂಬರನ್ನು ಮತ್ತೆ ಮತ್ತೆ ಪ್ರಯತ್ನಿಸತೊಡಗಿದಳು. ''ಹಲೋ, ಹಲೋ, ಅಂಕಲ್, ನಾನು ವೀಣಾ. ಸಧ್ಯ ಕೊನೆಗೂ ಸಿಕ್ಕಿದ್ರಲ್ಲಾ. ಇವರಿಗೆ ಮೈ ಚೆನ್ನಾಗಿಲ್ಲ. ನೀವು ದಯವಿಟ್ಟು ಬೇಗ ಬಂದು ಬಿಡಿ. ತುಂಬಾ ಜ್ವರ ಇದೆ. ಏನೇನೋ ಮಾತಾಡ್ತಾ ಇದ್ದಾರೆ. ನನಗೆ ದಿಕ್ಕೇ ತೋಚ್ತಾ ಇಲ್ಲ.''

''ವೀಣಾ ಈಗಾಗಲೇ ಹನ್ನೊಂದು ಘಂಟೆ ಆಗಿದೆ. ನಾನಿರೋದು ಜಯನಗರದಲ್ಲಿ, ನೀನಿರೋದು ರಾಜಾಜಿನಗರದಲ್ಲಿ. ಏನಿಲ್ಲಾ ಅಂದ್ರೂ, ರಾತ್ರಿ ಹನ್ನೆರಡು ಘಂಟೆ ಆಗುತ್ತೆ. ಹೊರಗಡೆ ಎಂಥಾ ಮಳೆ. ಈ ಮಳೆಯಲ್ಲಿ ರಸ್ತೆಗಳು ಸರಿ ಇರುತ್ತೋ ಇಲ್ಲವೋ ಅದು ಕೂಡ ಗೊತ್ತಾಗೋಲ್ಲ. ಈ ರಾತ್ರಿ ಏನಾದರೂ ಮಾಡಿ ಮ್ಯಾನೇಜ್ ಮಾಡು. ಬೆಳಿಗ್ಗೆ ಏಳು ಘಂಟೆಗೆ ಬಂದುಬಿಡ್ತೀನಿ'' ಎಂದರು.

''ಇಲ್ಲ, ಈಗಲೇ ಬರ್ಬೇಕು. ನನಗೆ ಈ ರಾತ್ರಿ ಕಳೆಯೋಕೆ ಆಗೋಲ್ಲ. ಅಂಕಲ್ ಪ್ಲೀಸ್, ನನಗೋಸ್ಕರ ದಯವಿಟ್ಟು ಈಗಲೇ ಬನ್ನಿ'' ಎಂದು ವೀಣಾ ಜೋರಾಗಿ ಅಳತೊಡಗಿದಳು.

''ವೀಣಾ, ಏನಾಯ್ತು ಪ್ರಶಾಂತ್‌ಗೆ, ಇದ್ದಕ್ಕಿದ್ದ ಹಾಗೆ''

''ಮಳೇಲಿ ನೆನೆದು ಬಂದ್ರು, ಮೈ ಒರಸಿಕೊಳ್ತಾ ಇದ್ದ ಹಾಗೆ, ಜ್ವರ ಏರ್ತ್ತಿ ನೂರ್ನಾಲ್ಕಕ್ಕಿಂತ ಜಾಸ್ತಿ ಇದೆ. ಮೈ ನಡುಕ ಇದೆ. ಏನೇನೋ ಮಾತಾಡ್ತಾ ಇದ್ದಾರೆ. ಕಣ್ಣೆಲ್ಲಾ ಎಲ್ಲೋ ನೋಡ್ತಾ ಇರುತ್ತೆ. ನನ್ನನ್ನು ಕೂಡ ಗುರುತಿಸ್ತಾ ಇಲ್ಲ. ನೀವು ಈಗಲೇ ಬರ್ಬೇಕು'', ವೀಣಾ ಅಳುತ್ತಲೇ ಹೇಳಿದಳು.

''ಆಗಲಿ ಬರ್ತೀನಿ. ಮನೇಲಿ ಯಾವುದಾದರೂ ಜ್ವರ ಇಳಿಸೋ ಮಾತ್ರೆ ಇದ್ದರೆ ಈಗಲೇ ಕೊಡು. ಹಾಗೆಯೇ ಹಣೆಯ ಮೇಲೆ ತಣ್ಣೀರು ಬಟ್ಟೆ ಹಾಕ್ತಾ ಇರು. ಇನ್ನೊಂದು ಅರ್ಧ ಘಂಟೇಲಿ ಬರ್ತೀನಿ.''

ಅವಳ ಸೋದರಮಾವ ಹಾಗೆ ಹೇಳಿದ ಮೇಲೆ ವೀಣಾಗೆ ಎಷ್ಟೋ ಧೈರ್ಯ ಬಂತು. ಅವರು ಬಂದರೆ ಎಲ್ಲಾ ಸರಿಹೋಗುತ್ತೆ ಎಂದು ಸಮಾಧಾನ ಪಟ್ಟುಕೊಂಡು ಅವರನ್ನು ಕಾತರದಿಂದ ಕಾಯತೊಡಗಿದಳು.

ಇತ್ತ ಪ್ರಶಾಂತನಿಗೆ ಜ್ವರ ಏರುತ್ತಿದ್ದಂತೆ, ತನ್ನ ಸುತ್ತ ಮುತ್ತಲಿನ ಸಂಬಂಧ ಕಡಿದು ದೂರ ಹೋದ ಹಾಗಾಗುತ್ತಿತ್ತು. ಕೆಲವು ಸಲ, ತಾನು ತನ್ನ ಮನೆಯಲ್ಲಿದ್ದೇನೆ ಮತ್ತು ವೀಣಾ ತನ್ನ ಬಳಿಯೇ ಇದ್ದು ತನ್ನ ಜತೆ ಮಾತನಾಡುತ್ತಿದ್ದಾಳೆ, ಎಂಬುದೇ ಮರೆತು ಹೋಗಿ, ಯಾವುದೋ ಕನಸಿನ ಲೋಕಕ್ಕೆ ಹೋಗುತ್ತಿದ್ದ. ಮತ್ತೆ ಹಿಂದಿರುಗಿ ಬಂದಾಗ, ಅವನು ವೀಣಾ ಜತೆಗೆ ಮಾತನಾಡುತ್ತಿದ್ದುದು ಅವನ ಮನಸ್ಸಿಗೆ ಸರಿ

ಎನಿಸಿದ್ದರೂ, ತಾನು ಏನು ಮಾತನಾಡುತ್ತಿದ್ದೇನೆ ಎಂಬುದರ ಮೇಲೆ ತನಗೆ ಸಂಪೂರ್ಣವಾಗಿ ನಿಯಂತ್ರಣ ಇಲ್ಲ ಎಂದೆನಿಸುತ್ತಿತ್ತು. ಮನೆಗೆ ಮಳೆಯಲ್ಲಿ ನೆನೆದು ಬಂದಾಗ ಆದ ಚಳಿ, ಮೈ ನಡುಕ, ಸಂಕಟ, ಮೈ ಸುಡುವ ಅನುಭವ ಈಗ ಜ್ವರ ಏರುತ್ತಿದ್ದಂತೆ, ಸಂಪೂರ್ಣವಾಗಿ ಬಿಟ್ಟು, ತಾನು ಬೇರೆ ಮತ್ತು ಮಂಚದ ಮೇಲಿದ್ದ ವ್ಯಕ್ತಿ ಬೇರೆ ಎನಿಸುತ್ತಿತ್ತು. ತಾನು ಎಲ್ಲಾ ನೋವಿನಿಂದ ಮುಕ್ತಿ ಪಡೆದು, ಪ್ರಶಾಂತನ ದೇಹದಿಂದ ಹೊರಬಿದ್ದು, ಸ್ವತಂತ್ರನಾದ ಅನುಭವವಾಗಿತ್ತು. ತನಗೆ ಗಾಳಿಯಲ್ಲಿ ತೇಲಿ ಹೋಗಿ, ಸುತ್ತಲಿನ ಸನ್ನಿವೇಶವನ್ನು ನಿರ್ವಿಕಾರದಿಂದ ನೋಡಲು ಸಾಧ್ಯವಾಗುವ ಶಕ್ತಿ ಅವನಿಗೆ ಒದಗಿತ್ತು. ತನ್ನ ಕೊಠಡಿಯಲ್ಲಿ ಕತ್ತಲು ತುಂಬಿದ್ದರೂ, ತಾನು ಬೆಳಕಿನ ಸಾಗರದಲ್ಲಿ ಈಜಾಡುತ್ತಿದ್ದಂತೆ ಮತ್ತು ಎಲ್ಲವೂ ಸ್ಫಟಿಕದಂತೆ ಸ್ಪಷ್ಟವಾಗಿ ಕಾಣತೊಡಗಿತು. ವೀಣಾ ಯಾಕೆ ನನ್ನ ಬಗ್ಗೆ ಇಷ್ಟು ಕಾತರಳಾಗಿದ್ದಾಳೆ? ತಾನು ಒಂದು ವೇಳೆ ಸತ್ತರೂ ಅವಳು ವಿಷಾದ ಪಡಬೇಕಾಗಿಲ್ಲ. ನನಗಂತೂ ಈ ಸ್ಥಿತಿ ಹಾಯಾಗಿದೆ. ಇದೇ ಸಾವು ಎಂದರೆ, ಯಾಕೆ ಎಲ್ಲರೂ ಇಷ್ಟು ಭಯಪಡ್ತಾರೆ ಎಂದುಕೊಂಡ.

"ವೀಣಾ, ಏನೂ ಭಯ ಪಟ್ಕೋಬೇಡ. ಸಾವು ಅಂದರೆ ಅಷ್ಟು ಕಷ್ಟ ಏನೂ ಆಗೋಲ್ಲ. ಹಾಗೆ ನೋಡಿದರೆ, ಆತ್ಮಕ್ಕೆ ಸಾವೇ ಇಲ್ಲ. ನಾನು ಈ ದೇಹ ಬಿಟ್ಟು, ಇನ್ನೊಂದು ದೇಹ ಸೇರ್ಕೊಳ್ತೀನಿ ಅಷ್ಟೆ. ನಿನಗೇನೂ ತೊಂದರೆ ಆಗೋಲ್ಲ. ಎಲ್ಲರೂ ಅಷ್ಟೆ, ತಾವಿಲ್ಲದಿದ್ದರೆ ಪ್ರಪಂಚವೇ ನಡೆಯೋಲ್ಲ ಅಂದ್ಕೊಳ್ಳುತ್ತಾರೆ. ಆದರೆ, ಅವರು ಹೋದ ಮೇಲೆ ಏನೂ ವ್ಯತ್ಯಾಸ ಆಗುವುದಿಲ್ಲ. ಕೆಲವು ಸಲ, ಇನ್ನೂ ಚೆನ್ನಾಗಿ ಜೀವನ ಸುಗಮವಾಗುತ್ತೆ. ನೀನೇನೂ ಕಾತರ ಪಡಬೇಡ."

ತಾನು ಮಾತನಾಡ್ತಾ ಇರೋದು ವೀಣಾಗೆ ಕೇಳಿಸ್ತಾ ಇಲ್ಲ ಅಂತ ಕಾಣುತ್ತೆ. ಅವಳು ತನ್ನ ಪಾಡಿಗೆ ತಾನು, ಮಂಚದ ಮೇಲಿದ್ದ ವ್ಯಕ್ತಿಯ ಹಣೆಯ ಮೇಲೆ ಒದ್ದೆ ಬಟ್ಟೆಯನ್ನು ಹಾಕುತ್ತಾ, ತೆಗೆಯುತ್ತಿದ್ದಳು. ಮಂಚದ ಮೇಲಿದ್ದ ವ್ಯಕ್ತಿ ಏನೇನೋ ಬಡಬಡಿಸುತ್ತಿದ್ದ.





ಹೊರಗಡೆ ಕಾರಿನ ಶಬ್ದವಾದೊಡನೆ, ವೀಣಾ ಮುಂದಿನ ಬಾಗಿಲಿನೆಡೆಗೆ ಓಡಿದಳು. ಬಾಗಿಲು ತೆಗೆದಾಗ ಅವಳ ಸೋದರ ಮಾವನೇ ಬಂದಿದ್ದು ಎಂದು ಗೊತ್ತಾಯಿತು. ಸೋದರ ಮಾವನ ಜತೆಗೆ ಅವಳ ಅತ್ತೆಯೂ ಬಂದಿದ್ದಳು. ಅವರೆಲ್ಲರೂ ಬಂದಾಗ ಅವಳಿಗೆ ಮತ್ತೆ ಧೈರ್ಯ ಉಂಟಾಯಿತು. ಅವರು ಒಳಗೆ ಬರುತ್ತಿದ್ದಂತೆ, ನಡೆದ ವಿಚಾರವನ್ನೆಲ್ಲಾ ಮತ್ತೆ ಮತ್ತೆ ತಿಳಿಸಿ, ಪ್ರಶಾಂತ್ ಮಲಗಿರುವ ಕಡೆ ಕರೆದುಕೊಂಡು ಹೋದಳು. ಡಾಕ್ಟರ್ ಪ್ರಶಾಂತನನ್ನು ಕೂಲಂಕಷವಾಗಿ ಪರೀಕ್ಷೆ ಮಾಡತೊಡಗಿದರು. ಜ್ವರ ನೂರನಾಲ್ಕನ್ನು ದಾಟಿ ಮೇಲೆ ಹೋಗಿತ್ತು. ಅವನ ನಾಡಿ ನಾಗಾಲೋಟದಿಂದ ಬಡಿಯುತ್ತಿತ್ತು. ಮೈ ನಡುಗಿ, ಹಾಸಿಗೆಯಿಂದ ಮೇಲೆ ಮೇಲೆ ಎತ್ತಿ ಹಾಕುತ್ತಿತ್ತು. ರಗ್ಗನ್ನೆಲ್ಲಾ ತೆಗೆದು, ಒದ್ದೆ ಟವಲಿನಿಂದ ಮೈಯೆಲ್ಲಾ ಒರೆಸಿದರು. ಹಣೆಯ ಮೇಲೆ ತಣ್ಣೀರು ಬಟ್ಟೆಯನ್ನು ಹಾಕಲು ಹೇಳಿದರು. ನಂತರ ಜ್ವರ ಇಳಿಯಲು ಇಂಜೆಕ್ಷನ್ ಕೊಟ್ಟರು.



ಎಲ್ಲರೂ ಗಾಬರಿಯಾಗಿದ್ದರೂ, ಪ್ರಶಾಂತನಿಗೆ, ತಾನು ಮತ್ತಷ್ಟು ಸ್ವತಂತ್ರನಾಗಿ, ಹಗುರವಾಗಿ, ಯಾವ ನೋವೂ ಇಲ್ಲದೆ ಗಾಳಿಯಲ್ಲಿ ತೇಲುತ್ತಿದ್ದಂತೆ ಭಾಸವಾಗುತ್ತಿತ್ತು. ಇವರೆಲ್ಲಾ ಯಾಕೆ ತನ್ನ ಬಗ್ಗೆ ಇಷ್ಟು ಗಾಬರಿಯಾಗಿದ್ದಾರೆ ಎಂದು ಅವನಿಗೆ ಅರ್ಥವಾಗುತ್ತಿರಲಿಲ್ಲ. ತಾನು, ತನ್ನ ದೇಹದ ಬಂಧನದಿಂದ ಪೂರ್ತಿ ಮುಕ್ತಿ ಹೊಂದಿ, ನಾಲ್ಕನೆಯ ಆಯಾಮವನ್ನು ಸೇರಿದಂತೆ ಭಾಸವಾಯಿತು. ಈ ಆಯಾಮದಲ್ಲಿ ಅವನಿಗೆ ಯಾವ ಯೋಚನೆಯೂ ಇಲ್ಲ, ಯಾವ ಬಂಧನವೂ ಇಲ್ಲ, ಯಾರ ಕುರಿತ ಮಮಕಾರವೂ ತನ್ನನ್ನು, ಪುನಃ ತನ್ನ ಹಿಂದಿನ ಲೋಕಕ್ಕೆ ಸೆಳೆಯುತ್ತಿರಲಿಲ್ಲ. ತನಗೆ ಹೊಸ ಶಕ್ತಿ ಲಭ್ಯವಾಗಿತ್ತು. ತಾನು ಇಷ್ಟ ಬಂದ ಕಡೆ ಹಾರಬಹುದಿತ್ತು. ಕಾಲದಲ್ಲಿ ಹಿಂದೆ ಓಡಬಹುದಿತ್ತು. ತಾನು ಸೂರಿನ ಮೂಲೆಯಿಂದ ಎಷ್ಟು ಜೋರಾಗಿ ಮಾತನಾಡಿದರೂ ಯಾರಿಗೂ ಕೇಳಿಸುತ್ತಿರಲಿಲ್ಲ. ಅವರಿಗೆ ಕೇಳುವ ಹಾಗೆ ಮಾತನಾಡಬೇಕಾದರೆ ಮತ್ತೆ ಪ್ರಶಾಂತನ ದೇಹವನ್ನು ಸೇರಬೇಕಾಗಿತ್ತು. ತಾನು ಅವರನ್ನೆಲ್ಲಾ ಬಿಟ್ಟು ಗಗನದಲ್ಲಿ ತೇಲಿ ಹೊರಟ. ಹಾಗೆ ಹೊರಟಾಗ, ತನ್ನ ಸುತ್ತಲೂ ಇದ್ದ ಪ್ರಪಂಚ ಬದಲಾಗುತ್ತಿತ್ತು. ತನ್ನ ಮನೆ ಮತ್ತು ಸುತ್ತಮುತ್ತಲಿದ್ದ ಕಟ್ಟಡಗಳೆಲ್ಲಾ ಮಾಯವಾಗಿ, ಕೆಳಗಡೆ ಕಾಡುಗಳು ಬೆಳೆದುಕೊಂಡವು. ತುಂಬಿ ತುಳುಕುವ ಕೆರೆಗಳು ಮತ್ತು ನೆಲವನ್ನು ಸೀಳಿ ಹೊರಟ ನದಿಗಳು ಕಂಡವು. ತಾನು ಅತ್ಯಂತ ಸುಂದರವಾದ ಪ್ರಪಂಚಕ್ಕೆ ಹೋಗುತ್ತಿದ್ದೇನೆ ಅನಿಸಿತು. ಹಕ್ಕಿಯ ಹಾಗೆ ಹಾರುತ್ತಿದ್ದಾಗ, ಕೆಳಗಡೆ ಒಂದು ಹೆಂಚಿನ ಮನೆ ಕಾಣಿಸಿತು. ತನಗೆ ಅರಿವಿಲ್ಲದಂತೆಯೇ, ತನ್ನನ್ನು ಯಾವುದೋ ಶಕ್ತಿ ಅಲ್ಲಿ ಸೆಳೆಯುತ್ತಿರುವಂತೆ ಭಾಸವಾಯಿತು. ಆ ಹೆಂಚಿನ ಮನೆ ಪ್ರವೇಶಿಸಿದಾಗ, ಅಲ್ಲಿನ ದೃಶ್ಯ ಚಕಿತಗೊಳಿಸಿತು. ಅಲ್ಲಿ, ವಠಾರದಲ್ಲಿ, ಮಂಚದ ಮೇಲೆ, ತನ್ನಂತೆಯೇ ಒಂದು ವ್ಯಕ್ತಿ ಮಲಗಿತ್ತು. ಪಕ್ಕದಲ್ಲಿ ಒಂದು ಹೆಂಗಸು ಅಳುತ್ತಾ ಕುಳಿತಿತ್ತು. ಪಕ್ಕದಲ್ಲಿ ಮತ್ತೊಂದು ವ್ಯಕ್ತಿ ನಿಂತಿದ್ದು, ಆ ಹೆಂಗಸಿನ ಜತೆಗೆ ಮಾತನಾಡುತ್ತಿದ್ದರು. ಪ್ರಶಾಂತ್ ಇನ್ನೂ ಹತ್ತಿರ ಹೋದಾಗ ಆ ವ್ಯಕ್ತಿ ಪೂರ್ತಿ ತನ್ನಂತೆಯೇ ಇದ್ದುದು ಕಂಡು ಆಶ್ಚರ್ಯವಾಯಿತು. ಒಂದು ವೇಳೆ, ಪ್ರಶಾಂತನಿಗೆ, ತಾನೇ ಹೋಗಿ ಆ ದೇಹವನ್ನು ಪ್ರವೇಶಿಸಿದರೆ ಹೇಗೆ ಎಂಬ ಯೋಚನೆ ಬಂತು. ಬೇಡ, ತಾನು ಪ್ರಶಾಂತನಾಗಿಯೇ ಉಳಿಯೋಣ ಎಂದು ಆ ಯೋಚನೆಯನ್ನು ತಳ್ಳಿದ. ಪಕ್ಕದಲ್ಲಿದ್ದ ಹೆಂಗಸನ್ನು ನೋಡಿದಾಗ, ಅವರಿಗೆ ಸುಮಾರು ನಲವತ್ತು



ವರುಷ ಎನಿಸಿತು. ಅವರು ತನ್ನ ತಾಯಿಯಂತೆಯೇ ಕಂಡರಾದರೂ, ಅವನಿಗೆ ತನ್ನ ತಾಯಿಯು ಚಿಕ್ಕವರಾಗಿದ್ದಾಗ, ಯಾವ ರೀತಿ ಕಾಣುತ್ತಿದ್ದರು ಎಂಬುದು ಅಸ್ಪಷ್ಟವಾಗಿತ್ತು. ಆದರೂ ಕೂಡ ತನ್ನ ತಾಯಿಯ ನೆನಪು ಮರುಕಳಿಸಿ, ಅವರನ್ನು ನೋಡಿದ ಭಾವನೆಯೇ ಉಂಟಾಯಿತು. ಮೂರನೆಯ ವ್ಯಕ್ತಿಯ ಬಗ್ಗೆ ತನಗೆ ಅರಿವಿಲ್ಲದ ಹಾಗೆಯೇ, ಬಹಳ ಭಕ್ತಿ ಮತ್ತು ಗೌರವಭಾವ ಮೂಡಿತು. ಅವರ ಮುಖದಲ್ಲಿದ್ದ ತೇಜಸ್ಸನ್ನು ಕಂಡು, ಪ್ರಶಾಂತನಿಗೆ, ಅವರು ಖಂಡಿತ ಆ ರೋಗಿಗೆ ಸಹಾಯ ಮಾಡ್ತಾರೆ ಎಂದುಕೊಂಡ.

"ಪಂಡಿತರೇ, ಏನಾದರೂ ಮಾಡಿ ನನ್ನ ಮಗನನ್ನು ಉಳಿಸಿಕೊಡಿರಿ. ಅವನು ಯಾವಾಗಲೂ ಈ ತರಹ ಮಲಗಿದವನೇ ಅಲ್ಲ. ಏನಾಯಿತೋ ಏನೋ, ಸಾಯಂಕಾಲ ಮನೆಗೆ ಬಂದಾಗಿನಿಂದ, ಚಳಿ, ನಡುಕ ಮತ್ತು ಮೈ ಸುಡುವಂತಹ ಜ್ವರ. ಅವನು ಏನು ಮಾತನಾಡ್ತಾನೆ ಎನ್ನುವುದೇ ತಿಳಿಯುವುದಿಲ್ಲ. ನನಗೆ ತುಂಬಾ ಭಯ ಆಗುತ್ತೆ ಪಂಡಿತರೇ"

"ಏನಮ್ಮಾ ಮಾಡಲಿ, ನನಗೆ ಗೊತ್ತಿರುವ ಔಷಧಿಯನ್ನೆಲ್ಲಾ ಕೊಟ್ಟದ್ದೀನಿ. ಆದರೂ ಜ್ವರ ಇಳಿದಿಲ್ಲ. ಇಷ್ಟು ಜ್ವರದಲ್ಲಿ ಅವನಿಗೆ ತನ್ನ ಮೇಲಿನ ಸ್ವಾಧೀನ ತಪ್ತಾ ಇದೆ. ಏನೋ ಬಹಳ ಹೆದರಿಕೊಂಡಿದ್ದಾನೋ ಏನೋ. ದೇವರೇ ಅವನನ್ನು ಕಾಪಾಡಬೇಕು" ಎಂದರು.

"ಪಂಡಿತರೇ, ದಯವಿಟ್ಟು ಅವನನ್ನು ಉಳಿಸಿರಿ. ನನಗೆ ಇವನು ಒಬ್ಬನೇ ಮಗ. ಹೀಗೆ, ಕಾರಣವಿಲ್ಲದೆ, ಹಠಾತ್ತನೆ ಈ ರೀತಿ ಆಗಿದೆ. ಏನಾದರೂ ಮಾಡಿ ಜ್ವರ ಇಳಿಸಿ."

"ಆಗಲಿ. ಇನ್ನೊಂದು ಹೊಸ ಚೂರ್ಣವನ್ನು ತಯಾರಿಸಿ ಕೊಡೋಣ. ಆಮೇಲೆ ದೇವರ ಮೇಲೆ ಭಾರ ಹಾಕಿ, ಬೆಳಗ್ಗೆಯವರೆಗೆ ಕಾಯೋಣ. ಎಲ್ಲಾ ಹರಿ ಚಿತ್ತ" ಎಂದು ಹೇಳಿ

ಪಂಡಿತರು ಯಾವುದೋ ಮಂತ್ರವ
ಪಠಿಸುತ್ತಾ, ಇನ್ನೊಂದು ಹೊಸ ಔಷಧಿಯ
ತಯಾರಿಸಿ, ಜೇನುತುಪ್ಪದಲ್ಲಿ ಬೆರೆಸಿ, ನಿಧ
ವಾಗಿ ಅವನಿಗೆ ಕುಡಿಸಿದರು. ಅದು ಅ
ಗಂಟಲಿನಲ್ಲಿ ಇಳಿಯುತ್ತಿದ್ದಂತೆಯೇ,
ಬೆವರಲು ಪ್ರಾರಂಭವಾಯಿತು. ಪಂಡಿತ
ಬೆವರನ್ನು ಒದ್ದೆ ಬಟ್ಟೆಯಲ್ಲಿ ಒರೆಸುತ್ತಾ, ಒಂ
ಸಣ್ಣ ಚಮಚದಿಂದ, ಅವನಿಗೆ ನೀ
ಕುಡಿಸತೊಡಗಿದರು. ಒಂದು ಅರ್ಧ ಘ
ಯಲ್ಲಿ ಅವನ ಜ್ವರವೆಲ್ಲಾ ಇಳಿದು, ನಿಧಾನವ
ಕಣ್ತೆರೆದ.

"ನೋಡಮ್ಮಾ, ಇನ್ನು ಅಪಾಯ ಕಳೆದಿ
ಯಾಕೆ ಆ ರೀತಿ ಜ್ವರ ಬಂತೋ ದೇವರೇ ಬ
ಅವನೇ ಈಗ ದಯ ತೋರಿ ಜೀವ ಪ
ನೀಡಿದ್ದಾನೆ. ಅಥವಾ ನಿಮ್ಮ ಪ್ರೀತಿ ಅವನ
ಉಳಿಸಿತೋ ಏನೋ. ಇನ್ನೇನು ಭಯ
ಬೇಕಾಗಿಲ್ಲ" ಎಂದರು.

ಪ್ರಶಾಂತನಿಗೆ ಆಶ್ಚರ್ಯವಾಯಿ
ಅಲ್ಲಿಂದ ಮತ್ತೆ ಗಾಳಿಯಲ್ಲಿ ತೇಲಾಡಿ, ಕಾಲ
ಪ್ರಯಾಣ ಮಾಡಿ, ತನ್ನ ಕೊಠಡಿಗೆ ಬಂದ.



"ಮಾವಾ, ಯಾಕೆ ಜ್ವರ ಇಳಿತಾನೇ ಇ
ಇದ್ದಕ್ಕಿದ್ದ ಹಾಗೆ ಯಾಕೆ ಈ ರೀತಿ ಆಯಿತು,
ಔಷಧ ಕೊಟ್ಟರೂ ಯಾವ ಪ್ರಭಾವ
ಇಲ್ಲ?" ಎಂದಳು ವೀಣಾ, ಪ್ರಶಾ
ಹಣೆಯನ್ನು ಒದ್ದೆ ಬಟ್ಟೆಯಿಂದ ಒರೆಸುತ್ತಾ.

"ನನಗೆ ಗೊತ್ತಿಲ್ಲಮ್ಮಾ. ಏನೋ ನೊ
ಬಹಳ ಭಯಪಟ್ಕೊಂಡಿದ್ದಾನೆ ಅಂತ ಕಾಣ
ನಾನು ಕೊಟ್ಟಿರೋ ಔಷಧಿಗೆ, ಇಷ್ಟು ಹೊ
ಜ್ವರ ಪೂರ್ತಿ ಬಿಟ್ಟುಬಿಡಬೇಕಾಗಿತ್ತು. ಇ
ಹಾಗೆಯೇ ಇದೆ. ನಾವು ಮನುಷ್ಯ ಪ್ರಯ
ಮಾಡಬಹುದು ಅಷ್ಟೆ. ಇನ್ನು ದೇವರು ಹೇ
ನಡೆಸ್ತಾನೋ ನೋಡ್ಬೇಕು" ಎಂದರು.



"ವೀಣಾ, ನೋಡು ಯಾರೋ ಬಾಗಿಲು ತಟ್ಟಾ ಇದ್ದ ಹಾಗಿದೆ. ಬಾಗಿಲು ತೆಗೀಬೇಡ. ಯಾರೋ ನನ್ನನ್ನು ಕರ್‍ಕೊಂಡು ಹೋಗೋ ಹಾಗೆ ಕಾಣುತ್ತೆ. ವೀಣಾ, ನನಗೆ ಸಹಾಯ ಮಾಡೇ. ಏನು ಮಾಡಿದ್ರೂ ಅವರನ್ನ ನನ್ನ ಹತ್ತಿರ ಬಿಡಬೇಡ, ನನ್ನನ್ನು ಕಾಪಾಡು. ಅವರನ್ನು ಓಡಿಸಿಬಿಡು", ಪ್ರಶಾಂತ ಜ್ವರದಲ್ಲಿ ಬಡಬಡಿಸಿದ. ಡಾಕ್ಟರ್ ಹೇಳಿದರು, "ನೋಡು ವೀಣಾ, ಇನ್ನೂ ಡೆಲೀರಿಯಮ್‌ನಲ್ಲೇ ಇದ್ದಾನೆ. ನಾವು ಜ್ವರ ಇಳಿಸ್ದೇ ಇದ್ರೆ, ಏನಾಗುತ್ತೋ ಗೊತ್ತಿಲ್ಲ. ಆಸ್ಪತ್ರೆಗೆ ಕರ್‍ಕೊಂಡು ಹೋಗೋಣ." ಗಾಳಿಯಲ್ಲಿ ತೇಲಾಡುತ್ತಿದ್ದ ಪ್ರಶಾಂತನಿಗೆ ಅನ್ನಿಸಿತು. ತಾನು ಈಗ ಪೂರ್ಣ ಸ್ವತಂತ್ರನಾಗಿ, ಯಾವ ಬಂಧನವೂ ಇಲ್ಲದೆ ಸುಖವಾಗಿದ್ದಾಗ, ಇವರು ಯಾಕೆ ತನ್ನ ಬಗ್ಗೆ ಇಷ್ಟು ಯೋಚನೆ ಮಾಡುತ್ತಿದ್ದಾರೆ. ಆದರೂ ಪಾಪ, ಪ್ರಥಮ ಬಾರಿಗೆ ವೀಣಾಳನ್ನು ಬಿಟ್ಟು ಬರಲು ಆತಂಕವಾಯಿತು. ವೀಣಾ ಅಂತೂ ಪೆಚ್ಚಾಗಿ, ಏನೂ ಮಾಡಲು ತೋರದಂತೆ ಮಂಕಾಗಿ ಕುಳಿತಿದ್ದಳು. ಅವಳು ಅತ್ಯಂತ ಏಕಾಂಗಿನಿಯಾಗಿ ಕಂಡಳು. ಅವಳನ್ನು ಹೀಗೆ ಬಿಡುವುದು ಅಸಾಧ್ಯ ಅನಿಸಿತು. ವಿಚಿತ್ರ ಸೆಳೆತದಲ್ಲಿ ಮತ್ತೆ ತನ್ನ ದೇಹವನ್ನು ಪ್ರವೇಶಿಸಿದ ಪ್ರಶಾಂತ.

"ವೀಣಾ, ನಿನ್ನನ್ನು ಬಿಟ್ಟು ಎಲ್ಲೂ ಹೋಗುವುದಿಲ್ಲ. ಭಯ ಪಡ್ಬೇಡ. ಪಂಡಿತರು ನನಗೆ ಚೂರ್ಣ ಕೊಟ್ಟಿದ್ದಾರೆ. ಇನ್ನೇನೂ ಅಪಾಯವಿಲ್ಲ" ಎಂದ ಪ್ರಶಾಂತ.

ವೀಣಾ ಏನೂ ತೋರದೆ, ಮತ್ತೆ ಒದ್ದೆ ಬಟ್ಟೆಯಿಂದ ಮುಖವನ್ನೆಲ್ಲಾ ಒರೆಸಿದಳು. ಬಹಳ ಹೊತ್ತಾದ ಮೇಲೆ, ಪ್ರಶಾಂತನಿಗೆ ಬೆವರಲು ಪ್ರಾರಂಭವಾಯಿತು. ಜ್ವರ ಕ್ರಮೇಣ ಇಳಿಯತೊಡಗಿತು. ಹೊರಗಡೆ ಮಳೆ ಪೂರ್ತಿ ನಿಂತಿತ್ತು. ಪ್ರಶಾಂತನ ಕೊಠಡಿಯ ಪೂರ್ವಾಭಿಮುಖವಾದ ಕಿಟಕಿಗಳಿಂದ ಬೆಳಗಿನ ಸೂರ್ಯ ಕಿರಣಗಳು ಪ್ರಶಾಂತನ ಮುಖದ ಮೇಲೆ ಬಿದ್ದವು.





ಹೊರಗಡೆಯಲ್ಲಿ ಕತ್ತಲು ತುಂಬಿದ್ದರೂ, ತಾನು ಬೆಳಕಿನ ಸಾಗರದಲ್ಲಿ ಈಜಾಡುತ್ತಿದ್ದಂತೆ ಮತ್ತು ಎಲ್ಲವೂ ಸ್ಫಟಿಕದಂತೆ ಸ್ಪಷ್ಟವಾಗಿ ~~[illegible]~~ ಕಾಣತೊಡಗಿತು.

ಶೋಭಾ ಸುಧೀಂದ್ರ



**ಶಶಿಕಲಾ ಚಂದ್ರಶೇಖರ್**

# ತೋರು ಬೆರಳು

ರಾಬರ್ಟ್‌ನನ್ನು ಸಂಗಾತಿಯೆಂದು ಬಳುವಳಿಯಾಗಿ ಕೊಟ್ಟ ಈ ಊರನ್ನು ಬಿಟ್ಟು ಹೋಗಬೇಕೆನ್ನಿಸಿತ್ತು ಆ್ಯಶ್ಲಿಗೆ. ಈ ಊರನ್ನು ಬಿಟ್ಟು ಹೋಗಬೇಕು ಎನ್ನಿಸಿದ್ದಕ್ಕಿಂತ, ಈ ಜಾಗಕ್ಕೆ ಹೊಂದಿಕೊಂಡಿದ್ದ ಎಲ್ಲಾ ನೆನಪುಗಳಿಗೆ ಬೆನ್ನು ತಿರುಗಿಸಿ ಓಡಬೇಕೆಂದಿತ್ತು ಅವಳಿಗೆ. ರಾಬರ್ಟ್ ಮತ್ತು ಅವಳು ತಿರುಗಾಡಿದ ದಾರಿಗಳಲ್ಲಿ, ಒಂಟಿಯಾಗಿ ನಡೆದಾಡಲು ಆಗದಾಗಿತ್ತು ಅವಳಿಂದ. ಅವನ ಸಂಗವಿಲ್ಲದೆ ಅವಳ ಪಾಲಿಗೆ ಈ ಊರ ಸರೋವರದ ಅಲೆಗಳು ಸ್ತಬ್ಧವಾಗಿದ್ದವು. ಸರೋವರದ ಎದುರಿಗಿದ್ದ ಚಿಲುಮೆ

ಬತ್ತಿತ್ತು. ಚಿಲುಮೆಯ ಸುತ್ತ ಕಳಕಳಿಸುತ್ತಿದ್ದ ವನದ ಗುಲಾಬಿಯ ಪಕಳೆಗಳೆಲ್ಲಾ ಬುಳುಬುಳು ಉದುರಿಹೋಗಿದ್ದವು, ಮತ್ತೆಂದೂ ಅರಳದಂತೆ. ಬೀಸುತ್ತಿದ್ದ ಗಾಳಿಗೇ ಜೀವವಿಲ್ಲದಿರುವಾಗ ಉಸಿರಾಡುವುದಾದರೂ ಹೇಗೆ ಆ್ಯಶ್ಲಿ? ಈ ಜಾಗದಲ್ಲಿ ಪಾಪ!

ಈ ಊರಲ್ಲಿ ಇನ್ನು ಬದುಕಿರುವುದು ಸಾಧ್ಯವೇ ಇಲ್ಲ ಎನ್ನಿಸಿದ ಒಂದು ದಿನ, ಆ್ಯಶ್ಲಿ, ಗೋಡೆಯ ಮೇಲಿದ್ದ ಉತ್ತರ ಅಮೆರಿಕಾ ಭೂಪಟದ ಮೇಲೆ ಕಣ್ಮುಚ್ಚಿ ಬೆರಳಿಟ್ಟಳು. ಬೆರಳಿಟ್ಟ ಜಾಗದಲ್ಲಿದ್ದ ಊರಿಗೆ ಹೋಗುವುದೆಂದು ನಿರ್ಧರಿಸಿದ್ದಳು. ಅವಳು ಊರು ಬಿಡುವವಳಿದ್ದಾಳೆ ಎಂದು ವಿಚಲಿತರಾಗುವವರು ಯಾರೂ ಇರಲಿಲ್ಲ ಈ ಊರಿನಲ್ಲಿ. ಮಾಂಟ್ಯಾನದಲ್ಲಿದ್ದ ಅವಳಮ್ಮನಿಗೆ ಮತ್ತು ಮಲತಂದೆಗೆ, ಅವಳು ಟೆಕ್ಸಾಸಿಗಾದರೂ ಹೋಗಲೀ, ಟಿಂಬಕ್ಟುಗಾದರೂ ಹೋಗಲಿ, ವ್ಯತ್ಯಾಸ ಎನ್ನಿಸುತ್ತಿರಲಿಲ್ಲ. ಮೇರಿಲ್ಯಾಂಡಿಗೆ ಬದಲು, ಫೇರಿಲ್ಯಾಂಡಿಗೆ ಹೋಗ್ತಿದ್ದೀನಿ ಎಂದಿದ್ದರೂ, 'ಟೇಕ್ ಕೇರ್ ಹನಿ' ಎಂದು ಮೂರು ಪದಗಳಲ್ಲಿ ಶುಭ ಕೋರಿರುತ್ತಿದ್ದರು.

ಆ್ಯಶ್ಲಿ ಅವರನ್ನು ನೋಡುತ್ತಿದ್ದದ್ದೇ ವರ್ಷಕ್ಕೊಮ್ಮೆ. 'ಥ್ಯಾಂಕ್ಸ್ ಗಿವಿಂಗ್' ಹಬ್ಬದ ದಿನ. ರಾಬರ್ಟ್ ಅವಳ ಸಂಗಾತಿಯಾದ ದಿನದಿಂದ, ಅವರನ್ನು ವರ್ಷಕ್ಕೊಮ್ಮೆ ಸಂಧಿಸುವ ಸಂಪ್ರದಾಯವೂ ಮುರಿದುಬಿದ್ದಿತ್ತು. ಬೇಸಿಗೆಯ ರಜೆಯಾದ್ದರಿಂದ, 'ಕ್ಯಷೇಲ್ ಎಲಿಮೆಂಟರಿ ಶಾಲೆ'ಯಲ್ಲಿ ಕಲಿಸುತ್ತಿದ್ದ ಆ್ಯಶ್ಲಿ ಬೇರೆ ಊರಿಗೆ ಹೋಗುವುದನ್ನು ತಡೆಯಲು ಅವಳ ಮೆಚ್ಚಿನ ಶಿಷ್ಯ ಬಳಗವೂ ಇರಲಿಲ್ಲ. ಭೂಪಟದಲ್ಲಷ್ಟೇ ನೋಡಿದ್ದ ಅವಳ ಬೆರಳಾಯ್ಕೆಯ ಊರಿಗೆ ಹೊರಡುವುದೆಂದು ಖಚಿತವಾಯ್ತು.

ಹೇಗಿದ್ದರೂ, ಅವಳ ಅಪಾರ್ಟ್‌ಮೆಂಟಿನ ಸಾಮಾನುಗಳನ್ನು ಅಷ್ಟೊಂದು ದೂರದ ಊರಿಗೆ ಸಾಗಿಸುವುದು, ಹೊಸ ಸಾಮಾನುಗಳನ್ನು ಕೊಂಡುಕೊಳ್ಳುವುದಕ್ಕಿಂತ ಹೆಚ್ಚು ದುಬಾರಿಯಾದ್ದರಿಂದ, ಅವನ್ನೆಲ್ಲಾ-ತಟ್ಟೆ, ಸ್ಪೂನ್, ಹಾಸಿಗೆ, ಹೊದಿಕೆ, ಕಿಟಕಿ ಪರದೆ, ಶೂಸ್ ಸಮೇತ-'ಗರಾಜ್ ಸೇಲಿ'ನಲ್ಲಿ ಮಾರಾಟ ಮಾಡಿಬಿಟ್ಟಳು. ಕಡೆಗೆ ಅವಳ ಬಳಿ ಉಳಿದಿದ್ದು ಹೆಗಲ ಮೇಲೊಂದು ಬ್ಯಾಕ್ ಪ್ಯಾಕ್, ಕಾಲಲ್ಲಿ ರೋಲರ್ ಬ್ಲೇಡ್, ಬೆರಳಲ್ಲಿ ರಾಬರ್ಟ್ ತೊಡಿಸಿದ್ದ 'ಪ್ರಾಮಿಸ್ ರಿಂಗ್' ಮತ್ತು ಗಂಟಲಲ್ಲಿ ಸ್ಥಿರವಾಗಿ ನಿಂತ ನೋವಿನ ಗಡ್ಡೆ.

ಎಲ್ಲಾ ಕಕೇಷಿಯನ್ನರ ಪೇಲವ ಬಿಳಿ ಚರ್ಮದ ಬಣ್ಣವನ್ನು, ಸಮೃದ್ಧ ಮಹಾಗನಿ ಬಣ್ಣಕ್ಕೆ ತಿರುಗಿಸಬಲ್ಲ ಹದವಾದ ಕಿರಣಗಳು ಭೂಮಿ ಮುಟ್ಟುತ್ತಿದ್ದ ಸಂಜೆ, ಆ್ಯಶ್ಲಿ ಈ ಊರನ್ನು ಬಿಟ್ಟು ಹೊರಡುವ ಹಿಂದಿನ ದಿನ-ಅವಳು ಸರೋವರದ ದಂಡೆಯುದ್ದಕ್ಕೂ ಕಾಲಿನಡಿಯ ಚಕ್ರಗಳನ್ನು ಉರುಳಿಸುತ್ತಾ ಸುತ್ತಾಡಿದಳು. ಬೇಕಾದ್ದೇನೆಂದು ತಿಳಿದೂ, ಅದು ಸಿಗಲಾರದ್ದೆಂದೂ ಗೊತ್ತಿದ್ದೂ, ಚಕ್ರಗಳನ್ನು ಮೀಟಿ, ಮೀಟಿ ಮೈಲಿಗಟ್ಟಲೆ, ಗುರಿಯಿಲ್ಲದೆ ಹರಿದಾಡಿದ್ದಳು.

ಬಹಳ ಹೊತ್ತು ಹರಿದಾಡಿ ದಣಿದ ಮೇಲೆ ಸರೋವರದ ಒಳಗೆ ಮೈ ಚಾಚಿಕೊಂಡಿರುವ ಮರದ ಡೆಕ್ ಮೇಲೆ ನಿಧಾನವಾಗಿ ನಡೆದು, ಅದರ ತುದಿಯಲ್ಲಿ ಕುಸಿದು ಕುಳಿತಳು. ದಡದಿಂದ ಮೈಲಿ ಒಳಗಿರುವ ಅದೇ ಮರದ ಡೆಕ್ ತುದಿಯಲ್ಲಿ, ರಾಬರ್ಟ್ ಮತ್ತು ಆ್ಯಶ್ಲಿ ಗಂಟೆಗಟ್ಟಲೆ, ಒಬ್ಬರಿಗೊಬ್ಬರು ಆತು ಕುಳಿತದ್ದಿದೆ. ನಿಶ್ಶಬ್ದದೊಳಗಿನ ಶಬ್ದವನ್ನು ಆಲಿಸಿದ್ದಿದೆ. ಅವರು ಒಬ್ಬರನ್ನೊಬ್ಬರು ಸರ್ವಸ್ವವಾಗಿ ಅರಿತಿದ್ದೇ ಹಕ್ಕಿ ಗೂಡಿಗೆ ಹಾರುವ ಈ ಹೊತ್ತಿನಲ್ಲಿ; ಮಿರುಗು ಮೈಯ್ಯ ಮೀನುಗಳು ಈಜುವ ಈ ಸರೋವರದ ದಡದಲ್ಲಿ ಕುಳಿತೇ, ಮೂರು ವರ್ಷ ಒಟ್ಟಿಗಿದ್ದುದು.



ಸರೋವರದ ದಂಡೆಯ ಮೇಲಿದ್ದ ಸಾಕಷ್ಟು ಬಿಕಿನಿ ಮೈಗಳನ್ನು ಕಂಡಾಗಿಸಿ, ಮತ್ತೂ ಬೇಕೆನಿಸಿದರೆ ನಾಳೆ ಬರುವೆ ಎಂದು ಕಣ್ಣು ಮಿಟುಕಿಸಿ, ಸೂರ್ಯ ಮರೆಯಾದ ಮೇಲೂ ಆ್ಯಶ್ಲಿ ಒಂಟಿಯಾಗಿಯೇ ಅಲ್ಲಿ ಕುಳಿತಿದ್ದಳು. ಸಂಜೆಯ ಕೆಂಪನ್ನು ಕೊಡವಿ, ನಕ್ಷತ್ರಗಳನ್ನು ಹೊದ್ದ ಕಡುನೀಲಿಯಾಕಾಶ ಮೈ ತಳೆಯಿತು ಅವಳ ಕಣ್ಮುಂದೆ. ಆ ಕ್ಷಣ ಆ್ಯಶ್ಲಿಯ ಮನ ಆಶಿಸಿತು ಬೃಹದಾಕಾರದ ಈ ಆಕಾಶ ಟೀವಿ ತೆರೆಯಾಗಬಾರದೇಕೆ? ನಾವೆಲ್ಲಾ ಅದರಲ್ಲಿನ ಪಾತ್ರಗಳಾಗಿ, ಮಧ್ಯಾಹ್ನಗಳಲ್ಲಿ ಬರುವ ಟೀವಿ ಧಾರಾವಾಹಿಯಂತೆ ನಮ್ಮೆಲ್ಲರ ಕಥೆ ಬೆಳೆದು, ಇದ್ದಕ್ಕಿದ್ದ ಹಾಗೆ ನನ್ನ ರಾಬರ್ಟ್, 'ಇಲ್ಲಿಯವರೆಗೆ ನಡೆದಿದ್ದೆಲ್ಲವೂ ನೀನು ಕಂಡ ಕೆಟ್ಟ ಕನಸಷ್ಟೇ. ನಾನೆಲ್ಲೂ ಹೋಗಿಲ್ಲ. ಇಲ್ಲೇ ಇದ್ದೀನಿ' ಎಂದು ಎದ್ದು ಬರಬಾರದೇ? ಈ ಯೋಚನೆಯಿಂದ ಅವಳ ಗಂಟಲು ಇನ್ನಷ್ಟು ಒತ್ತಿದಂತಾಗಿ, ಹೊಟ್ಟೆಯ ಆಳದಿಂದ ಬಿಕ್ಕಳಿಕೆ ತಡೆಯದೇ ಆಚೆ ಬಂತು. ಕಣ್ಣ ನೀರು ಜಲ್ಲನೆ ಚಿಮ್ಮಿ, ಕೆನ್ನೆಯ ಮೇಲೆ ಹರಿಯತೊಡಗಿತು. ಇಪ್ಪತ್ತು ವರ್ಷಗಳ ಹಿಂದೆ ಅವಳ ಅಪ್ಪ ಅವಳನ್ನು, ಅವಳ ಅಮ್ಮ ಮತ್ತು ತಮ್ಮಂದಿರನ್ನು ಹಿಂದೆ ಬಿಟ್ಟು ತಿರುಗಿಯೂ ನೋಡದೇ ಹೊರಟುಹೋದ ದಿನ ಈ ರೀತಿ ಅತ್ತಿದ್ದಳು. ಅವಳಮ್ಮ, ಕೆಂಪಾದ ಕಣ್ಣುಗಳಿಂದ ಆ್ಯಶ್ಲಿಯನ್ನು ದಿಟ್ಟಿಸಿ, ತಲೆ ನೇವರಿಸುತ್ತಾ ಹೇಳಿದ್ದಳು, 'ಬಿಗ್ ಗರ್ಲ್ಸ್ ಡೋಂಟ್ ಕ್ರೈ.' ದೊಡ್ಡ ಹುಡುಗಿ ಎನ್ನಿಸಿಕೊಳ್ಳುವ ಹಂಬಲ ಉಳ್ಳ ಐದು ವರ್ಷದ ಹುಡುಗಿಯಲ್ಲ ಆ್ಯಶ್ಲಿ ಈಗ.

ನಿಧಾನವಾಗಿ ಬೆರಳ 'ಪ್ರಾಮಿಸ್ ರಿಂಗ್' ತೆಗೆದು, ಮುಷ್ಟಿಯಲ್ಲಿ ಗಟ್ಟಿಯಾಗಿ ಹಿಡಿದು, ಕಣ್ಮುಚ್ಚಿ, ದೀರ್ಘವಾಗಿ ಉಸಿರೆಳೆದುಕೊಂಡಳು. ಸರೋವರದ ಅಲೆಯ ಮೊರೆತ ಅವಳ ಶರೀರವನ್ನು ಇಡಿಯಾಗಿ ಆವರಿಸಿತು. ಅದೇ ಸ್ಥಿತಿಯಲ್ಲೇ ಬಲಗೈ ಎತ್ತಿ, ತನ್ನ ಕೈಯ್ಯಲ್ಲಿದ್ದ ಉಂಗುರವನ್ನು ರೊಯ್ಯನೆ ನೀರಿಗೆಸೆದಳ
ಫಳಕ್ ಎಂದು ನೀರಿಗೆ ಬಿದ್ದ ಉಂಗುರದ ಸ
ಅವಳೆದೆಯಲ್ಲಿ ನೆನಪಿನ ಅಲೆಯನ್ನೆಬ್ಬಿಸಿ
ರಾಬರ್ಟ್ ಅವಳ ಬೆರಳಿಗೆ ಆ ಉಂಗ
ತೊಡಿಸುತ್ತಾ, "ಆ್ಯಶ್ಲಿ ನಿನ್ನನ್ನು ತುಂ
ಪ್ರೀತಿಸುತ್ತೇನೆ. ನನ್ನ ಬಾಳ ಸಂಗಾತಿ ನೀ
ನೀನಿಲ್ಲದ ಜೀವನವೇ ನನಗಿಲ್ಲ. ನಿನ್ನನ್ನೆಂದ
ಬಿಟ್ಟಿರಲಾರೆ. ಸದ್ಯದಲ್ಲೊಂದು ದಿನ, ಇ
ಬೆರಳಿಗೆ ಮದುವೆಯುಂಗುರವಿಟ್ಟು, ನಿನ್ನ
ವಧುವಾಗಿ ನನ್ನ ತೋಳುಗಳಲ್ಲಿ ಮನೆ
ಹೊಸ್ತಿಲೊಳಗೆ ಎತ್ತೊಯ್ಯುತ್ತೇನೆ" ಎಂ
ಮುದ್ರಿಸಿ, ಪ್ರಾಮಿಸ್ ಮಾಡಿದ್ದ. ಕೊಟ್ಟ ಮಾತ
ಉಳಿಸಿಕೊಳ್ಳುವ ಅವಕಾಶವೇ ಬರಲ
ರಾಬರ್ಟ್‌ನ ಪಾಲಿಗೆ. ರಾಬರ್ಟ್ ನಡೆಸು
ಫೈಟರ್ ಜೆಟ್-ಎಫ್-ಎಂಟು, ಇರಾ
ಮರಳುಗಾಡಿನ ಮೇಲೆ, ಶತ್ರುಗಳ ದಾಳಿಗೆ ಸಿ
ಧೂಮ್ರಾಕಾಶದ ನಡುವೆ ಸಿಡಿದು ಹೋಗಿ
ರಾಬರ್ಟ್‌ನ ಅವಶೇಷ ಕೂಡ ದೊರೆತಿರಲ
ಯೋಧ ರಾಬರ್ಟ್ ಲೆನರ್ಡ್ ರಾಷ್ಟ್ರಧ್ವ
ಮೂಲೆಯ ನಕ್ಷತ್ರವಾದ. ದೇಶಭಕ್ತಿಯ ಸಂ
ವಾದ. ಕಡೆಗೆ, ರಾಷ್ಟ್ರ ಗೌರವ, ಮರ
ಗಳೊಂದಿಗೆ ಚರ್ಚಿನಲ್ಲಿ ನಡೆದ ಸಂಸ
ಸಭೆಯಲ್ಲಿ, ಅಧ್ಯಕ್ಷರಿಂದ, ಅವನ ತಂದೆತಾ
ಯರಿಗೆ ಕೊಡಲ್ಪಟ್ಟ ಧ್ವಜದ ಪುಟ್ಟ ಮಡಿಕೆಯ
ದೇಶಾಭಿಮಾನದ ಸಾಕ್ಷಿಯಾಗಿ ಉಳಿದುಹೋ
ಮಿಸೆಸ್ ಆ್ಯಶ್ಲಿ ಲೆನಾರ್ಡ್ ಆಗುವ ಕನಸು ಕಂ
ಅವಳು ಮಿಸ್ ಆ್ಯಶ್ಲಿ ಸೀಮೋರ್ ಆಗಿ
ಉಳಿದು ಹೋದಳು...

'ಫ್ಲವರ್ ಹಿಲ್ ಎಲಿಮೆಂಟರಿ' ಶಾಲ
ಟೀಚರ್ ಆಗಿ ಆ್ಯಶ್ಲಿ, ತನ್ನ ದಿನಗಳನ್ನು ಹ
ದಾಗಿ ಪ್ರಾರಂಭಿಸಿದಳು. ಸೆಪ್ಟೆಂಬರ್ ಒಂ
ಶಾಲೆಯ ಮೊದಲ ದಿನ. ತರಗತಿ
ಇಪ್ಪತ್ತೊಂದು ಪುಟ್ಟ ಕುರ್ಚಿ, ಮೇಜುಗ

ಸಾಲಾಗಿ ಜೋಡಿಸಲಾಗಿತ್ತು. ಮೇಜಿನ ತುದಿಯಲ್ಲಿ, ಆಯಾ ಜಾಗದಲ್ಲಿ ಕೂರುವ ಪುಟಾಣಿಯ ಹೆಸರನ್ನು ಅಂಟುಹಾಕಲಾಗಿತ್ತು. ಗೋಡೆಯ ತುಂಬೆಲ್ಲಾ ಬಣ್ಣ ಬಣ್ಣದ ಭಿತ್ತಿ ಚಿತ್ರಗಳು ತೂಗುತ್ತಿದ್ದವು. ಮಕ್ಕಳಲ್ಲಿ ಕುತೂಹಲ ಹುಟ್ಟಿಸಲು ಬೇಕಾಗುವ ಎಲ್ಲಾ ವಸ್ತುಗಳನ್ನು ಎಚ್ಚರಿಕೆಯಿಂದ ಆಯ್ದು ಜೋಡಿಸಿದ್ದಳು, ಆ್ಯಶ್ಲಿ. ಅವಳೇ ಆರಿಸಿ ಬರೆದ ಕೆಲ ಭಿತ್ತಿ ಪತ್ರಗಳೂ ಗೋಡೆಗಂಟಿಕೊಂಡಿದ್ದವು. 'ಬದುಕು ಪಂದ್ಯವಲ್ಲ ಪಯಣ' ಎಂದು ಒಂದು ಬರಹವಿದ್ದರೆ, ಮತ್ತೊಂದು, ಹೆಲೆನ್ ಕೆಲ್ಲರಳ ವಾಕ್ಯವಾಗಿತ್ತು: 'ಪ್ರಪಂಚದಲ್ಲಿ ಅತ್ಯಂತ ಉತ್ತಮವಾದ ಮತ್ತು ಸುಂದರವಾದ ವಸ್ತುಗಳನ್ನು ಕಾಣಲಾಗದು ಅಥವಾ ಸ್ಪರ್ಶಿಸಲಾಗದು. ಅವುಗಳನ್ನು ಹೃದಯದಿಂದ ಅನುಭವಿಸಬೇಕಷ್ಟೇ.' ಒಟ್ಟಿನಲ್ಲಿ ಅವಳ ಜೊತೆ ನಾಲ್ಕನೇ ತರಗತಿಯ ಕೋಣೆ, ಇಪ್ಪತ್ತೊಂದು ಮಕ್ಕಳ ಬರುವಿಕೆಗಾಗಿ ಸಜ್ಜಾಗಿ ಕಾದಿತ್ತು.

ಗಂಟೆಯ ಸದ್ದು ಕೇಳುತ್ತಿದ್ದಂತೆಯೇ, ಶಾಲೆಯ ಹೊರ ಆವರಣದಲ್ಲಿ ಸಾಲಾಗಿ ನಿಂತಿದ್ದ ಮಕ್ಕಳು ಉತ್ಸಾಹದಿಂದ ಒಳಬಂದರು. ಹೆಚ್ಚಿನ ಮಕ್ಕಳು, ಎರಡು ವಾರದ ಹಿಂದೆ, 'ಓಪನ್ ಹೌಸ್'ದಿನ ಬಂದಿದ್ದರಿಂದ, ಅವರ ಪರಿಚಯ ಅವಳಿಗಾಗಲೇ ಇತ್ತು.

''ನಾನಿಲ್ಲಿ'' ''ನೀನೆಲ್ಲಿ?'' ''ಅವನೆಲ್ಲಿ?''... ಗುಜುಗುಜು ಮಕ್ಕಳ ಕಲರವ ನಡೆದಿತ್ತು. ''ನಿಶ್ಶಬ್ದ!'' ಎಂದು ಕಿರುಚಿ ಅವರ ಉತ್ಸಾಹಕ್ಕೆ ಭಂಗ ತರಬೇಕೆನಿಸಲಿಲ್ಲ. ಆದರೂ ಗುಜು ಗುಜು ಗೆರೆ ಮೀರಿ ಕಿರುಚಾಟ ಎನ್ನಿಸಿದ್ದರಿಂದ, ಅವಳು ''ಎಕ್ಸ್‌ಕ್ಯೂಸ್ ಮಿ'' ಎಂದು ಎಲ್ಲರ ಗಮನ ಸೆಳೆದಳು. ''ಬೇಸಿಗೆಯಲ್ಲಿ ನೀವೆಲ್ಲಾ ಮುಖ್ಯವಾದ ಒಂದು ಶಾಲಾ ನಿಯಮವನ್ನು ಮರೆತಂತಿದೆ'' ಎಂದಳು. ಥಟ್ಟನೆ ತರಗತಿಯಲ್ಲಿ ಸಂಪೂರ್ಣ ನಿಶ್ಶಬ್ದ ಆವರಿಸಿತು. ಅದೇ ವೇಳೆಗೆ ಸ್ಪೀಕರ್‌ನಲ್ಲಿ ತೇಲಿ ಬಂದ, 'ಪ್ಲೀಸ್ ರೈಸ್ ಫಾರ್ ದ ಪ್ಲೆಡ್ಜ್ ಆಫ್ ಅಲಿಜನ್ಸ್...' ಎಂಬ ದನಿಗೆ ಎದ್ದುನಿಂತ ಮಕ್ಕಳು, ಬಲಗೈ ಹಸ್ತ ಎದೆಯ ಮೇಲಿಟ್ಟುಕೊಂಡು, ಧ್ವನಿ ಕೂಡಿಸಿದರು.

ಅದಾದ ನಂತರ ಆ್ಯಶ್ಲಿ ಮೃದುವಾದ ದನಿಯಲ್ಲಿ ಹೇಳಿದಳು, ''ನಿಮ್ಮ ಮೇಜಿನ ಮೇಲೆ ನಿಮಗಾಗಿ ಬರೆದಿಟ್ಟ ಪತ್ರವೊಂದಿದೆ, ದಯವಿಟ್ಟು ಮನಸ್ಸಿನಲ್ಲಿ ಓದಿ.''

ಪತ್ರದ ಸಾಲುಗಳು ಹೀಗಿದ್ದವು: ನನ್ನ ತರಗತಿಗೆ ನಿಮಗೆ ಸ್ವಾಗತ. ನನ್ನ ಹೆಸರು ಮಿಸ್. ಆ್ಯಶ್ಲಿ ಸೀಮೋರ್. ನಾನು ನಿಮ್ಮೆಲ್ಲರ ನಿರೀಕ್ಷೆಯಲ್ಲಿದ್ದೆ. ನೀವೆಲ್ಲಾ ನನ್ನ ತರಗತಿಯಲ್ಲಿರುವುದು ನಿಜಕ್ಕೂ ಸಂತೋಷದ ಸಂಗತಿ. ಈ ವರ್ಷ ನಾವೆಲ್ಲಾ ಒಟ್ಟಾಗಿ ಕಲಿಯುವುದು ಬಹಳಷ್ಟಿದೆ. ಕಲಿಯುವ ಕ್ರಿಯೆ ಅತ್ಯಂತ ವಿನೋದವಾದದ್ದು. ನಾನಂತೂ ಈ ಸಂಭ್ರಮದ ದಿನಗಳಿಗಾಗಿ ತಯ್ಯಾರಿದ್ದೀನಿ. ನೀವೂ ಅದಕ್ಕಾಗಿ ಸಿದ್ಧರಾಗಿ ಬಂದಿರುವಿರೆಂದೇ ನನ್ನ ನಂಬಿಕೆ.

ಶುಭ ಹಾರೈಕೆಗಳು.

ಪ್ರೀತಿಯಿಂದ,

ಆ್ಯಶ್ಲಿ ಸೀಮೋರ್.

ಪತ್ರ ಓದುತ್ತಿದ್ದಂತೆ ಎಲ್ಲಾ ಮಕ್ಕಳ ಮುಖದಲ್ಲೂ ಸಂತೋಷದ ಛಾಯೆ ಅರಳಿತ್ತು. ಒಣಗುತ್ತಿರುವ ಜೀವನವನ್ನು ಮತ್ತೆ ಚಿಗುರಿಸುವುದು ಇಂತಹ ಎಳೆ ಕ್ಷಣಗಳೆನ್ನಿಸಿತ್ತು ಆ್ಯಶ್ಲಿಗೆ.

ದಿನ ಕಳೆದಂತೆ ಆ್ಯಶ್ಲಿ ಹೊಸ ದಿನಚರಿಗೆ ಹೊಂದಿಕೊಳ್ಳತೊಡಗಿದಳು. ರಾಬರ್ಟ್‌ನ ನೆನಪು ಅವಳ ಹೃದಯವನ್ನು ಹಿಂಡಿಹಾಕುತ್ತಿತ್ತು. ರಾಬರ್ಟ್‌ನ ನೆನಪುಗಳಿಲ್ಲದ ಒಂದೇ ಒಂದು ದಿನ ಕೂಡ ಸರಿದುಹೋದುದಿಲ್ಲ, ಅವಳ ಬದುಕಿನಲ್ಲಿ. ಎಷ್ಟೋ ಸಲ ಅವಳರ್ಧ ಶರೀರಕ್ಕೆ ಪಾರ್ಶ್ವವಾಯು ಬಡಿದಂತೆನ್ನಿಸುತ್ತಿತ್ತು. 'ವೈ ಮಿ?' ಎಂಬ ಅವಳ ಎರಡು ಪದಗಳ ಪ್ರಶ್ನೆಗೆ ಉತ್ತರವೇ ಸಿಗದೆ ಒದ್ದಾಡುತ್ತಿದ್ದಳು. ಆಗೆಲ್ಲಾ ಅವಳು ತನ್ನ ಮನಸ್ಸನ್ನು ಬೇರೆ ಕೆಲಸಗಳಲ್ಲಿ ಕೇಂದ್ರೀಕರಿಸಲು





ಪ್ರಯತ್ನಿಸುತ್ತಿದ್ದಳು. ಈ ಪ್ರಯತ್ನದಲ್ಲಿ ಕೆಲವೊಮ್ಮೆ ಸೋಲು... ಕೆಲವೊಮ್ಮೆ ಗೆಲುವು... ಹಾಗೆಯೇ ಸಾಗಿತ್ತು, ಅವಳ ಹಗಲು ಇರುಳುಗಳ ಮಗುಚಿನ ನಡೆ.

ತರಗತಿಯ ಎಲ್ಲಾ 21 ಮಕ್ಕಳೂ ಅವಳಿಗೆ ಅಚ್ಚುಮೆಚ್ಚಿನವರಾಗಿದ್ದರು. ಆದರೆ ಮ್ಯಾಥ್ಯೂ ಮಿಲಿಯನ್ ಮಕ್ಕಳಲ್ಲಿ ಒಬ್ಬ. ಅಚ್ಚುಕಟ್ಟಾದ ನಡೆ-ನುಡಿ, ಉಡುಗೆ-ತೊಡುಗೆ. ಜೀವಿಸಿರುವುದೇ ಸಂಭ್ರಮ ಎನ್ನುವ ಅವನ ನಡವಳಿಕೆಯ ಧೋರಣೆಯೇ, ಅವನ ಅಪರೂಪದ ತುಂಟಾಟ ಕೂಡ ಹಿತ ಎನ್ನಿಸುವಂತೆ ಮಾಡಿತ್ತು. ಮ್ಯಾಥ್ಯೂ ಜೊತೆಯ ಎಲ್ಲಾ ಹುಡುಗರ ನಡುವೆ ಹೆಚ್ಚು ಜನಪ್ರಿಯ. ಅವನ ಜೊತೆ ಆಡಲು, ಪಕ್ಕ ಕೂರಲು ಸ್ಪರ್ಧೆ ಇರುತ್ತಿತ್ತು. ಮ್ಯಾಥ್ಯೂ ಭಾರಿ ಮಾತುಗಾರ ಕೂಡ. ಅಪ್ಪಣೆ ಇಲ್ಲದೆ ಮಾತನಾಡಬಾರದು ಎಂದು ಎಷ್ಟು ಹೇಳಿದರೂ ಮತ್ತೆ ಮಾತನಾಡುತ್ತಿದ್ದ. ಕೇಳದೇ ತನ್ನ ಜಾಗ ಬಿಟ್ಟು ಓಡಾಡುತ್ತಿದ್ದ. ಅವನ ಉದ್ದೇಶವೇನೋ ಒಳ್ಳೆಯದಿತ್ತು. ಪಕ್ಕದ ಸಹಪಾಠಿಗೆ ಸಲಹೆ ಕೊಡಲೋ, ಮತ್ತೊಬ್ಬ ಸ್ನೇಹಿತನಿಗೆ ಲೆಕ್ಕ ಮುಗಿಸಲು ಸಹಾಯ ಮಾಡಲೋ ಹೋಗಿ ನಿಯಮ ಮುರಿಯುತ್ತಿದ್ದ. ಪ್ರತೀ ಸಲ ಅವನ ವರ್ತನೆಯನ್ನು ತಿದ್ದಿಕೊಳ್ಳಲು ಎಚ್ಚರಿಸಿದಾಗಲೂ, 'ನನ್ನನ್ನು ತಿದ್ದಿದ್ದಕ್ಕಾಗಿ ವಂದನೆಗಳು ಮಿಸ್. ಸೀಮೋರ್' ಎನ್ನುತ್ತಿದ್ದ. ಮೊದಮೊದಲು ಅವನ ಈ ಪ್ರಾಮಾಣಿಕ ಉತ್ತರಕ್ಕೆ ಹೇಗೆ ಪ್ರತಿಕ್ರಿಯಿಸಬೇಕು ಎಂದು ಆ್ಯಶ್ಲಿಗೆ ತಿಳಿಯುತ್ತಿರಲಿಲ್ಲ. ದಿನ ಕಳೆದಂತೆ ಅವನ ಈ ವಾಕ್ಯ ಅವಳಿಗೂ ಅಭ್ಯಾಸವಾಗತೊಡಗಿತು.

ಅವಳ ಸಹನೆಯ ಮಟ್ಟ ಮೀರಿದ ಒಂದು ದಿನ, ಮ್ಯಾಥ್ಯೂ ದಿನಕ್ಕಿಂತ ಹೆಚ್ಚು ಮಾತನಾಡಿದ್ದ. ಅವನನ್ನು ದಿಟ್ಟಿಸುತ್ತಾ ಆ್ಯಶ್ಲಿ, ''ನೀನು ಮತ್ತೆ ಇನ್ನೊಂದು ಬಾರಿ ಮಾತನಾಡಿನೋಡು, ನಿನ್ನ ಬಾಯಿಗೆ ಪಟ್ಟಿ ಅಂಟಿಸಿಬಿಡುವೆ'' ಎಂದಳು. ಆ

ಗಳಿಗೆ ಆ್ಯಶ್ಲಿ, ಗೊತ್ತಿಲ್ಲದಂತೆ ಒಂದು ಸಾಮ
ತಪ್ಪು ಮಾಡಿದ್ದಳು. 'ಎಚ್ಚರಿಕೆಯ' ಜೊತೆ
ಜೋಡಿ ಕಣ್ಣುಗಳ ಸಾಕ್ಷಿಯಾಗಿ 'ಶಿಕ್ಷೆ'ಯ
ವಿಧಿಸಿಬಿಟ್ಟಿದ್ದಳು. ಅದರ ಅರಿವು ಅವಳಿಗಾ
ಹೆಚ್ಚು ಸಮಯ ಹಿಡಿಯಲಿಲ್ಲ. ಕೆ
ನಿಮಿಷಗಳ ನಂತರ ಬ್ರಯಾನ್ ಧ್ವನಿ
ಬಂತು. ''ಮಿಸ್.ಸೀಮೋರ್ ಮ್ಯಾಥ್ಯೂ
ಮಾತನಾಡಿದ''. ಮ್ಯಾಥ್ಯೂ ಮೇಲೆ
ಇಡಲು ಅವಳೇನೂ ಯಾರಿಗೂ ಹೇಳಿರಲ
'ಎಚ್ಚರಿಕೆ', 'ಶಿಕ್ಷೆ', ಸಾರ್ವಜನಿಕವಾದ
ಗುಂಪು, ಪೊಲೀಸ್‌ಕಾರ್ಯವನ್ನು ತಮ್ಮ ಮೆ
ಆರೋಪಿಸಿಕೊಳ್ಳುವುದು ಸರ್ವೇಸಾಮ
ಆಗಲೇ ಆ್ಯಶ್ಲಿಗೆ ಗೊತ್ತಾಗಿದ್ದು, ತಾನು ಮಾ
ತಪ್ಪು ಏನೆಂದು. ಇಟ್ಟ ಹೆಜ್ಜೆ ಹಿಂತೆಗೆಯಲಾ
ಸ್ಥಿತಿ ಅವಳದು. ಇಪ್ಪತ್ತು ಜೊತೆ ನೀಲಿ, ಹ
ಕಂದು, ಕಪ್ಪು ಕಣ್ಣುಗಳು ಅವಳೆಡೆಗೆ ದೃಷ್ಟಿ ಬ
'ಈಗೇನು...?' ಎಂದು ಪ್ರಶ್ನಿಸುತ್ತಿರುವ
ಅವಳೇ ಹೇಳಿದಂತೆ, ಮ್ಯಾಥ್ಯೂ ಬಾಯಿಗ
ಹಾಕಲೇಬೇಕಿತ್ತು. ಆ್ಯಶ್ಲಿ ಸ್ಯಾಟಿನ್ ಪಟ್ಟಿ
ತುಂಡೊಂದನ್ನು ತೆಗೆದು, ಮ್ಯಾಥ್ಯೂ ಬಾಯಿ
ಮೇಲಿಟ್ಟು, ಅವನ ಕಿವಿ ಬಳಸಿ ತ
ಹಿಂಭಾಗಕ್ಕೆ ಗಂಟು ಬಿಗಿದಳು. ಅ
ಮಕ್ಕಳೆಲ್ಲಾ ಸದ್ದಿಲ್ಲದೆ ಕುಳಿತಿದ್ದರು. ತನ್ನ ಟೇಬ
ಹಿಂತಿರುಗಿ, ಕುರ್ಚಿಯ ಮೇಲೆ ಕು
ಕೊಳ್ಳುತ್ತಾ, ಮ್ಯಾಥ್ಯೂನ ಕಡೆ ನೋಡಿ
ಮ್ಯಾಥ್ಯೂ ಆ್ಯಶ್ಲಿಯನ್ನು ನೋಡುತ್ತಾ
ಮಿಟುಕಿಸಿ ನಕ್ಕ. ಅವಳಿಗೂ ನಗು ತ
ಲಾಗಲಿಲ್ಲ. ಮಕ್ಕಳು ಉತ್ತೇಜಿತರಾಗಿ, 'ಮ್ಯಾಥ
ಮ್ಯಾಥ್ಯೂ...' ಎಂದು ಕೂಗತೊಡಗಿದರು.
ಪಟ್ಟಿ ತೆಗೆದ ತಕ್ಷಣ ಅವನ ಬಾಯಿಂದ ಒ
ಮೊದಲ ವಾಕ್ಯ, 'ನನ್ನನ್ನು ತಿದ್ದಿದ್ದ
ವಂದನೆಗಳು ಮಿಸ್. ಸೀಮೋರ್.'

ನಾಲ್ಕನೇ ತರಗತಿಯ ಮಕ್ಕಳ ಊಟದ
ಹನ್ನೆರಡೂವರೆಯಿಂದ ಒಂದು ಗಂಟೆಯವ



ಒಂದು ಗಂಟೆಯಿಂದ ಒಂದೂವರೆಯ ಮಧ್ಯ, ಮೈದಾನದಲ್ಲಿ ಆಟ. ಆ ಅವಧಿಯಲ್ಲಿ ಆ್ಯಶ್ಲಿ, ಹೊರಗಾಗಲೀ, ಟೀಚರ್ಸ್ ಲೌಂಜ್‌ಗಾಗಲೀ ಹೋಗುವುದಿಲ್ಲ. ತನ್ನ ತರಗತಿಯಲ್ಲಿ ಏನಾದರೂ ಓದುತ್ತಲೋ, ಬರೆಯುತ್ತಲೋ ಕಾಲ ಕಳೆಯುತ್ತಾಳೆ. ಕೆಲವೊಮ್ಮೆ, ಆಟದ ಮೈದಾನದಲ್ಲಿ ಚೇಷ್ಟೆ ಮಾಡಿ ಶಿಕ್ಷೆಗೊಳಗಾದ ಮಕ್ಕಳೋ, ಇಲ್ಲ ಹುಷಾರಿಲ್ಲದೆ ಮೈದಾನದಲ್ಲಿ ಆಡಲು ಇಷ್ಟಪಡದ ಮಕ್ಕಳೋ ಅವಳ ಕೋಣೆಯಲ್ಲಿ ಸಮಯ ಕಳೆಯುವುದುಂಟು. ಮ್ಯಾಥ್ಯೂ ಕೂಡ ಹಲವು ಬಾರಿ ಅವಳ ಜೊತೆಯಲ್ಲಿ ಸಮಯ ಕಳೆದಿದ್ದಾನೆ.

ಒಮ್ಮೆ, ಶಾಲಾ ಮೈದಾನದ ತುದಿಯಲ್ಲಿದ್ದ ಪೊದೆಯೊಂದರ ಕೆಳಗೆ ಕುಂಯ್ಯ್‌ಗುಡುತ್ತಿದ್ದ ನಾಯಿ ಮರಿಯನ್ನೆತ್ತಿ ತಂದು ನೀರು ಕುಡಿಸುತ್ತಿದ್ದ ಎಂದು, ಎರಡು ದಿನ ಮ್ಯಾಥ್ಯೂ ಊಟದ ಕೋಣೆಗಾಗಲಿ, ಆಟದ ಮೈದಾನಕ್ಕಾಗಲೀ, ಹೋಗಬಾರದೆಂದು ಶಿಕ್ಷೆ ವಿಧಿಸಲಾಗಿತ್ತು. ಮ್ಯಾಥ್ಯೂಗೆ ಇದರಿಂದ ಬೇಸರವೇನೂ ಆಗಿರಲಿಲ್ಲ. ಅವನಿಗೆ ತನ್ನ ಮೆಚ್ಚಿನ ಟೀಚರ್ ಜೊತೆ ಕಾಲ ಕಳೆಯುವುದು ಪ್ರಿಯವಾದ ವಿಷಯವೇ ಆಗಿತ್ತು. ಮೇಲಾಗಿ, ಬಿಸಿಲಲ್ಲಿ ನೀರಡಿಕೆಯಿಂದ ಕಂಗಾಲಾಗಿದ್ದ ನಾಯಿಗೆ ನೀರು ಕುಡಿಸಿದ್ದು, ತಾನು ಮಾಡಲೇಬೇಕಿದ್ದ ಮಾನವೀಯ ಕೆಲಸವೆಂದೇ ಅವನ ವಾದ.

ಮತ್ತೊಮ್ಮೆ, ಹಕ್ಕಿ ಗೂಡಿಗೆ ಕಲ್ಲು ತೂರುತ್ತಿದ್ದ ಎಸ್ತೆವಾನನ್ನು ತಡೆದು, ಅದೇ ಕಲ್ಲಿನಿಂದ ಅವನಿಗೆ ಹೊಡೆದಿದ್ದನಂತೆ. ಅವನು ಅನುಭವಿಸಿದಷ್ಟೇ ನೋವು, ಆ ಪುಟ್ಟ ಮರಿಗಳಿಗೂ ಆಗುವುದು ಎಂದು ತೋರಿಸಲು. ಆಗಲೂ ತಾನು ಮಾಡಿದ್ದು ಸರಿ, 'ಎಸ್ತೆವಾನ್', ಮುಂದೆ ಇನ್ನಾರಿಗಾದರೂ ನೋವುಂಟು ಮಾಡುವ ಮೊದಲು ಯೋಚಿಸುತ್ತಾನೆ' ಎನ್ನುವುದು ಮ್ಯಾಥ್ಯೂನ ತರ್ಕವಾಗಿತ್ತು.

ವಸಂತದ ರಜೆ ಶುರುವಾಗುವ ಮುನ್ನಾ ವಾರದ ಒಂದು ಮಧ್ಯಾಹ್ನ ಆ್ಯಶ್ಲಿ, ತನ್ನ ಬಿಡುವಿನ ವೇಳೆಯಲ್ಲಿ ಮಕ್ಕಳ ಅಂಕ ಪತ್ರವನ್ನು ಬರೆಯುತ್ತಿದ್ದಳು. 'ಮಿಸ್ ಸೀಮೋರ್' ಎಂಬ ಧ್ವನಿಗೆ ಬೆಚ್ಚಿ ತಲೆ ಎತ್ತಿದವಳಿಗೆ ಕಂಡದ್ದು ಮ್ಯಾಥ್ಯೂ ಹಾಗೂ ಅವನ ಪಕ್ಕದಲ್ಲಿ ನಿಂತಿದ್ದ ಆಟದ ಬಯಲಿನ ಮೇಲ್ವಿಚಾರಕಿ ಮಿಸೆಸ್. ರೂಡಾಲ್ಫ್. ಅವಳ ಮುಖ ಕೆಂಪೇರಿತ್ತು. ಅವಳಿಗೆ ವಿಪರೀತ ಕೋಪ ಬಂದಿದ್ದು ಸ್ಪಷ್ಟವಾಗಿತ್ತು. ಆ್ಯಶ್ಲಿ ಬಾಯ್ದೆರೆಯುವ ಮೊದಲೇ, ''ಇವನನ್ನು ಹಿಡಿಯುವುದು ಬಹಳ ಕಷ್ಟ. ಪ್ರತೀ ದಿನ ಇವನ ದಾಂಧಲೆ ಹೆಚ್ಚಾಗುತ್ತಿದೆ. ನೀನೆ ತಾನೆ ಇವನ ಹೋಂ ರೂಂ ಟೀಚರ್. ಇವನ ತಂದೆ-ತಾಯಿ ಜೊತೆಗೆ ಮಾತನಾಡು. ಇಲ್ಲದಿದ್ದರೆ ಪ್ರಿನ್ಸಿಪಾಲರಿಗೆ ಹೇಳಿ ಇವನನ್ನು ಶಾಲೆಯಿಂದ ಹೊರಗೆ ಹಾಕಿಸುತ್ತೇನೆ'' ಎಂದು ಗುಡುಗಿ ಉತ್ತರಕ್ಕೂ ಕಾಯದೆ ಹೊರಟೇ ಹೋದಳು. ಮಿಸೆಸ್ ರೂಡಾಲ್ಫ್ ಸ್ವಲ್ಪ 'ಅತೀ' ಸ್ವಭಾವದಳೆಂದು ಎಲ್ಲರಿಗೂ ಗೊತ್ತಿದ್ದೇ. ನಿಯಮಗಳನ್ನು ಯಾವಾಗಲೂ ಕಬ್ಬಿಣದ ಕಡ್ಡಿಯೆಂದೇ ನೋಡುತ್ತಾಳೆ. ಒಂದು ಗೆರೆಯಷ್ಟೂ ಬಗ್ಗಿಸಲಾಗದು, ಅವಳ ಪ್ರಕಾರ. ಮಕ್ಕಳು ಅವಳನ್ನು ಗುಟ್ಟಾಗಿ, 'ರೂಡಾಲ್ಫ್ ದಿ ಬ್ಯಾಡ್ ವಿಚ್'

ಎಂದೇ ಕರೆಯುತ್ತಾರೆ. ಮಂಕಾಗಿ ನಿಂತ ಮ್ಯಾಥ್ಯೂಗೆ ಒಳ ಬರಲು ಹೇಳಿದ ಆ್ಯಶ್ಲಿ, ''ಇವತ್ತಿನ ನಿನ್ನ ಪ್ರತಾಪವೇನು? ಯಾರನ್ನು ಉಳಿಸಹೋಗಿ ಯಾರ ಬೆನ್ನು ಮುರಿದೆ?'' ಎಂದಳು.

ಮ್ಯಾಥ್ಯೂ ಧ್ವನಿ ದಿನದಂತೆ ಗೆಲುವಾಗಿರದೆ ನೋವಿನಿಂದ ಭಾರವಾಗಿತ್ತು. ''ಮಿಸೆಸ್ ರೂಡಾಲ್ಫ್ ನನ್ನನ್ನು ದ್ವೇಷಿಸುತ್ತಾಳೆ'' ಎಂದ.

''ಹಾಗೇನಿಲ್ಲ, ಬೇರೆಯವರಿಗಿಂತ ಅವಳು ಸ್ವಲ್ಪ ಶಿಸ್ತಿನವಳಷ್ಟೇ. ಇಲ್ಲದಿದ್ದರೆ ನಿನ್ನಂತಹ ನೂರಾರು ಚಿಟ್ಟೆಗಳನ್ನು ಹಾರಿಹೋಗದಂತೆ ನೋಡಿಕೊಳ್ಳುವುದು ಅವಳಿಗೂ ಕಷ್ಟ ತಾನೇ?'' ಎಂದಳು. ''ಇಲ್ಲ. ಮಿಸೆಸ್ ರೂಡಾಲ್ಫ್‌ಗೆ ಯಾವಾಗಲೂ ನನ್ನ ಮೇಲೇ ಕಣ್ಣು. ನಾನು ಹೇಳುವುದು ಅವಳಿಗೆ ಅರ್ಥವೇ ಆಗುವುದಿಲ್ಲಾ. ಯಾವಾಗಲೂ ನನ್ನ ಮೇಲೆ ಸಿಡುಕುತ್ತಾಳೆ''.

''ಅದೆಲ್ಲಾ ನಿನ್ನ ಊಹೆ ಅಷ್ಟೆ. ಇವತ್ತೇನು ಮಾಡಿದೆ ಹೇಳು ಮೊದಲು.''

ಮ್ಯಾಥ್ಯೂ ವಿವರಿಸತೊಡಗಿದ, ''ನಾನು, ಮಾರ್ಕ್, ಕ್ಲಾರಾ, ಜೇಮ್ಸ್ ಮತ್ತು ವಿಲ್ಲಿ ಒಂದು ಕ್ಲಬ್ ಶುರುಮಾಡಿಕೊಂಡಿದ್ದೇವೆ. ಯಾವಾಗಲೂ ನಾವು ಒಟ್ಟಿಗೇ ಇರುತ್ತೇವೆ, ಒಬ್ಬರನ್ನೊಬ್ಬರು ನಂಬುತ್ತೇವೆ ಎಂದು ಪ್ರತಿಜ್ಞೆ ಮಾಡಿದ್ದೇವೆ. ಕ್ಲಬ್ಬಿಗೆ ಸೇರುವ ಎಲ್ಲರೂ, ಪ್ರಾರಂಭದ ವಿಧಿಯಲ್ಲಿ ಪಾಲ್ಗೊಳ್ಳಬೇಕು. ಅಂದರೆ, ನಮ್ಮಲ್ಲಿ ಪ್ರತಿಯೊಬ್ಬರೂ, ಸರದಿ ಪ್ರಕಾರ, ಆಟದ ಮೈದಾನದಲ್ಲಿರುವ ಜಿಮ್ನಾಸ್ಟಿಕ್ಸ್ ಬಾರ್ ಮೇಲೆ ಹತ್ತಿ, ಬೇರೆ ದಿಕ್ಕಿಗೆ ಮುಖ ಮಾಡಿ, ಬೆನ್ನು ಅಡಿಯಾಗಿ ಕೆಳಗೆ ಬೀಳಬೇಕು. ಕೆಳಗೆ ನಿಂತ ಮಿಕ್ಕ ಸದಸ್ಯರು ಒಬ್ಬರಿಗೊಬ್ಬರು ಕೈ ಹೆಣೆದುಕೊಂಡು ಸುರಕ್ಷಣಾ ಬಲೆಯಲ್ಲಿ ಹಿಡಿಯುವಂತೆ, ಅವನನ್ನು ಹಿಡಿಯಬೇಕು.'' ಮ್ಯಾಥ್ಯೂ ವಿವರ ಕೇಳಿದ ನಂತರ ಮುಖ ಕೆಂಪಾಗಿಸಿಕೊಳ್ಳುವ ಸರದಿ ಆ್ಯಶ್ಲಿಯದಾಗಿತ್ತು.

''ಓಹ್, ನನಗೆ ಇದ್ದಲ್ಲಿ ಯಾರು ಕಲಿಸಿದರು? ಇದು ಎಷ್ಟು ಅಪಾಯಕಾರಿ ಅಂತ ನಿನಗೆ ಗೊತ್ತಿದೆ ಏನು? ಮೇಲೆ ನಿಂತವನು ಆಯ ತಪ್ಪಿ ಬಿದ್ದರೆ ಕೈ ಕಾಲು ಮುರಿಯುವುದಿಲ್ಲವೇನು?'' ಎಂದು ಹೆಚ್ಚುಕಮ್ಮಿ ಕಿರುಚುವ ಧ್ವನಿಯಲ್ಲಿ ಕೇಳಿದಳು. ಮ್ಯಾಥ್ಯೂ ಅಷ್ಟೇ ತಂಪಾಗಿ, ''ಇಲ್ಲ, ನಾನೇ ಮೊದಲು ಮಾಡಿ ತೋರಿಸಿದೆ. ನನಗೇನೂ ಆಗಿಲ್ಲ ಮಿಸ್. ಸೀಮೋರ್. ಬೀಳುವವನಿಗೆ ಕೆಳಗೆ ನಿಂತ ಸ್ನೇಹಿತರಲ್ಲಿ ಸಂಪೂರ್ಣ ನಂಬಿಕೆ ಇದ್ದರೆ, ಆಯ ತಪ್ಪುವ ಸಾಧ್ಯತೆಯೇ ಇಲ್ಲ. ಹಾಗೆಯೇ ಕೆಳಗೆ ಹಿಡಿಯು ವವರಿಗೆ ಮೇಲಿಂದ ಬೀಳುತ್ತಿರುವವನ ಬಗ್ಗೆ ಇರುವ ಪ್ರೀತಿ, ಜವಾಬ್ದಾರಿಯನ್ನು ಸೃಷ್ಟಿಸುತ್ತೆ. ಹೀಗಾಗಿ ಅಪಾಯಕ್ಕೆ ಜಾಗವೇ ಇಲ್ಲ...'' ಅವನ ಮುಖದಲ್ಲಿದ್ದ ದೃಢವಾದ ನಂಬಿಕೆಯನ್ನು ಕಂಡು ಆ್ಯಶ್ಲಿ ಬೆಪ್ಪಾದಳು. ಮ್ಯಾಥ್ಯೂ ಹೇಳುತ್ತಿದ್ದದ್ದೇನೂ ಸುಳ್ಳಲ್ಲ. ಜೀವನದ ಸತ್ಯವದು. ಪರಸ್ಪರ ನಂಬಿಕೆ ಮತ್ತು ಪ್ರೀತಿ ಇರುವವರು, ಒಬ್ಬರನ್ನೊಬ್ಬರು ಕೆಳಗೆ ಬೀಳದಂತೆ ರಕ್ಷಿಸಬಲ್ಲರು. ಈ ಮುಗ್ಧವಾದ ಹೃದಯದಲ್ಲಿ ಎಂತಹ ಆಳವಾದ ಭಾವನೆಗಳಿವೆಯಲ್ಲಾ ಎಂದುಕೊಂಡಳು ಅವಳು.

ಆ್ಯಶ್ಲಿ ಏನು ಹೇಳುವಳೊ ಎಂದು ಕಣ್ಣರಳಿಸಿ ಕುಳಿತಿದ್ದ ಮ್ಯಾಥ್ಯೂ. ಆ್ಯಶ್ಲಿ ತನ್ನ ಭಾವನೆಗಳನ್ನು ಹತೋಟಿಯಲ್ಲಿರಿಸಿಕೊಳ್ಳಲು ಪ್ರಯತ್ನಿಸುತ್ತಾ, ''ಮ್ಯಾಥ್ಯೂ, ನಿನ್ನಷ್ಟು ಧೈರ್ಯಶಾಲಿ ಮತ್ತು ಬೆಚ್ಚಗಿನ ಹೃದಯದ ಹುಡುಗನನ್ನು ನಾನು ನೋಡೇ ಇಲ್ಲ. ನೀನು ನಮ್ಮೆಲ್ಲರ ಪ್ರೀತಿಯ ಹುಡುಗ. ನಿನ್ನಲ್ಲಿ ಸೂಕ್ಷ್ಮವಾದ ಒಳನೋಟವಿದೆ. ನೀನೊಬ್ಬ ವಿಶೇಶ ವ್ಯಕ್ತಿಯಾಗುತ್ತಿ. ಆದರೆ, ಪ್ರಾಮಿಸ್ ಮಾಡು, ಇನ್ನೆಂದೂ ಇಂತಹ ಅಪಾಯಕಾರಿ ಸಾಹಸ ಮಾಡುವುದಿಲ್ಲ ಎಂದು'' ಎಂದಳು, ಅವನ ಅಂಗೈಯನ್ನು ಮೃದುವಾಗಿ ಒತ್ತುತ್ತಾ. ಏನನ್ನೋ ಹೇಳಹೊರಟ ಮ್ಯಾಥ್ಯೂ, ಹೇಳದೆ, ನಿಧಾನವಾಗಿ, ''ಮಾಡೋಲ್ಲ'' ಎಂದು ಮೆದುವಾಗಿ ನಕ್ಕ. ಆ್ಯಶ್ಲಿ ಹಗುರಾದಳು.

ಮಾರ್ಚ್ 21, ಕ್ಯಾಲೆಂಡರ್ ಪ್ರಕಾರ ವಸಂತದ ಮೊದಲ ದಿನ. ಚಳಿಗಾಲ

ಕ್ಯಾಲೆಂಡರ್ ಮೇಲೆ ಮುಗಿದಿದ್ದರೂ, ಪ್ರಕೃತಿಗೆಲ್ಲಿಯ ಕ್ಯಾಲೆಂಡರ್ ಕಾಲ್ತೊಡಕು. ಇನ್ನೂ ಚಳಿ ಇತ್ತು. ರಸ್ತೆ ಪಕ್ಕದಲ್ಲಿ ಬಿದ್ದಿದ್ದ ಹಿಮದ ಗಡ್ಡೆಗಳಿನ್ನೂ ಕರಗಿರಲಿಲ್ಲ. ಭಿನ್ನರಾಶಿಯ ಲೆಕ್ಕ ಹೇಳಿಕೊಡಲು ಆ್ಯಶ್ಲಿ, ಅದನ್ನು ಕಲಿಯಲು ಮಕ್ಕಳು ಹೆಣಗಾಡುತ್ತಿದ್ದರು. ಮಕ್ಕಳೆಲ್ಲರ ಮುಖಗಳು ಕಲಿಕೆಗೂ, ನಗುವಿಗೂ ಯಾವ ಸಂಬಂಧವೂ ಇಲ್ಲಾ ಎಂಬಂತೆ ಬಿಗಿದುಕೊಂಡಿದ್ದವು. ಇಂತಹ ದಿನಗಳಲ್ಲಿ ಮ್ಯಾಥ್ಯೂ ಇದ್ದಿದ್ದರೆ, ದಿನದ ಕ್ಷಣಗಳು ಸ್ವಲ್ಪವಾದರೂ ಸಡಿಲವಾಗಿರುತ್ತಿದ್ದವು ಎನ್ನಿಸಿತ್ತು ಆ್ಯಶ್ಲಿಗೆ. ನಿನ್ನೆಯೂ ಮ್ಯಾಥ್ಯೂ ಶಾಲೆಗೆ ಬಂದಿರಲಿಲ್ಲ ಎನ್ನುವುದು ನೆನಪಾಯಿತು ಅವಳಿಗೆ. ಅಂತೂ ಇಂತು 2:50ಕ್ಕೆ ಶಾಲೆಯ ಗಂಟೆ ಬಾರಿಸಿ, ದಿನದ ಮುಕ್ತಾಯವನ್ನು ಸಾರಿತು. ಮಕ್ಕಳೆಲ್ಲಾ ಬಿಡುಗಡೆಯ ಉಸಿರುಬಿಡುತ್ತಾ, ಮನೆಗೆ ಹೋಗುವ ಗಡಿಬಿಡಿಯಲ್ಲಿದ್ದರು. ಅಷ್ಟರಲ್ಲಿ ಗೋಡೆಯ ಮೇಲಿದ್ದ ಸ್ಪೀಕರ್‌ನಲ್ಲಿ ಆಫೀಸ್ ಸೆಕ್ರೆಟರಿ ಮೊರೀನ್ ಲಾಲರಳ ಧ್ವನಿ ಕೇಳಿಬಂತು, ''ಮಿಸ್ ಸೀಮೋರ್, ದಯವಿಟ್ಟು ಈಗಿಂದೀಗಲೇ ಪ್ರಿನ್ಸಿಪಾಲ್ ಕೊಠಡಿಗೆ ಬರಬೇಕಂತೆ.'' ಆ್ಯಶ್ಲಿಗೆ ಆಶ್ಚರ್ಯ ಎನ್ನಿಸಿತು. ಈ ಹೊತ್ತಿನಲ್ಲಿ ಅಂತಹದ್ದೇನಿರಬಹುದೆಂದು ಯೋಚಿಸುತ್ತಾ ಪ್ರಿನ್ಸಿಪಾಲರ ಕೋಣೆ ತಲುಪಿದಳು.

ಬಾಗಿಲ ಬಳಿ ನಿಂತಿದ್ದ ಪ್ರಿನ್ಸಿಪಾಲರ ಮುಖದಲ್ಲಿ ರಕ್ತ ಸಂಚಾರವಿದ್ದಂತಿರಲಿಲ್ಲ. ಕಣ್ಣುಗಳಲ್ಲಿ ಜೀವಂತಿಕೆಯ ಚಿಹ್ನೆಯೇ ಕಾಣಲಿಲ್ಲ. ಪಕ್ಕದ ಕುರ್ಚಿಯಲ್ಲಿ ಮಿಸೆಸ್. ರೂಡಾಲ್ಫ್ ನಿಸ್ತೇಜವಾಗಿ ಕುಳಿತಿದ್ದಳು. ಎದುರು ಗೋಡೆಯ ಅಗಲಕ್ಕೂ ಇದ್ದ ಗಾಜಿನ ಕಿಟಕಿಯಿಂದ ಕಾಣುತ್ತಿದ್ದ ಊದಾ ಬಣ್ಣದ ಆಕಾಶ... ಚಿಗುರುವುದನ್ನೇ ಮರೆತಂತೆ ನಿಂತಿದ್ದ ಬೋಳುಮರಗಳು... ಇಡೀ ವಾತಾವರಣವೇ ನಿರ್ಜೀವವಾಗಿತ್ತು. ಯಾಕೋ ಆ್ಯಶ್ಲಿಯ ಬೆನ್ನುಹುರಿಯಲ್ಲಿ ಕಾಣಿಸಿಕೊಂಡ ಛಳುಕು, ನರ ನಾಡಿಯಾಳಲ್ಲಿ ಹರಿದು, ಇಡೀ ಶರೀರವನ್ನು ಆವರಿಸಿತನ್ನಿಸಿತು. ಆ್ಯಶ್ಲಿ ಕೂರದೇ, ನಿಂತೇ ಇದ್ದಳು. ಯಾರನ್ನೂ ಉದ್ದೇಶಿಸದ, ಶೂನ್ಯದಲ್ಲಿ ದೃಷ್ಟಿ ನೆಟ್ಟ ಪ್ರಿನ್ಸಿಪಾಲರು, ಕಂಪಿಸುವ ದನಿಯಲ್ಲಿ ಹೇಳಿದ್ದಿಷ್ಟು.

'ಅಮ್ಮ-ಅಪ್ಪ ಕೆಲಸಕ್ಕೆ ಹೋದ ಒಂದು ಗಂಟೆಯ ನಂತರ ಶಾಲೆಗೆ ಹೊರಡುತ್ತಿದ್ದ ಮ್ಯಾಥ್ಯೂ, ಮನೆಯ ಕಾರ ಗರಾಜಿನ ಮೂಲಕ ಆಚೆ ಹೋಗುತ್ತಿದ್ದ. ಮನೆಯ ಕೀಲಿ ಜೋಪಾನವಾಗಿ ಇಟ್ಟುಕೊಳ್ಳುವ ಜವಾಬ್ದಾರಿ ಅವನಲ್ಲಿಲ್ಲ, ಮನೆಯ ಬೀಗ ಹಾಕುವುದನ್ನು ಮರೆತಾನು ಎನ್ನುವ ಕಾರಣಕ್ಕಾಗಿ ಈ ವ್ಯವಸ್ಥೆ ಮಾಡಿದ್ದರಂತೆ. ವಿದ್ಯುತ್ತಿನ ಸ್ವಯಂಚಾಲಿತ ಗರಾಜಿನ ಬಾಗಿಲು ಮುಚ್ಚಲು ಗುಂಡಿ ಒತ್ತಿ, ಅದು ಮುಚ್ಚುವುದರಲ್ಲಿ ಕೆಳಗೆ ನುಸುಳಿ, ಮ್ಯಾಥ್ಯೂ ಹೊರಗೋಡುತ್ತಿದ್ದ. ಬಾಗಿಲು ಅವನ ಬೆನ್ನ ಹಿಂದೆ ಮುಚ್ಚಿಕೊಳ್ಳುತ್ತಿತ್ತು. ನಿನ್ನೆ ಬೆಳಗ್ಗೆ, ಕೆಳಗಿಳಿಯುತ್ತಿದ್ದ ಗರಾಜಿನ ಬಾಗಿಲ ಕೆಳಗೆ ನುಗ್ಗಲು ಹೋದವನ ತಲೆ, ಗರಾಜಿನ ಬಾಗಿಲಿಗೆ ಬಡಿದು, ಬಿದ್ದುಹೋಗಿದ್ದಾನೆ. ಮುಚ್ಚುತ್ತಿದ್ದ ಬಾಗಿಲು ಮ್ಯಾಥ್ಯೂ ಎದೆಯ ಮೇಲೆ ಬಿದ್ದುಬಿಟ್ಟಿದೆ. ಕಾಲುಗಳು ಬಾಗಿಲ ಹೊರಗೂ ಸೊಂಟದಿಂದ ಮೇಲಿನ ಭಾಗ ಒಳಗೂ ಸಿಕ್ಕಿಕೊಂಡಿತ್ತಂತೆ. ಅದಾದ ಬಹಳ ಹೊತ್ತಿನ ನಂತರ, ದಾರಿಯಲ್ಲಿ ಜಾಗಿಂಗ್ ಹೋಗುತ್ತಿದ್ದವರು, ಎಮರ್ಜನ್ಸಿ ವಿಭಾಗಕ್ಕೆ ಫೋನ್ ಮಾಡಿ ಅವನನ್ನು ಆಸ್ಪತ್ರೆಗೆ ಸೇರಿಸಲು ನೆರವಾದರಂತೆ. ಮ್ಯಾಥ್ಯೂ ಈಗ 'ಶೇಡಿ ಗ್ರೋವ್' ಆಸ್ಪತ್ರೆಯಲ್ಲಿ ಚಿಂತಾಜನಕ ಸ್ಥಿತಿಯಲ್ಲಿದ್ದಾನೆ.'

ಆ್ಯಶ್ಲಿಗೆ ಯಾರೋ ಅವಳ ತಲೆಯಲ್ಲಿ ಶೀತಲ ಹಿಮಗಡ್ಡೆಯನ್ನು ಹಾಕಿ ಮೆದುಳಿನ ಜೊತೆಯಲ್ಲಿ ಕಡೆಯುತ್ತಿರುವಂತೆ ಅನ್ನಿಸಿತು. ಇದ್ದಕ್ಕಿದ್ದಂತೆ,



ಮೊಣಕಾಲ ಚಿಪ್ಪು ಕರಗಿದಂತಾಗಿ, ನೆಲಕ್ಕೆ ಕುಸಿದಳು.

ದೂರದಲ್ಲೆಲ್ಲೋ ಯಾರೋ ಮಾತನಾಡು ತ್ತಿದ್ದಂತನಿಸಿ, ಕಣ್ತೆರೆದು ನೋಡಿದ ಅವಳಿಗೆ, ಪಕ್ಕದಲ್ಲಿ ಮಿಸೆಸ್. ರೂಡಾಲ್ಫ್ ಕುಳಿತಿದ್ದು ಕಾಣಿಸಿತು. ಆ್ಯಶ್ಲಿ ಮಾತು ಮರೆತಿದ್ದಳು. ನೋವಿನಿಂದ ಅವಳ ಶರೀರವೆಲ್ಲಾ ಜುಮ್ಮು ಹಿಡಿದಿತ್ತು. ಮಿಸೆಸ್. ರೂಡಾಲ್ಫ್ ಮಾತು ಮುಂದುವರೆಸಿದಳು. "ಆ್ಯಶ್ಲಿ ಕೆಲವೊಮ್ಮೆ ಪವಾಡಗಳು ನಡೆಯುತ್ತವೆ. ದೇವರ ದಯೆ, ಎಲ್ಲಾ ಸರಿ ಹೋದೀತು. ಸಂಜೆ 6 ಗಂಟೆಗೆ ನಾವೆಲ್ಲಾ ಸೇರಿ ಕ್ಯಾಂಡಲ್ ವಿಜಿಲ್‌ಗಾಗಿ ಮ್ಯಾಥ್ಯೂ ಮನೆಯ ಮುಂದೆ ಸೇರಲಿದ್ದೇವೆ. ಪ್ರಾರ್ಥನೆ ಅವನನ್ನು ಬದುಕಿಸುವುದೋ ಇಲ್ಲವೋ? ಆದರೆ ಅವನ ಮನೆಯವರಿಗಾದರೂ ಧೈರ್ಯ ತಂದು ಕೊಟ್ಟೀತು." ಮಿಸೆಸ್. ರೂಡಾಲ್ಫ್ ಧ್ವನಿಯಲ್ಲಿ ಆರ್ದ್ರತೆಯಿತ್ತು... ಬಾಯಿಂದ ಬರುತ್ತಿದ್ದ ಶಬ್ದಗಳಲ್ಲಿ ಅನುಕಂಪವಿತ್ತು... ಕಣ್ಣಲ್ಲಿ ನೋವಿತ್ತು... ಮ್ಯಾಥ್ಯೂ ಕಬ್ಬಿಣವನ್ನೂ ಕರಗಿಸುವ ಬಿಸಿ ಹೃದಯದ ಹುಡುಗನೇ ಹೌದು.

ಮಂಕು ಬಡಿದ ಆ ಸಂಜೆ, ಕೊರೆವ ಚಳಿಯಲ್ಲಿ ಮುಸುಕುತ್ತಿದ್ದ ಕತ್ತಲ ಹೊತ್ತಿನಲ್ಲಿ, ಮ್ಯಾಥ್ಯೂ ಮನೆಯ ಮುಂದೆ, ಅವನ ಸಹಪಾಠಿಗಳು, ಅವರ ತಂದೆ ತಾಯಿಯರು, ಶಾಲೆಯ ಎಲ್ಲಾ ಶಿಕ್ಷಕರು, ನೆರೆ ಹೊರೆಯವರು ಸೇರಿದ್ದರು. ಪ್ರತಿಯೊಬ್ಬರ ಕೈಯ್ಯಲ್ಲಿ ಉರಿಯುತ್ತಿದ್ದ ಮೇಣದ ಬತ್ತಿ, ಕಣ್ಣಲ್ಲಿ ನೀರು ಕೊರಳಲ್ಲಿ ಬಿಕ್ಕುಗಳಿದ್ದವು. ಕಾರ ಗರಾಜಿನ ಮುಂದೆ, ಮ್ಯಾಥ್ಯೂ ಜೀವಕ್ಕಾಗಿ ಪ್ರಾರ್ಥಿಸುತ್ತಿ ಅವನ ಸ್ನೇಹಿತರು ಹಾಕಿದ್ದ ಹೂಗೊಂಚಲು, ' ಲವ್ ಯು', 'ಗೆಟ್ ವೆಲ್' ಕಾರ್ಡ್‌ಗಳೂ ಪುಟ್ಟ ಕರಡಿ ಗೊಂಬೆಗಳೂ, ಬೇಸ್ ಬಾ ಕ್ಯಾಪ್‌ಗಳ ರಾಶಿಯೇ ಬಿದ್ದಿತ್ತು. ಬಾಗಿಲ ಬ ಮ್ಯಾಥ್ಯೂ ಅಜ್ಜ, ತಾತ, ಅಕ್ಕ ಮತ್ತು ಚಿಕ್ಕ ಸೂರಗಿ ನಿಂತಿದ್ದರು. ಎಲ್ಲರದ್ದೂ ಒಂದೇ ಕೂಗು ಮುಖ ಕಪ್ಪಿಟ್ಟ ಮುಗಿಲಿನ ಕಡೆಗೆ. "ದೇವ ಮ್ಯಾಥ್ಯೂ ಬದುಕುಳಿಯಲಿ."

ಆ ರಾತ್ರಿ ಆ್ಯಶ್ಲಿ ಪ್ರಪಂಚದ ಭೂಪಟ ಮುಂದೆ ನಿಂತಿದ್ದಳು. ಅವಳ ಬಲಗೈಯ್ಯ ತೋ ಬೆರಳನ್ನುಳಿದು ಮಿಕ್ಕೆಲ್ಲಾ ಬೆರಳುಗಳೂ ಬ ಯಾಗಿ ಹೆಣೆದುಕೊಂಡಿದ್ದವು.



....ಜೀವನದ ಉತ್ಸವವಿದು. ಪರಸ್ಪರ ನಂಬಿಕೆ ಮತ್ತು ಪ್ರೀತಿ ಇರುವವರು ಒಬ್ಬರೊನ್ನೊಬ್ಬರು ಕೆಳಗೆ ಬೀಳದಂತೆ ರಕ್ಷಿಸಬಲ್ಲರು.

ಶಶಿಕಲಾ ಚಂದ್ರಶೇಖರ



ಪತಿಯೊಂದಿಗೆ ಶಶಿಕಲಾ



ಜನಪದ ಕನ್ನಡ

ಸಂಗ್ರಹ: ಎ.ಕೆ. ರಾಮಾನುಜನ್

ಕನ್ನಡಕ್ಕೆ: ಮಹಾಬಲೇಶ್ವರರಾವ್



# ಹಾವು ಸತ್ತಿತು; ಹಗೆ ಹರಿಯಿತು

ಒಂದು ದೊಡ್ಡ ಆಲದ ಮರದ ಟೊಂಗೆಯಲ್ಲಿ ಕಾಗೆಯ ಸಂಸಾರ. ಹೆಣ್ಣು ಕಾಗೆ ಮೊಟ್ಟೆ ಇಟ್ಟು, ಕಾವು ಕೊಟ್ಟು, ಮರಿ ಮಾಡುತ್ತಿತ್ತು. ಆ ಮರದ ಬುಡದಲ್ಲಿ ಒಂದು ಹುತ್ತ. ಆ ಹುತ್ತದಲ್ಲಿ ಒಂದು ಕೃಷ್ಣಸರ್ಪ. ಕಾಗೆ ಮರಿ ಮಾಡಿದೊಡನೆ, ಕೃಷ್ಣಸರ್ಪ ಟೊಂಗೆ ಏರಿ ಬಂದು ಮರಿಗಳನ್ನು ತಿಂದುಬಿಡುತ್ತಿತ್ತು. ಹೀಗೆಯೇ ಹಲವು ಬಾರಿ ನಡೆಯಿತು. ಹೆಣ್ಣು ಕಾಗೆಗೆ ಇದನ್ನು ಸಹಿಸಿಕೊಳ್ಳಲಾಗಲಿಲ್ಲ. ''ನಮ್ಮ ಮರಿಗಳೆಲ್ಲ ಈ ಕ್ರೂರ ಸರ್ಪದ ಬಾಯಿಗೆ ತುತ್ತಾದವು. ಹೀಗಾದರೆ ನಮ್ಮ ಗತಿ ಏನು? ನಾವು ಬೇರೆ ಎಲ್ಲಿಗಾದರೂ ಹೋಗೋಣ'' ಎಂದು ಅದು ಗಂಡು ಕಾಗೆಗೆ ಹೇಳಿತು. ಆದರೆ ಗಂಡು ಕಾಗೆಗೆ ಆ ಮರವನ್ನು ಬಿಟ್ಟುಹೋಗಲು ಮನಸ್ಸಿರಲಿಲ್ಲ. ''ನಾವು ಏನಾದರೂ ಮಾಡಿ ನಮ್ಮ ಶತ್ರುವನ್ನು ನಾಶ ಮಾಡುವ ಉಪಾಯ ಹುಡುಕಬೇಕು'' ಎಂದಿತು. ಆಗ ಹೆಣ್ಣು ಕಾಗೆ, ''ಅದು ನಮ್ಮಿಂದ ಆಗುವ ಕೆಲಸವಾ? ನಾವು ಎಷ್ಟಾದರೂ ಕಾಗೆಗಳು; ಸರ್ಪವಾದರೋ ಭಯಂಕರವಾಗಿದೆ'' ಎಂದಿತು. ''ಯೋಚಿಸಿದರೆ ಉಪಾಯ ಹೊಳೆದೇ ಹೊಳೆಯುತ್ತದೆ. ನಾನು ದುರ್ಬಲನೂ ಕ್ಷುದ್ರನೂ ಆಗಿರಬಹುದು. ಆದರೆ ನನಗೆ ಉಪಾಯಗಾರ ಗೆಳೆಯರಿದ್ದಾರೆ. ನಾವು ಅವರ ಸಹಾಯ ಪಡೆಯಬಹುದು. ಏನೇ ಆಗಲಿ, ಈ ಸಲ ಸರ್ಪವನ್ನು ಸುಮ್ಮನೆ ಬಿಡುವುದಿಲ್ಲ'' ಎಂದು ಗಂಡು ಕಾಗೆ ಸಮಾಧಾನ ಹೇಳಿತು.

ಅದೇ ರೀತಿ ಗಂಡು ಕಾಗೆ, ಗೆಳೆಯ ನರಿಯ ಬಳಿಗೆ ಹೋಗಿ ತನ್ನ ಕತೆಯನ್ನೆಲ್ಲಾ ಹೇಳಿಕೊಂಡಿತು. ಆಗ ಆ ನರಿ, ಕಾಗೆಗೆ ಹೀಗೆ ಹೇಳಿತು, ''ಈ ದುಷ್ಟನಿಗೆ ನಾವು ಬುದ್ಧಿ ಕಲಿಸಲೇಬೇಕು. ರಾಜ ರಾಣಿ ಸ್ನಾನ ಮಾಡುವ ಕೊಳ ಇದೆಯಲ್ಲ, ಅಲ್ಲಿಗೆ ಹೋಗು. ರಾಣಿ ಸ್ನಾನ ಮಾಡುವಾಗ, ಅವಳ ಕೊರಳ ಹಾರವನ್ನು ಎತ್ತಿ ತಂದು ಹುತ್ತದಲ್ಲಿ ಹಾಕಿಬಿಡು.''

ಕಾಗೆ ಒಮ್ಮೆಲೆ ಕೊಳದ ಬಳಿಗೆ ಹಾರಿಹೋಯಿತು. ರಾಜಪರಿವಾರದವರು ತಮ್ಮ ಚಿನ್ನದ ಆಭರಣ, ಉಡುಪು ತೊಡಪುಗಳನ್ನು ಕಳಚಿ ಇಡುವುದನ್ನು ಕಾಯುತ್ತ, ಅವರು ನೀರಿಗೆ ಇಳಿದು ಚೆಲ್ಲಾಟದಲ್ಲಿ ಮಗ್ನರಾದಾಗ, ರಾಣಿಯ ಕೊರಳ ಹಾರವನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು, ತನ್ನ ಗೂಡಿಗೆ ಹಾರಿಬಂದಿತು. ರಾಜಭಟರು ಕತ್ತಿ-ಗುರಾಣಿ, ಬಿಲ್ಲು-ಬಾಣಗಳೊಂದಿಗೆ ಕಾಗೆಯ ಹಿಂದೆಯೇ ಓಡೋಡಿ ಬಂದರು.



ಭಟರು ಸಮೀಪ ಬಂದೊಡನೆ, ಕಾಗೆ, ರಾಣಿಯ ಕೊರಳ ಹಾರವನ್ನು ಹಾವಿನ ಹುತ್ತದಲ್ಲಿ ಹಾಕಿಬಿಟ್ಟಿತು. ರಾಜಭಟರು ಹುತ್ತವನ್ನು ಅಗೆದಾಗ, ಕೃಷ್ಣಸರ್ಪ ಹೆಡೆ ಎತ್ತಿ ಬುಸ್ಸೆಂದಿತು. ಭಟರು ಸರ್ಪವನ್ನು ಹೊಡೆದುಕೊಂದರು. ಕೊರಳ ಹಾರವನ್ನು ಎತ್ತಿಕೊಂಡು ಕೊಳದ ಕಡೆ ತೆರಳಿದರು. ಹಾವು ಸತ್ತಿತು; ಹಗೆ ಹರಿಯಿತು. ಕಾಗೆಯ ಸಂಸಾರ ಸುಖವಾಗಿ ಬದುಕಿತು.



# ಚಿಲಕಲೂರಿ

ಇಂಥ ವ್ಯಕ್ತಿ ನಿಮ್ಮ ಅನುಭವ ಮಂಟಪವನ್ನಲಂಕರಿಸಿರುವನೋ ಇಲ್ಲವೋ! ಆದರೆ ನನ್ನ ನೆನಪಿನ ಪೆಟಾರಿಯೊಳಗೆ ಇಂಥವರು ಅನೇಕ.

ಚಿಲಕಲೂರಿ ರಾಧಾಕೃಷ್ಣ ಎಂಬ ಹೆಸರಿನ ಈತ, ಎಲ್ಲರಿಂದ ಕರೆಸಿಕೊಳ್ಳುತ್ತಿದ್ದುದು ಅನೇಕ ಹೆಸರುಗಳಿಂದ. ಚಿಲಕೂರಿ, ಚಿಲಕ್ಲೂರಿಗಾಡು, ಕಿಟ್ಟಿ ಹೀಗೆ... ಆದರೆ ನಾವೆಲ್ಲ ಕರೆಯುತ್ತಿದ್ದುದು 'ಚಿಲಕಲೂರಿ' ಎಂದೆ. ಭೌತಿಕ ಜಗತ್ತಿನ ಎಲ್ಲ ಅವಗುಣಗಳಿಗೆ ಒಡೆಯನಾಗಿದ್ದ ಈತ, ಅನೇಕರಿಗೆ ಅನೇಕ ರೀತಿಯಲ್ಲಿ ಗೋಚರಿಸುತ್ತಿದ್ದ. ಎಲ್ಲರೂ ತಂತಮ್ಮ ಪಂಚೇಂದ್ರಿಯಗಳ ವ್ಯಾಪ್ತಿಯಿಂದ ದೂರ ಇಡುತ್ತಿದ್ದರು. ಸಾಲ ಕೊಟ್ಟವರು ಮಾತ್ರ ಈತನ ಬಳಿ ಸುಳಿದಾಡುತ್ತಿದ್ದರು. ಹತ್ತಾರು ದುಶ್ಚಟಗಳಿಂದ ದಿನ ನಿತ್ಯ ಮಸಾಜು ಮಾಡಿಸಿಕೊಳ್ಳುತ್ತಿದ್ದ ಈತನನ್ನು ನಿಸೂರು ಮಾಡಲು ಇಡೀ ವಿದ್ಯಾಇಲಾಖೆ ಪ್ರಯತ್ನಿಸುತ್ತಲೇ ಇತ್ತು. ಅದು ಕಳಿಸುತ್ತಿದ್ದ ಷೋಕಾಜ್ ನೋಟೀಸುಗಳ ಚಿಲುಮೆಯೊಳಗೆ ಗಾಂಜಾ ತುಂಬಿ ಸೇದುತ್ತಿದ್ದ. ಅಧಿಕಾರಿಗಳಿಗೆ ಕಾಣಿಸುವಂತೆ ಅಂಗಿ ಎದೆ ಜೇಬಿನಲ್ಲಿ ಒಂದೆರಡಾದರೂ ಪಾಕೆಟ್ ಇರಿಸಿಕೊಂಡಿರುತ್ತಿದ್ದ. ಕೊಂಡೊಯ್ದು ಬಡಿವವರನ್ನು ಕೊಂಡಾಡುತ್ತಿದ್ದ. ಬಯ್ಯುವರ ಹೆಸರುಗಳನ್ನು ಮಕ್ಕಳಿಗಿರಿಸಿದ್ದ. ಒಂದೇ ಮಾತಿನಲ್ಲಿ ಹೇಳುವುದಾದರೆ, ಪ್ರಪಂಚವೆಂಬ ನೀರಿನ ಬಕೆಟ್ ಒಳಗೆ, ಘೃತ ಬಿಂದುವಿನಂತೆ ಇದ್ದ. ತಾನಿರುತ್ತಿದ್ದ ಸ್ಕೂಲಿಗೆ, ಆದಷ್ಟು ಲಗೂ ಕೆಟ್ಟ ಹೆಸರು ತಂದು ಕೃತಾರ್ಥನಾಗಿಬಿಡುತ್ತಿದ್ದ. ಅಪಾಯಕಾರಿ ಜೈವಿಕಾಸ್ತ್ರದಂತಿದ್ದ ಈತನನ್ನು, ವಿದ್ಯಾಇಲಾಖೆಯು, ಪ್ರತಿಯೊಂದು ಶಾಲೆ ಮೇಲೂ ಪ್ರಯೋಗಿಸಿ ಮೀಸೆ ತಿರುವುತ್ತಿತ್ತು. ಇದಕ್ಕೆ ನಾನೂ, ನಮ್ಮ ಶಾಲೆಯೂ ಹೊರತಾಗಲಿಲ್ಲ. ಅಷ್ಟೊತ್ತಿಗಾಗಲೇ ಸಹೋದ್ಯೋಗಿಗಳ ಜೀವ ತಿನ್ನುವುದರಲ್ಲಿ ನಾನು ಹೆಸರಾಗಿದ್ದೆ. ನಾನಿದ್ದ ವಾಗಿಲಿ ಎಂಬ ಗ್ರಾಮವಂತೂ, ಇಡೀ ತಾಲ್ಲೂಕಿನಲ್ಲಿ, ಅಂಡಮಾನ್, ನಿಕೋಬಾರೆಂದೇ ಕುಖ್ಯಾತವಾಗಿತ್ತು.

ಚಿಲಕಲೂರಿ ಪಾಕೆಟ್ ಪರಿಮಳ ಬೀರುತ್ತ ಡ್ಯೂಟಿಗೆ ಜಾಯಿನ್ ಆದೊಡನೆ, ನಾನು ಸಮಿತಿ ಕಛೇರಿಗೆ ಓಡಿತುಗಿ, ನಾನು ಯಾವ್ಯಾವ ಜನುಮದಲ್ಲಿ ಯಾವ್ಯಾವ ಪಾಪ ಮಾಡಿರುವೆನೆಂದು






ಮೇಲಧಿಕಾರಿಗಳೆದುರು ಬಿನ್ನಪ ಮಾಡಿಕೊಂಡೆ. ಅದಕೆ ಕಾರಣಗಳು ಸಂಗೀತ ಕಾರಂಜಿಯಂತೆ ಚಿಮ್ಮಿದವು.

ಮೇನೇಜರ್: ವಾಗಿಲಿ ಪನಿಷ್ಮೆಂಟ್ ಪ್ಲೇಸಂತ ಹಾಕಿದ್ದೀವಿ ಕಣಯ್ಯ; ವಾಡಿಕಿ ಕೂಳು, ನೀರು ಸಿಗದಂತೆ ನೋಡ್ಕೋ.

ಬಿಡಿಒ: ನಿನಗಲ್ಲಿ ಅನೇಕ ರೌಡಿಗಳು ಪರಿಚಯ ಆದಾರಂತಲ್ಲ. ಅವನ್ನ ಒದೆಸಿ ಮೆತ್ತಗೆ ಮಾಡು. ಮುಂದಿನದನ್ನು ನಾವ್ ನೋಡ್ಕೋತೀವಿ.

ಸಾರ್: ಸಾರ್, ನನ್ಗತಿ ಏನಾಗಬೇಕು?

ಮೇನೇಜರ್: ನೀನೆಂಗೋ ಅನ್‌ಮ್ಯಾರೀಡು, ಯಾಕಯ್ಯಾ ಹೆದರ್ತೀ...

ಸೇರುಪ್ಪು ತಿಂದವರಷ್ಟೆ ಮೇಲಧಿಕಾರಿಗಳೊಂದಿಗೆ ಮಾತಾಡಲು ಸಾಧ್ಯ! ಚಿಲಕಲೂರಿ ಎಂಬ ಏಕ ಸದಸ್ಯ ಆಯೋಗವನ್ನು ಧೈರ್ಯದಿಂದ ಎದುರಿಸಲು ನಿರ್ಧರಿಸಿದೆ.

ಉಪಾಧ್ಯಾಯ ದೃಷ್ಟಿಯಿಂದ ನೋಡಿದಾಗ ಭೂತಬಂಗಲೆಯಂತೆ ಕಾಣಿಸುತ್ತಿದ್ದ ಆತನು, ಸೃಜನಶೀಲ ದೃಷ್ಟಿಗೆ ತಾಜಮಹಲಿನಂತೆ ಗೋಚರಿಸುತ್ತಿದ್ದ.

ಬಂದೊಡನೆ ಗ್ರಾಮದ ಸಮಸ್ತ ಲಂಪಟರೊಂದಿಗೆ ಇಂಟರ್‌ನೆಟ್ ಸಂಬಂಧ ಸ್ಥಾಪಿಸಿಕೊಂಡ. ಖೂನಿ ಕೇಸಿನಲ್ಲಿ ಜೈಲಿಗೆ ಹೋಗಿ ಬಂದಿದ್ದ ಕೊಕ್ಕ ಬುಕ್ಕ, ನಾರಾಣಿ, ಸಿದ್ಲಿಂಗರಿಗಂತೂ (ಇವರ ಬಗ್ಗೆ ಮುಂದೆ ಬರೆಯುವೆ) ಗುರುವೇ ಆಗಿಬಿಟ್ಟ. ಹೆಡ್ ಮಾಸ್ತರಾಗಿದ್ದ ನನಗೆ ಛಪ್ಪನ್ನಾರು ತಲೆನೋವುಗಳ ಪರಿಚಯ ಮಾಡಿಕೊಟ್ಟುಬಿಟ್ಟ. ಪೆಹಲಾ ತೇದಿಯನ್ನು ಗಾಢವಾಗಿ ಪ್ರೀತಿಸುತ್ತಿದ್ದ ಆತ, ಐದನೇ ತರಗತಿಯ ಚಿಗುರು ಮೀಸೆಯ ಹುಡುಗರನ್ನು ತನ್ನ ದುಶ್ಚಟಗಳಿಗೆ ಆಪ್ತ ಸಹಾಯಕರನ್ನಾಗಿ ಬಳಸಿಕೊಳ್ಳುತ್ತಿದ್ದ. ಸಾಲಗಾರರ, ಹೆಂಡಂದಿರ, ಸೂಳೆಯರ ಕಣ್ಣಿಗೆ ಬೀಳದಂತೆ ಸದಾ ಭೂಗತನಾಗಿರುತ್ತಿದ್ದ ಆತನೊಂದಿಗೆ ಏಗುವುದು ನನ್ನಿಂದ ಸಾಧ್ಯವಾಗಲಿಲ್ಲ. ನಾನೇ ವರ್ಗ ಬಯಸಿ ಅಧಿಕಾರಿಗಳ ಸಮಕ್ಷಮ ಎಲ್ಲ ತೋಡಿಕೊಂಡೆ. ಮೇಲಧಿಕಾರಿಗಳ ಹೃದಯಗಳು ಕರಗಿದವು. ಅವರೆಲ್ಲ ಅಹರ್ನಿಶಿ ಸಮಾಲೋಚಿಸಿ, ಚಿಲಕಲೂರಿ ಮಾಸ್ತರರನ್ನು, ಕೋಸಿಗಿ ಎಂಬ ಉಗಾಂಡಕ್ಕೆ ವರ್ಗ ಮಾಡಿ ಪುಣ್ಯ ಕಟ್ಟಿಕೊಂಡರು.

ಶಾಮ್ ಬೆನಗಲ್‌ರ 'ನಿಶಾಂತ್' ಚಿತ್ರಕ್ಕೆ ಪ್ರೇರಣೆ ನೀಡಿದ ಊರದು. ಇದಿಲಮೀನನ ತಾ
ಮುತ್ತಾತನಂತಿದ್ದ ಜಮೀನ್ದಾರ ನಾರಾಯಣ ದೊರೆ ಇಲಾಖೆಯ ಕೇಂದ್ರಸ್ಥಳ. ಅಲ್ಲಿಗೆ ಹೋದವರ
ವಾಪಾಸು ಬರಲಾರರೆಂದೇ ಲೆಕ್ಕ. ಸುಡುಗಾಡಿಗೆ ಕಳಿಸುವ ರೀತಿಯಲ್ಲಿ ನಾವೆಲ್ಲ ಆತನನ್ನು ಕಳಿಸಿಕೊಟ್ಟೆವು
ಕೆಲವು ತಿಂಗಳುಗಳ ನಂತರ ಆತನನ್ನು ಮರೆತೂಬಿಟ್ಟೆವು.

ಎರಡೋ ಮೂರು ವರ್ಷಗಳ ನಂತರ...

ಸೆಪ್ಟೆಂಬರ್ ಪೆಹಲಾ ತೇದಿಯ ಪೇಪರಿನ ಮುಖಪುಟದಲ್ಲಿ ಅಚ್ಚಾಗಿದ್ದ ಫೋಟೋ, ಅದ
ಸಂಬಂಧಪಟ್ಟಂಥ ನ್ಯೂಸು ನನ್ನ ಗಮನ ಸೆಳೆಯಿತು. ನಂಬಲಾಗದ ಸತ್ಯಸಂಗತಿ ಅದಾಗಿತ್ತ
ಘನಸರಕಾರವು ಕೋಸಿಗಿಯ ಶಿಕ್ಷಕ ಚಿಲಕಲೂರಿ ರಾಧಾಕೃಷ್ಣ ಅವರಿಗೆ ರಾಜ್ಯಮಟ್ಟದ ಶ್ರೇಷ್ಠ ಪ್ರಶ
ಪ್ರಕಟಿಸಿತ್ತು. ಆಶ್ಚರ್ಯವಾದರೂ ನಾನು ತಂತಿ ಮೂಲಕ ಅಭಿನಂದಿಸಿದೆ. ಆತನನ್ನು ಖುದ್ದು ಕಾಣು
ಇರಾದೆ ವ್ಯಕ್ತಪಡಿಸಿದೆ. ಕೇವಲ ವಾರೊಪ್ಪತ್ತಿನಲ್ಲಿ ವಾಗಿಲಿ ಗ್ರಾಮವೆಂಬ ಅಚ್ಛೋದ ಸರೋವರದ
ರಾಜಹಂಸದಂತೆ ಇಳಿದ ಆದರ್ಶ ಶಿಕ್ಷಕ ಚಿಲಕಲೂರಿಯವರು, ಮೈ ಕೈ ತುಂಬಿಕೊಂಡು ದುಂಡ
ದುಂಡಗಾಗಿದ್ದರು. ತಮ್ಮ ದೇಹವನ್ನು ದುಶ್ಚಟಗಳ ರಿಕ್ರಿಯೇಷನ್ ಕ್ಲಬ್ಬು ಮಾಡಿಕೊಂಡಿದ್ದರು.

"ಮೇಸ್ಟ್ರೇ... ನಾನೀಗ ನಾರಾಯಣ ದೊರೆಯ ರೈಟುಹ್ಯಾಂಡು...", ಸತ್ಕಾರ ಸ್ವೀಕರಿಸಿದ ನಂತ
ಆದರ್ಶ ಶಿಕ್ಷಕರು(?) ಹೇಳಿದರು.

ಅವರು ದೊರೆಯ ಕೃಪಾಕಟಾಕ್ಷ ಗಳಿಸಿದ ಪರಿ ಈ ಕೆಳಗಿನಂತಿರುವುದು...

ಚಿಲಕಲೂರಿಯ ಮುಖದಲ್ಲಿ ಹರಕುಮುರುಕು ಗಡ್ಡ, ಅಲ್ಲಲ್ಲಿ ಹರಿದಿರುವ ಪ್ಯಾಂಟು, ಅಂ
ಸಂಕೋಚ, ದಾರಿದ್ರ್ಯ, ದೈನ್ಯತೆಗಳಿಂದ ಮಾಡಲ್ಪಟ್ಟವವನಂತೆ ಸೋಗು. ಜಮೀನ್ದಾರೀ ಪದ್ಧತಿಯ
ವಾಡೆಯನ್ನು ಪ್ರವೇಶಿಸುವ ಈತನು, ದೊರೆಗಳೆದುರು ಶಿರಸಾಷ್ಟಾಂಗ ಪ್ರಣಾಮ ಸಲ್ಲಿ
'ಕುಂಬಳಕಾಯಿ ತಮ್ಮೆ, ಕುಡುಗೋಲು ತಮ್ಮೆ' ಎಂದು ಕೃಷ್ಣಾರ್ಪಿತವಾಗುವನು. ಮೂಲತ
ಭಟ್ರಾಜುರವರ ವಂಶಸ್ಥನಾದ ತಾನು, ದೊರೆಗಳನ್ನು ಕುರಿತು ಕಂದ, ಸೀಸ ಪದ್ಯಗಳನ್ನು ಸೊಗಸಾ
ಹಾಡುತ್ತಾನೆ. ಅದರಿಂದ ಪ್ರಸನ್ನಚಿತ್ತರಾದ ದೊರೆಗಳು, ಧನ ಧಾನ್ಯ ವಸ್ತ್ರ ವಿಲಾಸ ನೀಡಿ, ತಮ್ಮ ವಾಡೆ
ಒಂದು ಕೋಣೆಯಲ್ಲಿರಿಸಿಕೊಂಡು ಫರ್ಮಾನು ಹೊರಡಿಸುತ್ತಾರೆ. ಅದಕ್ಕೆ ಈತನು ದೊರೆಗ
ಪಾದಾಭಿವಂದನೆ ಮಾಡುತ್ತಾನೆ.

"ನಾನಿಂಥೋರ್ನ ಕೊಲಮಾಡ್ಲಿ ಅಂದ್ರ ಅಂಥೋರ್ನ ಕೊಲೆ ಮಾಡ್ಲಿಬಿಡ್ತಾರೆ ನಮ್ ದೊರೆಗಳು" ಎಂದು ನಾಚಿಕೆ, ಹೇಸಿಕೆ ಬಿಟ್ಟು ಪಲುಕುವ ಆದರ್ಶ ಶಿಕ್ಷಕ ಚಿಲಕಲೂರಿ ಈಗ ಮೇಲಧಿಕಾರಿಗಳಿಂದಲೂ ನಮಸ್ಕರಿಸಿಕೊಳ್ಳುತ್ತಿರುವಂಥಾತ. ದೊರೆಗಳ ಬೆಡ್‌ರೂಮಿನ ಯೋಗಕ್ಷೇಮ ನೋಡಿಕೊಳ್ಳುತ್ತಿರುವಂಥ ಈತ, ಜಮೀನ್ದಾರಿ ವ್ಯವಸ್ಥೆ ಕುರಿತು ಸಹಸ್ರ, ಸಹಸ್ರ, ಸಂಗತಿಗಳನ್ನು ಬಟವಾಡೆ ಮಾಡುತ್ತಾನೆ. ನನ್ನನ್ನೂ ಕೋಸಿಗಿ ದೊರೆಗಳ ವಾಡೆಯಲ್ಲಿ ಐದಾರು ದಿನ ಇಟ್ಟುಕೊಳ್ಳುವ ಆಸೆ ತೋರಿಸುತ್ತಾನೆ.

■






# ಸುಧೀ

## ಶೇಷನಾರಾಯಣ

ಭಾಷ್ಯಂ ಸರ್ಕಲಿಗೆ ಸೇರಿದ ಹಾಗೆಯೇ, ಉತ್ತರಕ್ಕೆ ಅಷ್ಟು ದೂರ ಚಾಚಿಕೊಂಡಿರುವ ಸ್ಯಾಂಕಿ ಕೆರೆಯ ಪೂರ್ವ ದಡದಲ್ಲಿ, ಒಂದು ಅಶ್ವತ್ಥ ಮರ. ಈ ಮರ ತುಂಬಾ ಎತ್ತರಕ್ಕೆ ಬೆಳೆದು, ಹತ್ತೆಂಟು ಕೊಂಬೆಗಳು ಹರಡಿಕೊಂಡು, ಭವ್ಯವಾಗಿದೆ. ಇದಲ್ಲದೆ ಬೇರೆ ಬೇರೆ ಜಾತಿಯ ಮರಗಳೂ, ಉದ್ದಕ್ಕೆ, ಬೇಲಿ ಮತ್ತು ಈ ಕಡೆ 'ಅರಣ್ಯ ಭವನ'ದವರೆಗೂ ವ್ಯಾಪಿಸಿಕೊಂಡಿದೆ. ಅರಣ್ಯ ಭವನಕ್ಕೆ ಸೇರಿದ ಹಾಗೆಯೇ 'ಭಾರತೀಯ ವಿಜ್ಞಾನ ಸಂಸ್ಥೆ.' ಅಲ್ಲಿಯೂ ಕಣ್ಣುಗಳಿಗೆ ತಂಪನ್ನೆರೆಯುವ ಭಾರಿ ಭಾರಿ ಮರಗಳು ಇವೆ.

ಈ ಅಶ್ವತ್ಥ ಮರದ ಕೊಂಬೆಯ ಮೇಲೆ ಕಾಜಾಣ ವರ್ಗಕ್ಕೆ ಸೇರಿದ ಒಂದು ಪುಟ್ಟ ಹಕ್ಕಿ; ತಾಯಿ ಹಕ್ಕಿ. ಆ ಮರದ ಕೊಂಬೆಗೇ, ತುತ್ತತುದಿಯಲ್ಲಿ, ಯಾರೂ ಕಂಡುಕೊಳ್ಳದ ಹಾಗೆ ಗೂಡು ಕಟ್ಟಿದೆ. ತಾಯಿ ಹಕ್ಕಿ ಜಾನಕಿ, ಅದು ಯಾರನ್ನು ಪ್ರೇಮ ಮಾಡಿದಳೋ, ಅವನು ಯಾವ ಚೆಲುವನೋ, ಅಂತೂ ಅವನೊಂದಿಗೆ ಸಂಪರ್ಕ ಬೆಳೆಸಿ, ಗರ್ಭಿಣಿಯಾಗಿ, ಎರಡು ಮೊಟ್ಟೆಗಳನ್ನು ಹಾಕಿ, ಮೊಟ್ಟೆಗಳು ಒಡೆದು, ಎರಡು ಪುಟ್ಟ ಪುಟ್ಟ ಮರಿಗಳೂ ಆಗಿವೆ; ಮರಿಪ್ಪಕ್ಷಿಗಳಾಗಿವೆ.

ಒಂದರ ಹೆಸರು ಸುಧಾ; ಮತ್ತೊಂದರ ಹೆಸರು ಅರ್ಚನಾ.

ತಾಯಿಯನ್ನು ಇವು 'ಅಮ್ಮಾ...' ಎಂದೇ ಪ್ರೀತಿಯಿಂದ ಕೂಗಿಕೊಳ್ಳುತ್ತವೆ, ಅವುಗಳ ಭಾಷೆಯಲ್ಲಿ. ತಂದೆಯ ಬಗ್ಗೆ ಸುದ್ದಿಯೇ ಇಲ್ಲ.

ತಾಯಿ ಜಾನಕಿ, ಶ್ರದ್ಧೆಯಿಂದ ತನ್ನ ಕೆಲಸವನ್ನು ಮಾಡುತ್ತ ಇದೆ. ಅದು ಗೂಡು ಕಟ್ಟಿರುವ ಸೊಬ
ನೈಪುಣ್ಯತೆ ಯಾರೂ ಮೆಚ್ಚುವಂಥಾದ್ದು. ಎಳೆ ಎಳೆ ದಾರಗಳನ್ನೂ, ನಾರುಗಳನ್ನೂ ಅದು
ಸಂಗ್ರಹಿಸಿತೋ, ಒಂದು ಒಂದೂವರೆ ಮೊಳದ ಅಗಲ ಬಾಯಿನ ಗೂಡು. ಅಶ್ವತ್ಥ ಮರದ ಒಂ
ಕೊಂಬೆಗೇ ಅದು ಸೇರಿಕೊಂಡಿರುವಹಾಗಿದೆ. ಅದು ಹೀಗೆ ಬಲೆ ಹೆಣೆಯಲು, ಗೂಡು ಕಟ್ಟಲು ಯಾ
ಅದಕ್ಕೆ ಈ ರೀತಿ ತರಬೇತಿ ನೀಡಿದರೋ ಏನೋ? ಮಳೆ ಸುರಿದರೂ, ಗಾಳಿ ಬಲವಾಗಿ ಬೀಸಿದರ
ಗೂಡು ಕೆಳಗೆ ಬೀಳಬಾರದು. ಅಷ್ಟು ಭದ್ರ; ಎಚ್ಚರ; ಹೆಣಿಕೆಯ ಮೋಜು.

ಜಾನಕಿ ತನ್ನ ಎರಡೂ ರೆಕ್ಕೆಗಳನ್ನು ಪಟಪಟನೆ ಜಾಳಿಸಿ, ಆ ರೆಕ್ಕೆಗಳಿಂದ ತನ್ನ ಪುಟ್ಟ ಮರಿಗಳ
ಅಡಗಿಸಿಕೊಳ್ಳುವಾಗ, ಹಾಗೆ ಅಡಗಿಸಿಕೊಂಡಾಗ, ಬಿಸಿಬಿಸಿಯಾಗುವಾಗ ಆಹಾ ಆ ಸುಖವೇ ಸು
ಜಗತ್ತಿನಲ್ಲಿ ಈ ಸುಖ ಎನ್ನುವುದು ಒಂದು ಇದ್ದರೆ ಅದು ಈ ತಾಯಿ ಜಾನಕಿ, ಸುಧಾಳನ
ಅರ್ಚನಾಳನ್ನೂ ಅಡಗಿಸಿಕೊಳ್ಳುವ ರೀತಿಯಲ್ಲಿ ಅಥವಾ ಪ್ರೀತಿಯಲ್ಲಿ ಮಾತ್ರ ಎಂ
ಹೇಳಿಬಿಡಬಹುದು.

ಆಗ ಇವೆರಡೂ ಮರಿಗಳು, ಚಿಂವ್ ಚಿಂವ್ ಚಿಂವ್ ಚಿಂವ್ ಎನ್ನುತ್ತ, ತಾವೂ ತಾಯಿಯ ಹೊ
ಬೆನ್ನು, ಕೊರಳು - ಹೀಗೆ ಎಲ್ಲವನ್ನೂ ತಮ್ಮ ಪುಟ್ಟ ಪುಟ್ಟ ಕೊಕ್ಕುಗಳಿಂದ ತಿವಿದು, ತಿವಿದು ತ
ಹರ್ಷವನ್ನು ವ್ಯಕ್ತಪಡಿಸುತ್ತವೆ. ಪುರ್ ಪುರ್ ಎನ್ನುತ್ತ, ಅಲ್ಲಿಯೇ, ಆ ಪುಟ್ಟ ಗೂಡಿನಲ್ಲಿಯೇ ಹಾರ
ಮಾಡುವವರ ಹಾಗೆ ತಮ್ಮ ತಮ್ಮ ರೆಕ್ಕೆಗಳನ್ನು ಮೇಲೆ ಮೇಲೆ ಎತ್ತುತ್ತವೆ; ಮೆಲ್ಲಮೆಲ್ಲಗೇ ಜಾಳಿಸುತ್ತವೆ.

ತನ್ನ ಮರಿಗಳು ಹೀಗೆ ತಮ್ಮ ಸಂತಸವನ್ನು ವ್ಯಕ್ತಪಡಿಸುವಾಗ ತಾಯಿಹಕ್ಕಿ ಜಾನಕಿ, ತಾನೂ
ಬೂದುಬಣ್ಣದ ಕೊಕ್ಕಿನಿಂದ ಅವುಗಳ ಅಡಿಹೊಟ್ಟೆ, ಕೊರಳು ಇತ್ಯಾದಿಗಳಿಗೆ ತನ್ನ ಕೊಕ್ಕನ್ನು ತಿ
ತಿವಿದು ಪ್ರೀತಿ ಮಾಡುತ್ತದೆ; ತನ್ನ ಮುದ್ದು ಮರಿಗಳೊಂದಿಗೆ ಆಟವಾಡುತ್ತದೆ.

ಆ ಅಶ್ವತ್ಥ ಮರದಲ್ಲಿ ಮತ್ತೊಂದು ಹಕ್ಕಿಯೂ ಇದೆ. ಆದರೆ ಅದು ಮುದಿ ಹಕ್ಕಿ. ತನ್ನ ಸಾಂಸಾ
ಜೀವನದಲ್ಲಿ ಅದಕ್ಕೆ ಅದು ಏನು ಪೆಟ್ಟು ಬಿದ್ದಿದೆಯೋ, ವೈರಾಗ್ಯವೋ, ಏನು ದುಃಖವೋ
ಯಾರೊಂದಿಗೂ ಸೇರದೆ, ಬೆರೆಯದೆ, ಅದು ತಾನಾಯಿತು ತನ್ನ ಕೆಲಸವಾಯಿತು. ಎನ್ನುವ ಹಾಗೆ ಒಂ
ಕೊಂಬೆಯಲ್ಲಿ ವಾಸಿಸುತ್ತ, ದಿನಗಳನ್ನು ದೂಡುತ್ತ ಇದೆ.

ಕಾಜಾಣ ಅಲ್ಲದೆ ಬೇರೆ ಹತ್ತೆಂಟು ಜಾತಿಯ ಹಕ್ಕಿಗಳೂ ಆ ಮರದಲ್ಲಿ ವಾಸವಾಗಿವೆ. ಗುಬ್ಬ
ಮರಕುಟಿಗ, ಪಾರಿವಾಳ, ಕೆಂಬೂತ, ಕಾಗೆ, ಗೂಬೆ-ಹೀಗೆ. ತಮ್ಮದೇ ಭಾಷೆಯಲ್ಲಿ
ಕೂಗಿಕೊಳ್ಳುತ್ತವೆ; ಸಂಸಾರ ಮಾಡುತ್ತವೆ. ದುಬಾರೀ ಛತ್ರಗಳ ಬಾಡಿಗೆ ಇಲ್ಲ. ಓಲಗ ಇ
ಮಾಂಗಲ್ಯಧಾರಣೆ ಇಲ್ಲ. ಆರತಿ ಅಕ್ಷತೆ ಇಲ್ಲ. ಆದರೆ ಈ ಮರದ, ಆ ಮರದ ಎಲ್ಲ ಮರಗಳಲ್ಲಿ
ವಾಸಿಸುವ ಹಕ್ಕಿಗಳಲ್ಲಿ, ಹೆಣ್ಣು ಪಕ್ಷಿಗಳು, ಅದರದರ ಕಾಲ ಬಂದಾಗ ಕಾಲಧರ್ಮದಂತೆ ಬಸಿರಾಗುತ್ತ





ಮರಿಗಳನ್ನು ಹಾಕುತ್ತವೆ. ಹೀಗಾಗಿ ಆ ಮರದ ತುಂಬಾ ಬಗೆ ಬಗೆಯ ಹಕ್ಕಿಗಳೇ. ಹಕ್ಕಿಮರಿಗಳೇ.

ಇವುಗಳ ಹುಟ್ಟು, ಬೆಳವಣಿಗೆಯಂತೆ ಸಾವೂ ಸಹ. ಸಹಜ ಸಾವು, ಪ್ರಕೃತಿಯ ವಿಕೋಪದ ಸಾವು- ಇವುಗಳಿಗಿಂತ ಕ್ರೂರಿ ಮಾನವನಿಂದಲೇ ಇವುಗಳಿಗೆ ಹೆಚ್ಚು ಸಾವು. ಇಂಥವರು ಚತುರತೆಯಿಂದ ಯಾರೂ ನೋಡಬಾರದು ಹಾಗೆ, ಬಲೆ ಇತ್ಯಾದಿಗಳನ್ನು ಹರಡಿ, ಹಿಡಿದು, ಕತ್ತು ಮುರಿದು, ಬೇಯಿಸಿ ತಿಂದುಬಿಡುತ್ತಾರೆ. ಗುಟ್ಟಾಗಿ ಮಾರಾಟ ಮಾಡುವವರೂ ಉಂಟು.



ಒಂದು ದಿನ.

ಆ ದಿನ ಬೆಳಗ್ಗೆ ವಿಪರೀತ ಮಂಜು. ಈಗ ತಾನೇ ಸೂರ್ಯೋದಯವಾಗಿದೆ. ಮಂಜಿನ ಮೇಲೆ ಸೂರ್ಯಕಿರಣಗಳು ಹಾಯ್ದು, ಸುತ್ತಮುತ್ತ ಎಲ್ಲೆಲ್ಲೂ ಅಂಬಲಿ ಸುರಿಯುತ್ತಿರುವ ಹಾಗಿದೆ. ಉದ್ದಕ್ಕೆ, ಅಡ್ಡಕ್ಕೆ ಚಿಮ್ಮುವ ಸ್ಯಾಂಕಿ ಕೆರೆಯ ನೀರೂ ಕಾಣದ ಹಾಗೆ ಮಂಜುಹೊಗೆ ದಟ್ಟವಾಗಿದೆ. ಆ ಕಡೆ ಈ ಕಡೆ ಇರುವ ಮರಗಿಡಗಳು, ಭವ್ಯ ಕಟ್ಟಡಗಳು, ಯಾಕೆ, ರಸ್ತೆ ರಸ್ತೆಗಳೂ ಕಾಣದ ಹಾಗೆ ಮಂಜುಸುರಿತ. ಇದರ ಅಟ್ಟಹಾಸವನ್ನು ಕಡಿಮೆ ಮಾಡುತ್ತೇನೆ ಎನ್ನುವ ಹಾಗೆ ಟಾರ್ಚ್ ಅಮುಕಿ, ಬೆಳಕು ಚೆಲ್ಲಿದಂತೆ ಈಗಷ್ಟೇ ಸೂರ್ಯ ಕಿರಣಗಳ ಹೊಂದೇರು; ಹೊರಳು.

ತುಂಬಾ ಚಳಿ. ಕಿವಿಕೊರೆದು ಹೋಗುವಂಥ ಚಳಿ. ಎದೆ ನಡುಗಿಸುವಂಥ ಚಳಿ.

ಎಂಥ ಚಳಿ ಆದರೇನು? ತಮ್ಮ ಕರ್ತವ್ಯವನ್ನು ತಾವು ಮಾಡಲೇಬೇಕು. ಚಳಿ ಎನ್ನುತ್ತ ರಗ್ಗನ್ನು ಎಳೆದುಕೊಂಡು, ಪಶು-ಪಕ್ಷಿ, ಪ್ರಾಣಿಗಳು ಮಾನವರಂತೆ ಸುಮ್ಮನೇ ಇರಲು ಸಾಧ್ಯವೆ? ಕಾಲು ಚಾಚಿ ಮಲಗಲು ಆದೀತೆ? ಗಗನದಲ್ಲಿ ಹಾರಾಡುತ್ತ, ಮರಮರಗಳ ಕೊಂಬೆಕೊಂಬೆಗಳಲ್ಲಿ ವಾಸಿಸುವ ಸಹಸ್ರಾರು ಪುಟ್ಟ ಪುಟ್ಟ, ಮುದ್ದು ಮುದ್ದು ಹಕ್ಕಿಗಳು ಸೋಮಾರಿಗಳಾಗಿರಲು ಸಾಧ್ಯವೆ? ಅವು ರೆಕ್ಕೆಗಳನ್ನು ಜಾಡಿಸಿಕೊಂಡು, ಮಂಜು-ಚಳಿಯಲ್ಲಿ ತೊಯ್ದು ತೊಪ್ಪೆಯಾಗಿ, ಎಲ್ಲೆಲ್ಲಿ ತಮಗೆ ಆಹಾರ ಸಿಗುತ್ತದೆಯೋ ಅಲ್ಲಿಗೆ ಹಾರಬೇಕು; ಸಂಗ್ರಹಿಸಬೇಕು. ಇದು ಅವುಗಳ ಕರ್ತವ್ಯ, ಪ್ರಕೃತಿಯ ಧರ್ಮ.

ಎಂದಿನಂತೆ ಅಂದೂ, ಜಾನಕಿ, ತನ್ನ ಕೊಕ್ಕಿನಿಂದ ತನ್ನ ಪುಟ್ಟ ಮರಿಗಳ ಹೊಟ್ಟೆಗಳನ್ನು ತಿವಿದು, ರೆಕ್ಕೆಗಳನ್ನು ಹರಡಿ, ಮುದ್ದು ಮಾಡಿ, ''ಪುಟಾಣಿಗಳಾ... ಬೇಗ ಬಂದ್ಬಿಡ್ತೀನಿ...'' ಎಂದು ಗೂಡಿನಿಂದ ಒಂದೇ ಹಾರು ಕೊಂಬೆಗೆ ಜಿಗಿದು, ಅಲ್ಲಿಂದ ಪೂರ್ವಕ್ಕೆ, ಸದಾಶಿವ ನಗರದ ಭವ್ಯ ಬಂಗಲೆಗಳ ಮೇಲೆ ಹಾರತೊಡಗಿದಳು.

ಹೌದು. ಸ್ಯಾಂಕಿ ಕೆರೆಯ ಪೂರ್ವ ಭಾಗ ಸದಾಶಿವ ನಗರ. ಇದು ಬೆಂಗಳೂರಿನಲ್ಲಿ ತುಂಬಾ ಅದ್ದೂರೀ ಬಡಾವಣೆ. ಮಂತ್ರಿಗಳು ಉಪಮಂತ್ರಿಗಳು, ಕಿರಿಮಂತ್ರಿಗಳು ಮಾಜೀ ಮಂತ್ರಿಗಳು, ಪ್ರಸಿದ್ಧ

ಸಿನಿಮಾ ನಟರು ಭಾರೀ ಭಾರೀ ಶ್ರೀಮಂತರು... ಇಂಥವರೇ ಇರುವ ಬಡಾವಣೆ. ಈ ಬಡಾವಣೆಯ
ಇರುವವರು ಈ ರಾಜ್ಯವನ್ನೇ ನಿಯಂತ್ರಿಸುತ್ತಾರೆ. ನೆಲದ ಮೇಲೆ ಇವರು ವಾಸಿಸಿದರೂ, ದಿನಬೆಳಗೆದ್ದ
ಡೆಲ್ಲಿ, ಮುಂಬಯಿ, ದುಬಾಯಿ - ಹೀಗೆ ಅಲ್ಲಿ ಇಲ್ಲಿ ಹಾರಾಡಿಕೊಂಡೇ ಇರುತ್ತಾರೆ. ಪಕ್ಷಿಗಳ ಹಾಗೆಯೇ

ಹೀಗೆ ಅದ್ದೂರೀ ಬದುಕು ಸಾಗಿಸುತ್ತ ಇರುವವರ ಭವ್ಯ ಬಂಗಲೆಗಳಲ್ಲಿ, ಆಳುಕಾಳು
ಮೇಲ್ವಿಚಾರಣೆಯಲ್ಲಿ, ಅವರು ಬಿಸಿಲಿಗೆ ಹಾಕುವ ಗೋಧಿ, ಅದು ಇದು ಧಾನ್ಯಗಳು ಇಂಥವುಗಳ
ಜಾನಕಿ ಹಾರಿಹೋಗಿ, ಕೊಕ್ಕು ಚಾಚುತ್ತಾಳೆ; ಸಂಗ್ರಹಿಸುತ್ತಾಳೆ. ಅವಳು ನಗರದಲ್ಲಿಯ
ಮಾನವರೊಂದಿಗೇ ಬದುಕು ಸಾಗಿಸುತ್ತ ಇರುವವಳಾದ್ದರಿಂದ, ಇಂಥ ಭವ್ಯ ಬಂಗಲೆಗಳ ಹಿಂಭಾ
ಅಕ್ಕಪಕ್ಕ ಇರುವ ವಿಶಾಲ ಜಾಗಗಳಲ್ಲಿ, ಅಡಿಗೆ ಮನೆಗಳ ಒಳಗೆ-ಹೊರಗೆ, ಅಡಿಗೆ ಭಟ್ಟರ ಕಣ್ಣು ತಪ್ಪಿ
ಚಪ್ಪಾತಿ, ರೊಟ್ಟಿ, ಪೂರಿ, ಅದು-ಇದು ಹೀಗೆ ಹಾರಿಸಿಕೊಂಡು ಬರುವುದೂ ಉಂಟು.



ಒಟ್ಟಿನಲ್ಲಿ, ಮೇಲೆ ಜಾನಕಿ, ಒಂದೆರ
ಗಂಟೆಗಳಲ್ಲಿಯೇ, ಏನಾದರೂ, ಎಂಥದಾದರೂ ಆಹ
ಸಂಗ್ರಹಿಸಿಬಿಡುತ್ತಾಳೆ. ಅಷ್ಟಲ್ಲದೆ ಪ್ರಕೃತಿ ನಿಯಮದಂತೆ,
ಮರ, ಈ ಮರಗಳ ಬುಡಗಳಲ್ಲಿ, ಬೇಲಿಗಳ ಅಂಚಿನಲ್ಲಿ ಹ
ಹುಪ್ಪಟೆಗಳೂ ಅವಳಿಗೆ ಸಿಗುತ್ತವೆ.



ತಾಯಿ ಜಾನಕಿ ಗೂಡನ್ನು ಬಿಟ್ಟು, ಸದಾಶಿವ ನಗ
ಭವ್ಯ ಬಂಗಲೆಗಳತ್ತ, ಮಂತ್ರಿಗಳ ಅರಮನೆಗಳ ಕ
ಹಾರಿದ ಮೇಲೆ, ಅರ್ಚಿಗೆ ಸ್ವಲ್ಪ ನಿದ್ದೆಬರುವ ಹಾಗಾಯಿ
ಅವಳು ಹಾಗೆಯೇ, ತೇಲುಗಣ್ಣನೊಂದಿಗೆ, ಗೂಡಿನ ಒಂ
ಬದಿಗೆ ತಲೆಚಾಚಿದಳು.

ಹೌದು, ಈ ಮರಿಹಕ್ಕಿಗಳು, ಅರ್ಚನಾಳನ್ನು ಅರ್ಚಿ
ಎಂದೂ, ಸುಧಾಳನ್ನು ಸುಧೀ ಎಂದೂ ಪರಸ್ಪರ ಹೇಳಿ ಕ
ಕೊಳ್ಳುತ್ತವೆ. ತಾಯಿಯೂ ಹಾಗೆಯೇ. ಆ ಮರದ ಇನ್ನಿತರೇ ವರ್ಗದ ಹಕ್ಕಿಪಕ್ಷಿಗಳೂ ಹಾಗೆಯೇ
''ಏನು ಜಾನಕಮ್ಮನವರೇ, ಅರ್ಚಿ ಏನ್ಮಾಡ್ತಾ ಇದಾಳೇ, ಸುಧೀ ನಿದ್ದೆ ಮಾಡ್ತಾ ಇದ್ದಾಳೋ?''-ಈ ರೀ

ಹಾಂ, ಒಂದು ವಿಚಾರ. ತಾಯ ಗರ್ಭದಿಂದ ಮೊದಲು ಬಂದ ಮೊಟ್ಟೆ ಸುಧಾ. ಆದುದರಿ
ಅವಳು ಅಕ್ಕ. ಎರಡನೆಯ ಮೊಟ್ಟೆ ಅರ್ಚನಾ. ಆದುದರಿಂದ ಅವಳು ತಂಗಿ. ಆಮೇಲಷ್ಟೆ ಮೊಟ್ಟೆ
ಒಡೆದು ಇವು ಮರಿಗಳಾಗಿವೆ.

ಆದರೆ ಅರ್ಚನಾ, ತನ್ನ ಅಕ್ಕನನ್ನು 'ಅಕ್ಕಾ' ಎನ್ನುವುದಿಲ್ಲ. ತನ್ನ ತಾಯಿ ಮತ್ತು ಇತರೇ ಪಕ್ಷಿಗಳು ಕ
ಕರೆಯುವ ಹಾಗೆಯೇ, ಸುಧೀ ಎನ್ನುತ್ತಾಳೆ. ಸುಧೀ, ಅರ್ಚನಾಳನ್ನು ಅರ್ಚೀ ಎನ್ನುತ್ತಾಳೆ.

ಅರ್ಚಿಗೆ ಈಗ ನಿದ್ದೆಬಂದ ಹಾಗಾಗಿ, ಮೆಲ್ಲಗೆ ಹಾಗೆಯೇ ತಲೆಯನ್ನು ಒಂದು ಪಕ್ಕ ವಾಲಿಸಿದ
ಸುಧೀ ಎಂದರೆ ಸುಧಾ, ತನ್ನ ಪುಟ್ಟ ಪುಟ್ಟ ಕಣ್ಣುಗಳನ್ನು ಮಿಣಮಿಣಮಿಣ ಹೊರಳಿಸಿದಳು. ಅವಳಿಗೆ
ಬರುತ್ತ ಇಲ್ಲ. ಪುರ್ ಎನ್ನುತ್ತ ಅವಳು ಗೂಡಿನ ಬಾಯಿಗೆ ಕೊಕ್ಕು ಚಾಚಿದಳು. ಮೇಲೆ ಬಂದಳು.
ಕೊಂಬೆಯ ಮೇಲೆ ತನ್ನ ಪುಟ್ಟ ಪುಕ್ಕವನ್ನು ಕೆಳಗೆ ಇಳಿಬಿಟ್ಟು ಕುಳಿತುಕೊಂಡಳು.

ಸೂರ್ಯೋದಯವಾಗಿ ಸೂರ್ಯ ಕಿರಣಗಳು ದಿಕ್ಕು ದಿಕ್ಕುಗಳಲ್ಲಿ ಹರಡುತ್ತ ಇದ್ದರೂ, ಈ ಮರ ಆ ಮರಗಳ ಕೊಂಬೆ ಕೊಂಬೆಗಳಿಗೆ ಇನ್ನೂ ಸೂರ್ಯ ಕಿರಣಗಳು ತಾಗಿಲ್ಲ. ಚಳಿಯೋ ಚಳಿ. ತುಟಿಗಳು ಭರತನಾಟ್ಯ ಆಡುವಂಥ ಚಳಿ. ಅಲ್ಲಿನ ಮರಮರಗಳೂ ಕೊಂಬೆಕೊಂಬೆಗಳೂ ಕಾಣದ ಹಾಗೆ ಮಂಜುಹೊಗೆ ಇನ್ನೂ ವ್ಯಾಪಿಸಿಕೊಂಡೇ ಇದೆ.

ಅಲ್ಲ, ಈ ಸುಧಾಳಿಗೆ ಇಂದು ಯಾಕೆ ಈ ಥರ ಬುದ್ಧಿ ಬಂತು? ಕೆಟ್ಟ ಬುದ್ಧಿ? ಈ ಬೆಳಗಿನ ಸಮಯದಲ್ಲಿ? ಏನು ಮುದ್ದು ಹಕ್ಕಿಯಪ್ಪ ಇವಳು? ಇದಲ್ಲ ಚೆನ್ನಾಗಿಲ್ಲ ಕಣೇ.

ಅವಳಿಗೆ ಈಗ ಏನೋ ಮನಸ್ಸಾಗಿ ಅಥವಾ ಕಾರಣವೇ ಇಲ್ಲದೆ, ಆ ಮರದ ಕೊಂಬೆಯಿಂದ ಪುರ್ ಎಂದು ಕೆಳಗೆ ಹಾರಿ, ಒಂದು ದೊಡ್ಡ ಗಿಡದ ಮೇಲೆ ಕುಳಿತಳು. ಬಳಿಕ ಆ ಕಡೆಗೆ ಶಿರ್ ಎನ್ನುತ್ತ, ಮೂರಡಿ ಎತ್ತರದ ಒಂದು ಗಿಡ. ಅಲ್ಲಿಂದ ಮತ್ತೊಂದು ಗಿಡ್ಡ ಮರದ ಕೊಂಬೆ. ಬೆಳಗಿನ ಸಮಯದಲ್ಲಿಯೇ ಇಂಥ ಆಟ; ಹಾರಾಟ. ಪುರ್‌ಪುರ್‌ಪುರ್.

ಹೌದು. ಅವಳೂ, ತಂಗಿ ಅರ್ಚನಾಳೂ ಮೂರು ದಿನಗಳಿಂದ ಹಾರಲು ಅಭ್ಯಾಸ ಮಾಡಿಕೊಳ್ಳುತ್ತ ಇದ್ದಾರೆ. ತಾಯಿ ಜಾನಕಿ ಹಾರುವ ವಿಧಾನವನ್ನು ತನ್ನ ಮರಿಗಳಿಗೇ ಹೇಳಿಕೊಡುತ್ತ ಇದ್ದಾಳೆ. ಈ ಕೊಂಬೆಯಿಂದ ಆ ಕೊಂಬೆ, ಆ ಕೊಂಬೆಯಿಂದ ಈ ಕೊಂಬೆ-ಹೀಗೆ.

ಈಗ ತಂಗಿ ಇಲ್ಲದೆ, ತಾಯಿ ಇಲ್ಲದೆ ಸುಧಾ, ಹೀಗೆ, ಹಾಗೆ ರಿಹರ್ಸಲ್ ಮಾಡುವವರ ಹಾಗೆ ಹಾರಿ ಹಾರಿ, ಬಳಿಕ ಏನೋ ಮನಸ್ಸಾಗಿ ಪಶ್ಚಿಮಕ್ಕೆ ತಿರುಗಿಬಿಟ್ಟಳು. ಈಗಷ್ಟೆ ಅವಳಿಗೆ ತಾನು ಮಾಡಿದ ತಪ್ಪಿನ ಅರಿವಾಗತೊಡಗಿದೆ. ಜತೆಗೇ ಭಯವೂ ಸಹ. ಏನಪ್ಪ ಗತಿ ಎನ್ನುವ ಹಾಗೆ. ತಲೆಗಿರಗಿಟ್ಟಿ ಆದಹಾಗೆ. ಕೂಗಿಕೊಳ್ಳುವ ಹಾಗೆ.

ಹೌದು. ಅವಳು ಪಶ್ಚಿಮಕ್ಕೆ ಹಾರಿದಳಷ್ಟೆ. ಹಾಗೆ ಹಾರಿದವಳು ದಡವನ್ನು ದಾಟಿ, ಈ ಕಡೆಗೆ, ಸ್ಯಾಂಕಿ ಕೆರೆಯ ಮೇಲೆ ಬಂದುಬಿಟ್ಟಿದ್ದಾಳೆ. ಇನ್ನು ಮುಂದೆ ಮರಗಳು ಇಲ್ಲ. ಗಿಡಗಳೂ ಇಲ್ಲ. ಕೆಳಗೆ ನೋಡಿದರೆ ಬರೇ ನೀರು. ಅಬ್ಬಬ್ಬಾ ಇದನ್ನು ನೋಡಿದರೆ ಭಯ ಆಗುತ್ತಪ್ಪ. ಇದು ಅಲೆಗಳನ್ನು ಚಿಮ್ಮಿಸುತ್ತ ಇದೆ. ಉಹು ಉಹೂ ಕೆಲವು ಸಮಯ ನೀರೂ ಕಾಣುತ್ತ ಇಲ್ಲ. ನೀರಿನ ಮೇಲೆ ಗುಪ್ಪೆಗುಪ್ಪೆ ಮಂಜಿನ ಹೊಗೆ. ಭುಸ್ ಎನ್ನುವ ಹಾಗಿದೆ. ನೀರು ಹಾವಿನ ಹೆಡೆಯೋ ಎನ್ನುವ ಹಾಗಿದೆ. ಸೂರ್ಯಕಿರಣಗಳು ಇನ್ನೂ ನೀರಿನ ಮೇಲೆ ಹರಡಿಲ್ಲ.

ಸುಧಾಗೆ ಈಗಷ್ಟೆ ತುಂಬಾ ದಿಗಿಲಾಗಿ ಹೋಯಿತು. ಅವಳು ಮರಗಿಡಗಳು, ಬಳ್ಳಿ ಎಲ್ಲವನ್ನೂ ದಾಟಿ, ಸ್ಯಾಂಕಿ ಕೆರೆಯ ಅರ್ಧ ಭಾಗ ಬಂದುಬಿಟ್ಟಿದ್ದಾಳೆ. ಇದೀಗ ಅವಳು ಹಾರುವುದನ್ನು ಅಭ್ಯಾಸ ಮಾಡಿಕೊಳ್ಳುತ್ತ ಇರುವುದರಿಂದ, ಬೇಗ ಬೇಗ ರೆಕ್ಕೆಗಳನ್ನು ಜಾಳಿಸಲು ಸಾಧ್ಯವಾಗುತ್ತ ಇಲ್ಲ. ಅಷ್ಟಲ್ಲದೆ ತುಂಬಾ ದೂರ ಹಾರಲು ಅವಳ ರೆಕ್ಕೆಗಳು ಇನ್ನೂ ಬಲಿತಿಲ್ಲ; ಬಲಿಷ್ಠವಾಗಿಲ್ಲ; ಪಕ್ವವಾಗಿಲ್ಲ. ಸ್ಯಾಂಕಿ ಕೆರೆಗೆ ಉದ್ದದ ಒಂದು ಸೇತುವೆ ಇದೆಯಷ್ಟೆ. ಸೇತುವೆಯ ಆ ಬದಿ-ಈ ಬದಿ ಇರುವ ಸರಳುಗಳು, ಅದು-ಇದು ವಿದ್ಯುಚ್ಛಕ್ತಿಯ ರೆಂಬೆಗಳು, ಸೇತುವೆಯ ಗೋಡೆ-ಇತ್ಯಾದಿಗಳ ಮೇಲಾದರೂ ಕುಳಿತುಕೊಳ್ಳೋಣ, ಸ್ವಲ್ಪ ವಿಶ್ರಮಿಸೋಣ ಎಂದರೆ ಅದೂ ಸಾಧ್ಯವಾಗುತ್ತ ಇಲ್ಲ. ಕಾರಣ ಸೇತುವೆಯ ಮೇಲುಗಡೆ ಉತ್ತರಕ್ಕೆ, ಅಷ್ಟು ದೂರದಲ್ಲಿ, ನೀರಿನ ನಡುಮಧ್ಯಕ್ಕೆ ಈಗ ಅವಳು ಹಾರಿಬಂದುಬಿಟ್ಟಿದ್ದಾಳೆ. ಕುಳಿತುಕೊಳ್ಳುವುದೋ ವಿಶ್ರಮಿಸುವುದೋ ಆಗದ ಹಾಗೆ ಮಂಜುಹೊಗೆ ವ್ಯಾಪಿಸಿರುವ ನೀರಿನ ಮೇಲೆ ಅವಳು ಇದ್ದಾಳೆ, ಹಾರಿಕೊಂಡಿದ್ದಾಳೆ.





ಅವಳಿಗೆ ಈಗ ಬಿದ್ದುಬಿಡುವ ಹಾಗೆಯೇ ಆಗಿಹೋಯಿತು. ಹಾರಲು ರೆಕ್ಕೆಗಳಿಗೆ ಬಲ ಬರುತ್ತ ಇ ಕಣ್ಣು ಮಂಜು. ದೇಹ ಪಲ್ಟಿ ಹೊಡೆಯುವ ಹಾಗಿದೆ. ಒಂದು ಸಲ ಅವಳು ಜೋರಾಗಿ ಚೆಂವ್ ಚೆಂವ್ ಚೆಂವ್ ಚೆಂವ್ ಚೆಂವೋ ಚೆಂವ್ ಎಂದು ಕೂಗಿಕೊಂಡಳು.

''ಅಯ್ಯೋ ಅಮ್ಮಾ... ಅಮ್ಮಾ... ಅರ್ಚೀ... ಲೇ ಅರ್ಚೀ... ನಂಗೆ ತುಂಬಾ ಭಯ ಆಗ ಕಣೇ... ಅರ್ಚೀ... ಅರ್ಚೀ...''

ತಾನು ಎಡವಟ್ಟು, ಎಡಬಿಡಂಗಿ ಮಾಡಿಕೊಂಡರೆ ಅರ್ಚಿಯೂ, ಅಮ್ಮನೂ ಏನು ಮಾಡುತ್ತಾ ಅವರು ಇಲ್ಲಿ ಎಲ್ಲಿದ್ದಾರೆ?

ಸದ್ಯ, ಸುಧಾ ಹೇಗೋ ಮಾಡಿ, ತನ್ನ ಪುಟ್ಟ ರೆಕ್ಕೆಗಳನ್ನು ಪಟಪಟ ಬಡಿದು, ಜಾಳಿಸಿ, ಈ ಕಡೆ, ದಡ ಬಂದು ಸೇರಿಯೇಬಿಟ್ಟಳು. ಅವಳ ಪುಣ್ಯ ಕೆಳಗೆ ಬೀಳಲಿಲ್ಲ. ನೀರಿನ ಪಾಲಾಗಲಿಲ್ಲ.

ಹಾಗೆ ಹಾರಿ ಬಂದವಳು ಈ ದಡದಲ್ಲಿ ಒಂದು ದೊಡ್ಡ ಗಿಡದ ಮೇಲೆ ಕುಳಿತಳು. ಆ ದೊಡ್ಡ ಗಿ ಇಷ್ಟೆ ಎತ್ತರ ಇದೆ. ಆ ಗಿಡದಲ್ಲಿ ಇಷ್ಟಗಲ ಇಷ್ಟಗಲ ಎಲೆಗಳು. ಅಂಗೈಯಗಲ ಒಂದೇ ಒಂದು ದೊ ಹಳದಿ ಹೂವನ್ನು ಅರಳಿಸಿದೆ.

ಹಳದಿ ಹೂವಿಗೆ ಸೇರಿದ ಹಾಗೆಯೇ ಕುಳಿತ ಸುಧಾ ಈಗ ಗಡಗಡ ನಡುಗತೊಡಗಿದಳು. ಪಚ ಪಚಕ್ ಎಂದು ರೆಕ್ಕೆಗಳನ್ನು ಜಾಳಿಸಿಕೊಂಡಳು. ಅಬ್ಬಾ, ತಾನು ಇಂದು ಎಂಥ ಎಡವಟ್ಟು ಕೆ ಮಾಡಿಕೊಂಡೆ. ಅರ್ಚಿಗೆ ತಿಳಿಸದೆ, ಅಮ್ಮನಿಗೆ ತಿಳಿಸದೆ, ಒಬ್ಬಳೇ ಹೀಗೆ ತಾನು ಹಾರಿಬಂದು ಆಯಿತಲ್ಲ. ತನ್ನ ರೆಕ್ಕೆಗಳಿಗೆ ದೂರ ದೂರ ಹಾರಲು ಇನ್ನೂ ಶಕ್ತಿ ಬಂದಿಲ್ಲ. ಹಾರುವ ವಿಧಾನವ ಸಂಪೂರ್ಣವಾಗಿ ತಿಳಿದುಕೊಂಡಿಲ್ಲ. ಅಂಥಾದ್ದರಲ್ಲಿ ತಾನು ಇಂಥ ತಪ್ಪು ಕೆಲಸ ಮಾಡಿ, ನೀರಿಗೆ ಬಿದ್ದಿ ಏನು ಗತಿ? ತನಗೆ ಈಜು ಇನ್ನೂ ಬರುವುದಿಲ್ಲ.

ಅದು ಸರಿ, ಈಗ ಇಲ್ಲಿಂದ ತನ್ನ ಗೂಡಿಗೆ ಹಿಂದಿರುಗುವುದು ಹೇಗೆ? ಅಮ್ಮ ಈಗ ತವ ಏನಾದರೂ ಆಹಾರ ತಂದಿರುತ್ತಾಳೆ. ತಾನು ಇಲ್ಲದೆ, ತನ್ನನ್ನು ಕಾಣದೆ, ಅಮ್ಮ ಎಷ್ಟು ಗೋಳಾಡ ಇದ್ದಾಳೋ ಏನೋ? ಅಮ್ಮನ ಕಣ್ಣಿಂದ ನೀರು ಬರಿಸುವುದೇ? ಛೇ ಛೇ. ತನ್ನನ್ನು ಕಾಣದೆ ಅಚಿ 'ಚೆಂವೋ ಚೆಂವ ಚೆಂವ ಚೆಂವೋ ಚೆಂವ ಚೆಂವ' ಎಂದು ಕೂಗಿಕೊಳ್ಳುತ್ತ, ಗಾಬರಿಪಡುತ್ತ ಇದ್ದಾಳ ಏನೋ? ಹೆದರಿಕೊಂಡಿದ್ದಾಳೋ ಏನೋ? ತಾವು ಒಬ್ಬರನ್ನೊಬ್ಬರು ಎಂದೂ ಬಿಟ್ಟಿರುತ್ತ ಇರಲಿಲ್ಲ.

ಸುಧಾ ಈಗಲೂ ನಡುಗಿಕೊಂಡೇ ಇದ್ದಾಳೆ. ಆದರೆ ಅವಳ ನಡುಕವನ್ನು ಹೋಗಲಾಡಿಸುತ್ತೆ ಎನ್ನುವ ಹಾಗೆ ಸೂರ್ಯಕಿರಣ, ಆ ಗಿಡ, ಗಿಡದ ಎಲೆಗಳು ಮತ್ತು ಹಳದಿ ಹೂವಿನ ಮೇಲೆ ಹಾಯ್ದಿ ಮಂಜುನೀರಿನಿಂದ ತೊಯ್ದಿದ್ದ ಹಳದಿ ಹೂ ಈಗ ಸೂರ್ಯರಶ್ಮಿ ಬೀಳುತ್ತಲೇ ಮುತ್ತಿನ ಮಣಿಗಳ ಹ ಮಿಂಚತೊಡಗಿದೆ. ಹೂವಿಗೆ ಸೇರಿದ ಹಾಗೆಯೇ ಕುಳಿತಿದ್ದ ಮಗು ಸುಧಾ ಸಹ ಈಗ ಮೋಹಕವಾ ಮಿಂಚುತ್ತ ಇದ್ದಾಳೆ.



ಇತ್ತ ಗಾಳಿ ಒಂದು ಸಲ ಬಲವಾಗಿ ಮೊರೆದು, ಮರ ಅಲ್ಲಾಡಿತು. ಕೊಂಬೆ ಅಲ್ಲಾಡುತ್ತ, ಕೊಂಬ ನೇತುಹಾಕಿಕೊಂಡಂತೆ ಇರುವ ಗೂಡೂ ತೂಗಿ, ಅರ್ಚನಾಳಿಗೆ ಎಚ್ಚರ ಆಯಿತು.

ಆದರೆ ಅರ್ಚನಾ ಸ್ವಲ್ಪ ಸೋಮಾರಿ. ಸುಧಾಳ ಹಾಗೆ ತುಂಬಾ ಚುರುಕು ಇಲ್ಲ. ಅವಳು ಇನ್ನೂ ಪೂರ್ಣ ಕಣ್ಣುಗಳನ್ನು ತೆರೆಯದೆ, ಗೂಡಿಗೆ ಸೇರಿದ ಹಾಗೆಯೇ ತಲೆಯಾನಿಸಿದ್ದವಳು 'ಚಿಂವೋ ಚಿಂವೋ ಸುಧೀ ಸುಧೀ' ಎಂದು ಕೂಗು ಹಾಕಿದಳು.

ಉಹೂಂ, ಸುಧಾಳಿಂದ ಉತ್ತರವಿಲ್ಲ. ಕೆಲವು ಸಮಯ ಸುಧಾ ತನ್ನ ರೆಕ್ಕೆಗಳನ್ನು ಅರ್ಚನಾಳ ಮೇಲೂ, ಅರ್ಚನಾ ತನ್ನ ರೆಕ್ಕೆಯನ್ನು ಸುಧಾಳ ಮೇಲೂ ಹರಡಿ ಮಲಗಿಕೊಳ್ಳುವುದು ಉಂಟು. ಈಗ ಅವಳ ಬಳಿ ಸುಧಾ ಇಲ್ಲ. ತಾಯಿ ಆಹಾರ ಸಂಗ್ರಹಣೆಗೆ ಹೊರಗೆ ಹಾರಿದ್ದಾಳೆ ಎನ್ನುವುದು ಅರ್ಚನಾಳಿಗೆ ತಿಳಿದ ವಿಷಯವಷ್ಟೆ.

ಯಾವಾಗ ಸುಧಿ ಕೂಗಿಗೆ ಮರುಕೂಗು ಹಾಕಲಿಲ್ಲವೋ, ಆಗ ಅರ್ಚಿ ಗೂಡಿನಿಂದ ಸಂಪೂರ್ಣವಾಗಿ ಹೊರಗೆ ಬಾರದೆ, ದೇಹ ಗೂಡೊಳಗೇ ಇರಲು, ತಲೆಯನ್ನು ಮಾತ್ರ ಹೊರ ಚಾಚಿ, 'ಚಿಂವೋ ಚಿಂವೋ ಚಿಂವೋ ಚಿಂವಾ ಸುಧೀ ಸುಧೀ ಲೇ ಲೇ ಸುಧೀ ಸುಧೀ' ಎಂದು ಕೂಗಿಕೊಂಡಳು.

ಇಲ್ಲ, ಸುಧಿಯಿಂದ ಉತ್ತರವಿಲ್ಲ. ಚಿಂವ ಚಿಂವ ಇಲ್ಲ. ಅರ್ಚನಾ ಈಗ ಗೂಡಿನಿಂದ ಹೊರಬಂದಳು. ಕೊಂಬೆಯ ಮೇಲೆ ಕುಳಿತುಕೊಂಡಳು. ಸುತ್ತಮುತ್ತ ಪಿಳಿಪಿಳಿ ಕಣ್ಣು ಹೊರಳಿಸಿದಳು. ಎಲ್ಲೂ ಸುಧಾ ಕಾಣುತ್ತ ಇಲ್ಲ. ಯಾಕೋ ಅವಳಿಗೆ ಭಯವಾಯಿತು. ಅಕ್ಕತಂಗಿಯರು ಒಬ್ಬರನ್ನೊಬ್ಬರು ಬಿಟ್ಟಿರುವುದೇ ಇಲ್ಲವಷ್ಟೆ. ಅವರಿಬ್ಬರೂ ಇನ್ನೂ ಸರಿಯಾಗಿ ಹಾರಲೂ ಬಾರದ ಕೂಸುಗಳಷ್ಟೆ. ಅರ್ಚನಾ ಈಗ ಜೋರಾಗಿ ಕೂಗಿಕೊಂಡಳು.

'ಚಿಂವೋೞೞ.... ಚಿಂವಾೞೞ... ಚಿಂವೋೞೞೞ... ಚಿಂವಾೞ... ಸು...ಧೀ.... ಸು...ಧೀ... ಸುಧೀ.... ಸುಧೀ.... ಅರ್ಚನಾಗೆ ಈಗ ಮೇಲೂ ಭಯವಾಗಿ ಹೋಯಿತು. ಅವಳು ಮೇಲೂ ಜೋರಾಗಿ ಕೂಗಿಕೊಂಡಳು. ಆಗ ಆ ಕೊಂಬೆಯ ಮೇಲೆ ಮತ್ತೊಂದು ಕೊಂಬೆಯಲ್ಲಿ ಗೂಡುಕಟ್ಟಿ ಕುಳಿತಿದ್ದ ಕೆಂಭೂತ ಶೀಲಾಮಣಿ, ''ಯಾಕೇ, ಅರ್ಚೀೞ ಯಾಕೆ ಹಾಗೆ ಕೂಕ್ಕೋತಾ ಇದೀಯೆ?'' ಎಂದು ಕೇಳಿದಳು.

''ಸುಧೀ ಇಲ್ಲಾ, ಅತ್ತೇ, ಎಲ್ಲೋ ಕಾಣ್ತಾ ಇಲ್ಲ.'' ಶೀಲಾಮಣಿ ಸಹ ಈಗ ಕೂಗು ಹಾಕಿದಳು. ''ಕ್ರೋಂ ಕ್ರೋಂ ಕ್ರೋಂ... ಕ್ರೋಂ... ಸುಧೀ... ಸುಧೀ... ಸುಧೀ... ಸುಧೀ...''

ಆ ಮರದ ಬುಡದಲ್ಲಿ ತನ್ನ ಕೊಕ್ಕನ್ನು ತೊಗಟೆಗೆ ಚಾಚಿ, ಹುಳಗಳನ್ನು ಹೆಕ್ಕುತ್ತ ಇದ್ದ ಮರಕುಟಿಗ ಸೀತಾರಾಮ, ಈಗ ಇವಳ ಕೂಗನ್ನು ಕೇಳಿ ಮೇಲೆ ಹಾರಿಬಂದು, ಅರ್ಚನಾಳ ಬಳಿ ಕುಳಿತ. ತನ್ನ ನೀಳಕೊಕ್ಕನ್ನು ಇವಳ ಪುಟ್ಟ ಕೊಕ್ಕಿಗೆ ಚಾಚಿ, ''ಅಮ್ಮ ಇಲ್ವೇನೇ?'' ಎಂದ.

''ಇಲ್ಲ, ಮಾವಾ. ಆಹಾರ ತರೋಕೆ ಹೋಗಿದಾಳೆ.''

ಇಷ್ಟರಲ್ಲಿ ಇವರ ಮಾತುಕತೆಗಳನ್ನು ಕೇಳಿಸಿಕೊಂಡಿದ್ದ ಪಾರಿವಾಳ, ಸುಹಾಸಿನಿ, ಇಲ್ಲಿಂದ-ಅಲ್ಲಿಗೆ, ಅಲ್ಲಿಂದ-ಇಲ್ಲಿಗೆ ಮೇಲುಕೊಂಬೆಯಿಂದ ಕೆಳಕೊಂಬೆಗೆ ಕೆಳಕೊಂಬೆಯಿಂದ ಮೇಲುಕೊಂಬೆಗೆ- ಹೀಗೆ ಆ ಮರ, ಈ ಮರ ಮೂರು-ನಾಲ್ಕು ಪ್ರದಕ್ಷಿಣೆ ಹಾಕಿದಳು; ಕೂಗಿಕೊಂಡಳು.

ನಟಿ ಸುಹಾಸಿನಿ ಮೋಹಕವಾಗಿ ನಕ್ಕರೆ ಅವಳ ಕೆನ್ನೆಯಲ್ಲಿ ಸುಂದರವಾಗಿ ಗುಳಿ ಬೀಳುವಂತೆ ಈ ಸುಹಾಸಿನಿ ಕೊರಳು ನುಲಿದರೆ, ಕೊರಳ ಬಳಿ ಮೋಹಕವಾಗಿ ಗುಳಿ ಬೀಳುತ್ತದೆ.

ಅವಳ ಕೂಗಿಗೂ ಮರುಕೂಗು ಇಲ್ಲ. ಮಾರ್ದನಿ ಇಲ್ಲ.

ಆ ಮರದ ತುತ್ತ ತುದಿಯಲ್ಲಿ ಎತ್ತರದ ಕೊಂಬೆಯ ಮೇಲೆ ಕುಳಿತಿದ್ದ ಗೂಬೆ ಶೇಷಪ್ಪನೂ ಈಗ ಒಂದು ಭಾರೀ ಕೂಗು ಹಾಕಿದ.

"ಗುಗುಗುಂ....ಗುಂ....ಗುಗುಗುಂ...ಗುಂ..."

"ಸುಧೀ...ಸುಧೀ...ಲೇ.... ಸುಧೀ... ಸುಧೀ..."

ಈಗ, ಯಾವ ಮಂತ್ರಿಗಳ ಅರಮನೆಯಿಂದ, ಉಪಮಂತ್ರಿಗಳ ಅದ್ದೂರೀ ಬಂಗಲೆಯ ಅಡಿ ಮನೆಯಿಂದ ಹಾರಿಸಿದಳೋ, ಜಾನಕಿ, ಒಂದು ಚಪಾತಿಯನ್ನು ಕಚ್ಚಿಕೊಂಡು, ಹಾರಿ ಹಾರಿ ತಾಯಿಮರದ ಬಳಿಗೆ ಬಂದೇ ಬಿಟ್ಟಿತು.

ಬಂದರೆ, ಅರ್ಚನಾ ಇಲ್ಲಿ ಮಂಕು ಸುರಿಸುತ್ತ ಕುಳಿತಿದ್ದಾಳೆ. ಪಾರಿವಾಳ, ಮರಕುಟಿಗ, ಕೆಂಬೂ ಗೂಬೆ - ಎಲ್ಲರೂ ಕೂಗು ಹಾಕುತ್ತ ಇದ್ದಾರೆ. ಆದರೆ ಯಾರ ಕೂಗಿಗೂ ಪ್ರತ್ಯುತ್ತರ ಕೊಡದೆ ಸುಧ ಕಣ್ಮರೆಯಾಗಿಬಿಟ್ಟಿದ್ದಾಳೆ.

ಜಾನಕಿ ಈಗ ಸುದ್ದಿ ತಿಳಿದು ಓ ಎಂದು ರೋದಿಸತೊಡಗಿದಳು. ಎಲ್ಲಿ ಹೋಯ್ತು ನನ್ನ ಪುಟಾಣಿ ನನ್ನ ಮುದ್ದು ಎಲ್ಲಿ ಹೋಯ್ತು? ನನ್ನ ಚಿನ್ನ ಎಲ್ಲಮ್ಮಾ? ನನ್ನ ಬಂಗಾರೀನ ಯಾರಾದರೂ ಹುಡು ತಂದುಕೊಡಿಯಮ್ಮ... ಅಯ್ಯೋ ದೇವರೇ... ಭಗವಂತಾ...

ಕಾಗೆ ಬಳಗದ ಕಾಳಯ್ಯ, ದೇವಯ್ಯನೂ ಈಗ, 'ಇರಿ, ಇರಿ. ಅವಳು ಎಲ್ಲಿ ಹೋಗ್ತಾಳೆ? ಇಲ್ಲೆ ಎಲ್ಲೋ ಇರ್ಬೇಕು' ಎಂದು ಕಾಕಾಕಾಕಾಕಾಕಾಕಾ ಕೂಗುಹಾಕುತ್ತ, ಗಲಾಟೆ ಮಾಡುತ್ತ, ಆ ಗಿಡ ಆ ಮ ಈ ಮರ ಆ ಗಿಡ ಹೀಗೆ ಎಲ್ಲ ಕಡೆಗೂ ಹಾರತೊಡಗಿದವು.

ಜಾನಕಿಯಂತೂ ಈಗ ಭಾರೀ ರಾದ್ಧಾಂತ ಮಾಡತೊಡಗಿದ್ದಳು. ನನ್ನ ಮುದ್ದು ಎಲ್ಲಿ? ನನ್ನ ಪುಟಾ ಎಲ್ಲಿ? ನನ್ನ ಅಪರಂಜಿ ಎಲ್ಲಿ?

ಆ ಮರದಲ್ಲಿ ವಾಸಿಸುವ ನಾನಾ ಜಾತಿಗಳ ಹಕ್ಕಿಬಳಗ, ಈಗ ಸುಧಾಳನ್ನು ಹುಡುಕ ದಿಕ್ಕುದಿಕ್ಕುಗಳಿಗೆ ಚೆದುರಿ ಹಾರತೊಡಗಿದವು. ಕಾಗೆ ಬಳಗದ ಕಾಳಯ್ಯ, ದೇವಯ್ಯರೊಂದಿ ಸದಾಶಿವಯ್ಯನೂ, ಚೆನ್ನಬಸಪ್ಪನೂ ಈಗ ಬಂದು ಸೇರಿಕೊಂಡರು. ಈ ನಾಲ್ಕೂ ಕಾಗೆಗಳೂ ಈ ಕಾಕಾಕಾಕಾ ಎನ್ನುತ್ತ ಪಶ್ಚಿಮಕ್ಕೆ ಸ್ಯಾಂಕಿ ಕೆರೆಯ ಮೇಲೆ ಹಾರತೊಡಗಿದವು.

ಹಾಗೆ ಹಾರಿಬಂದರೆ, ಈಚೆ ದಡದಲ್ಲಿ ಆ ದೊಡ್ಡ ಹಳದಿ ಹೂವಿಗೆ ಸೇರಿದ ಹಾಗೆ ಮೋಹಕವಾ ಆದರೆ ನಡುಗುತ್ತ, ಪಿಳಿ ಪಿಳಿ ಕಣ್ಣುಗಳನ್ನು ಹೊರಳಿಸುತ್ತ, ಸುಧಾ, ಸ್ಯಾಂಕಿ ಕೆರೆಯ ನೀರಿನ ಹೊರಳ ನೋಡುವವಳ ಹಾಗೆ ಕುಳಿತಿದ್ದಾಳೆ!

ದೇವಯ್ಯ ಮೊದಲು ಸುಧಾಳನ್ನು ನೋಡಿ ಕೂಗಿಕೊಂಡ:

ಕಾಕಾಕಾಕಾ.... ಕಾಕಾಕಾಕಾ....

"ಲೇ... ಲೇ... ಕಳ್ಳೀ... ಅಲ್ಲಿ ಎಲ್ಲರೂ ನಿನ್ನನ್ನು ಕಾಣದೆ ಗೋಳಾಡ್ತಾ ಇದಾರೆ. ಇಲ್ಲೇನೇ ಮಾಡ ಇದೀಯೆ? ಇಲ್ಲಿಗೆ ಹ್ಯಾಗೆ ಬಂದೆಯೆ?"

ಚೆನ್ನಬಸಪ್ಪ ಗದರಿಸುವವನಂತೆ ಕೂಗುಹಾಕಿದ:

"ಅವಳ ಕೊರಳಿಗೆ, ಬೆನ್ನಿಗೆ, ಪುಕ್ಕಕ್ಕೆ, ನಾಲ್ಕು ನಾಲ್ಕು ಬಿಗೀರಿ, ಹೇಳ್ತೀನಿ. ಕತ್ತೇ ಬಡವೀ ತಂದು. ಪೋಲಿ ಕಿಟ್ಟೀ ತಂದು... ಕಾಕಾಕಾಕಾ...."

ಆ ದೊಡ್ಡ ಹಳದೀ ಹೂವನ್ನು ಅರಳಿಸಿರುವ ಗಿಡ, ಈ ನಾಲ್ಕು ಕಾಗೆಗಳೂ ಕುಳಿತುಕೊಳ್ಳುವ ಸೌಲಭ್ಯ ಇಲ್ಲದಂಥ ಇಷ್ಟೇ ಎತ್ತರದ ಗಿಡ. ಈಗ ಸುಧಾಳ ಬಳಿ ಕಾಳಯ್ಯ ಮಾತ್ರ, ಹಾರಿ ಹಾರಿ ಬಂ ಕುಳಿತ. ಅವನು ಕುಳಿತ ಭಾರಕ್ಕೆ ಆ ಗಿಡ ಅಲ್ಲಾಡಿತು. ಎಲೆಎಲೆಗಳು ಕುಣಿದವು. ಉಳಿದ ಮೂ ಕಾಗೆಗಳೂ ಆ ಮರ ಈ ಮರದ ಕೊಂಬೆಗಳ ಮೇಲೆ ಕುಳಿತವು. ಕಾಕಾಕಾಕಾ ಎಂದು ಒಂದೇ ಸಮ

ಕೂಗಿಕೊಂಡವು.

ಚೆನ್ನಬಸಪ್ಪ ಗದರಿಸಿಕೊಳ್ಳುತ್ತಲೇ, ಸುಧಾಳಿಗೆ ಅಳುವೇ ಬಂದುಬಿಟ್ಟಿತು. ಅವಳು ಚಿಂವ್ ಚಿಂವ ಚಿಂವ ಚಿಂವ ಎಂದು ಅಳುತ್ತಳುತ್ತ, ''ನಾನು ಹೀಗೆ ಬರ್ಬಾರ್ದಿತ್ತು. ಬಂದ್ಬಿಟ್ಟೆ. ತಪ್ಪಾಯ್ತು, ಮಾವಾ. ನೀರಿನ ಮೇಲೆ ಹಾರೋವಾಗ ತುಂಬಾ ಭಯ ಆಗೋಯ್ತಪ್ಪ. ರೆಕ್ಕೆಗಳನ್ನ ಜಾಳಿಸಬೇಕು ಅಂದ್ರೆ ಆಗ್ತಾನೇ ಇಲ್ಲ. ಬಿದ್ಬಿಡೋ ಹಾಗೆ ಆಯ್ತು'' ಎಂದಳು.

ಸದಾಶಿವಯ್ಯ ಕಾಕಾಕಾಕಾ ಎಂದ.

''ಬೀಳ್ಬೇಕಾಗಿತ್ತು. ಆಗ ನಿನಗೆ ಬುದ್ಧಿ ಬಂದಿರೋದು.''

ಸರಿ, ಈಗ ಮೊದಲು ಇಲ್ಲಿಂದ ಹಾರೋಣ. ಅಲ್ಲಿ ಎಲ್ಲರೂ ಗಾಬರಿಬೀಳ್ತಾ ಇದಾರೆ, ಜಾನಕಿಯಂತೂ ಭಾರೀ ಗೋಳಾಟ ಮಾಡ್ತಾ ಇದಾಳೆ ಎಂದು, ಕಾಕಾಕಾಕಾ ಎನ್ನುತ್ತ, ಮತ್ತೆ ಆ ಕಾಗೆಗಳು, ಕೊಂಬೆಗಳಿಂದ ಇತ್ತ ಜಿಗಿದು, ರೆಕ್ಕೆಗಳನ್ನು ಜಾಳಿಸಿದವು. ಸುಧಾಗೆ ಅಷ್ಟು ದೂರ ಹಾರಲು ಆಗುತ್ತ ಇಲ್ಲ, ಹಾಗೆ ಹಾರಲು ಇನ್ನೂ ಅವಳ ರೆಕ್ಕೆಗಳು ಬಲಿಷ್ಠವಾಗಿಲ್ಲ, ಸದ್ಯ, ಏನೂ ಆಗದೆ, ಕೆಳಗೆ ಬೀಳದೆ, ಒಬ್ಬಳೇ ಇಲ್ಲಿಗೆ ಈ ಮೊದಲು ಹೀಗೆ ಹಾರಿಬಂದದ್ದೇ ಪುಣ್ಯ- ಎಂದು ಕಾಳಯ್ಯ ತನ್ನ ಕೊಕ್ಕುಗಳಿಂದ ಅವಳನ್ನು ಕಚ್ಚಿ ಹಿಡಿದುಕೊಂಡು ಸ್ಯಾಂಕಿ ಕೆರೆಯ ಮೇಲೆ ಮೇಲೆ ಹಾರತೊಡಗಿದ. ಉಳಿದ ಕಾಗೆಗಳೂ ಅವನ ಹಿಂದೆ ಮುಂದೆ, ಹಾಗೆಯೇ ಹಾರತೊಡಗಿದವು.

ಸೇತುವೆಯ ಮೇಲೆ ಬೆಳಗಿನ ವಾಯುವಿಹಾರಕ್ಕೆ ಎಂದು ಹೋಗುತ್ತಿದ್ದ, ಬರುತ್ತಿದ್ದ ಮಾನವರಲ್ಲಿ ಕೆಲವರು ಈ ಅತಿಶಯವನ್ನು ನೋಡಿ ಬೆರಗಾದರು. ಹಾಗೆ ಹಾಗೆಯೇ ನಿಂತರು. ''ಅಲ್ಲಿ ನೋಡಿ, ಅಲ್ಲಿ ನೋಡಿ...'' ಎಂದು ಕೂಗುಹಾಕಿದರು. ಸೇತುವೆಯ ಮೇಲೆ ಉದ್ದಕ್ಕೂ ಗುಂಪು ಗುಂಪು ಜನ.

ಹೌದು. ಈ ದೃಶ್ಯ ಅತಿಶಯವಲ್ಲದೆ ಮತ್ತೇನು? ಒಂದು ಕಾಗೆ, ತನ್ನದಲ್ಲದ ಒಂದು ಮರಿ ಹಕ್ಕಿಯನ್ನು ಕಚ್ಚಿಕೊಂಡು ಹಾರುತ್ತ ಇದೆ. ಅದರ ಮುಂದೆ ಎರಡು ಕಾಗೆಗಳು, ಬಲಬದಿಯಲ್ಲಿ ಒಂದು ಕಾಗೆ. ಕಾಕಾಕಾಕಾ ಎಂದು ಭಾರೀ ಕೂಗು ಹಾಕುತ್ತ, ನೀರಿನ ಮೇಲೆ, ಈ ದಡದ ಕಡೆಗೆ ಅವು ಹಾರಿಕೊಂಡಿವೆ.

ಸೂರ್ಯಬಿಂಬಕ್ಕೂ ಈ ನೋಟ ನೋಡಿ ಖುಷಿಯಾಯಿತೋ ಏನೋ? ಈಗ ಒಂದು ಚೂರೂ ಮುಗಿಲಿಲ್ಲದ ಮೂಡಣ ಬಾನಿಂದ, ಸೂರ್ಯಬಿಂಬ, ಕೆಂಪು ದುಂಡು ದುಂಡು, ಮತ್ತಷ್ಟು ಮತ್ತಷ್ಟು ಮೇಲೆ ಮೇಲೆ ಮೇಲೆ ಬಂದಿತು. ಇಷ್ಟಗಲದ ಕೆಂಪು ಕೆಂಪು ದುಂಡು ದುಂಡು ಸೂರ್ಯಬಿಂಬ. ■

ಆ ದಿನ ಬೆಳಗ್ಗೆ [illegible] -
[illegible] ಸೂರ್ಯಕಿರಣಗಳು ಹಾಯ್ದು [illegible]
[illegible] ಹಾಗಿದೆ.

[illegible]



ಮುಂಚಪು



# ಮನಸ್ಸಿನಲ್ಲಿ ಮನೆ ಮಾಡಿದ ಆ ಕೂಸು

**ಮೂಲ: ಸುಧೀರ್ ಕಕರ್**
**ಕನ್ನಡಕ್ಕೆ: ಜಿ. ರಾಜಶೇಖರ**

ಎರಡು ವರ್ಷ ಪ್ರಾಯದ ಆ ಹುಡುಗಿಯ ಮುಖ ನನ್ನ ಮನಸ್ಸಿನ ಒಂದು ಮೂಲೆಯಲ್ಲಿ ಖಾಯಂ ಆಗಿ ಉಳಿದುಬಿಟ್ಟಿದೆ. ಮತ್ತೆ ಮತ್ತೆ ಅದು ನನ್ನ ಪ್ರಜ್ಞೆಯ ಮೇಲು ಪದರದಲ್ಲಿ ಮೂಡಿಬರುತ್ತದೆ. ಅದು ಹಾಗೆ ಕಾಣಸಿಕೊಳ್ಳುವ ಕೆಲವು ಸಂದರ್ಭಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಜಗತ್ತಿನ ಹಲವೆಡೆ, ಜನಾಂಗೀಯ, ಧಾರ್ಮಿಕ ಮತ್ತು ಭಾಷಿಕ ಗುಂಪುಗಳ ನಡುವೆ ನಡೆಯುವ ಹಿಂಸೆಯ ಕುರಿತು ನಾನು ಪತ್ರಿಕೆಗಳಲ್ಲಿ ಓದುತ್ತಿರುವಾಗ ಅಥವಾ ಟೀವಿಯಲ್ಲಿ ನೋಡುತ್ತಿರುವಾಗ ಗಾಯಗೊಂಡ ಆ ಹುಡುಗಿಯ ಮುಖದ ಚಿತ್ರ ನನ್ನ ಮನಸ್ಸಿನ ಎದುರು ಬಂದು ನಿಲ್ಲುವುದರಲ್ಲಿ ನಿಗೂಢವಾದದ್ದೇನೂ ಇಲ್ಲ. ಹೈದರಾಬಾದು ಶಹರದ ಬಗ್ಗೆ ಲೋಕಾಭಿರಾಮವಾಗಿ ಮಾತಾಡುತ್ತ, ಅದರ ಗತ ವೈಭವವನ್ನೋ, ಊಟ ತಿಂಡಿಗಳ ಸೊಗಸನ್ನೋ, ಪಾಳೆಯಗಾರಿ ಗತ್ತನ್ನೋ, ಜನ ನೆನಪಿಸಿಕೊಂಡಾಗ, ಆ ಹುಡುಗಿಯ ಮುಖ ನನ್ನ ಮನಸ್ಸಿನಲ್ಲಿ ಕಾಣಸಿಕೊಳ್ಳುವುದನ್ನು ಕೂಡ ನಾನು ಅರ್ಥ ಮಾಡಿಕೊಳ್ಳಬಲ್ಲೆ. ನನಗೆ ಅದು ಇಷ್ಟವಾಗುವುದಿಲ್ಲ. ಅದು ಬೇರೆ ಮಾತು. ಆದರೆ ಇನ್ನೂ ಕೆಲವು ಸಂದರ್ಭಗಳಲ್ಲಿ ಆ ಹುಡುಗಿಯ ಮುಖ ಯಾಕೆ ಧುತ್ತೆಂದು ನನ್ನ ಕಣ್ಣೆದುರು ನಿಲ್ಲುತ್ತದೆ ಎಂದು ನನಗೆ ಅರ್ಥವಾಗುವುದಿಲ್ಲ. ಆಸ್ಪತ್ರೆಯ ಹಾಸಿಗೆಯಲ್ಲಿ ಮಲಗಿರುವ ನನ್ನ ಪರಿಚಿತನೊಬ್ಬ, ಆಫೀಸಿನಲ್ಲಿ ತನ್ನ ಬಾಸ್ ಜೊತೆ ನಡೆದ ಮಾತುಕತೆಯಿಂದ ತನಗಾದ ನೋವಿನ ಬಗ್ಗೆ ನನ್ನೊಡನೆ ಹೇಳಿಕೊಳ್ಳುವಾಗ, ಅಥವಾ ನನ್ನ ಪೇಷೆಂಟ್ ಒಬ್ಬಳು, ತನ್ನ ಅಕ್ಕನಿಂದ ತಾನು ಅನುಭವಿಸಿದ ಅವಮಾನದ ಕುರಿತು ನನ್ನೊಡನೆ ಹೇಳುತ್ತಿರುವಾಗ ಯಾಕೆ ಆ ಮುಖ ಕಾಣಸಿಕೊಳ್ಳುತ್ತದೆ? ಈ ನಿಗೂಢತೆಯ ಪರದೆ ಸರಿಸಿ, ಅದನ್ನು ಸ್ಪಷ್ಟಪಡಿಸಿಕೊಳ್ಳಲು ನಾನು, ನನ್ನ ಬದುಕಿನ ಅನೇಕ ನೆನಪುಗಳನ್ನು ಮತ್ತು ಸಂಬಂಧಗಳನ್ನು ಪರಿಶೀಲಿಸಬೇಕು. ಆ ಹುಡುಗಿ, ನನ್ನ ಮನಸ್ಸಿನ ಒಳಗೆ, ಹೇಳದೆ ಬಂದು ನೆಲೆಸಿದವಳು. ಹಾಗಾಗಿ ನಾನು ಆ ಪ್ರಯತ್ನಕ್ಕೆ ಉತ್ಸಾಹ ತೋರಿಸುವುದಿಲ್ಲ.

ಮೊದಲ ಬಾರಿ ನಾನು ಆ ಹುಡುಗಿಯ ಫೋಟೋ ನೋಡಿದ್ದು ಒಂದು ಪತ್ರಿಕೆಯಲ್ಲಿ. 1990ರ ಡಿಸೆಂಬರ್ ತಿಂಗಳಲ್ಲಿ ಹೈದರಾಬಾದಿನಲ್ಲಿ ನಡೆದ ಹಿಂದು-ಮುಸ್ಲಿಂ ಕೋಮು ಘರ್ಷಣೆಯ ವರದಿಯ ಜೊತೆ ಆ ಫೋಟೋ ಕೂಡ ಅಚ್ಚಾಗಿತ್ತು. ಅದರ ಮಾರನೆಯ ವರ್ಷ, ನಾನು ಆ ಗಲಭೆಯ ಕುರಿತ ನನ್ನ ಅಧ್ಯಯನವನ್ನು ಪ್ರಾರಂಭಿಸಿದೆ. ಆಗ ನಾನು ಆ ಫೋಟೋವನ್ನು ದಿನಪತ್ರಿಕೆಗಳು ಮತ್ತು ಮ್ಯಾಗಜೇನ್‌ಗಳಲ್ಲಿ ಮೇಲಿಂದಮೇಲೆ ನೋಡಬೇಕಾಗಿಬಂತು. ಆ ವೇಳೆಗಾಗಲೇ, ಹುಡುಗಿಯ ಆ ಚಿತ್ರ ಕೋಮು ಹಿಂಸೆಯ ಒಂದು ರೂಪಕವಾಗಿ ಮಾರ್ಪಟ್ಟಿತ್ತು. ಆ ಹುಡುಗಿ ಹಿಂದುವೋ

ಮುಸ್ಲಿಮಳೋ ಎಂದು ನನಗೆ ತಿಳಿಯದು. ಆದರೆ ಹಿಂದುಗಳ ಪಕ್ಷ ವಹಿಸುವ ಒಂದು ತೆಲುಗು ಪತ್ರಿಕೆಯ ಪ್ರಕಾರ ಅವಳು ಹಿಂದು ಮತಸ್ಥಳು. ಫೋಟೋದಲ್ಲಿ ಮೊದಲು ನಿಮ್ಮ ಕಣ್ಣಿಗೆ ಬೀಳುವುದು, ತಲೆಬಾಚದ, ಕೊಳೆಯಿಂದ ಸಿಕ್ಕುಗಟ್ಟಿದ ಕೂದಲಿನ, ಕೊಳೆಗೇರಿಯ ಒಬ್ಬ ಹುಡುಗಿ. ಅಷ್ಟನ್ನು ಗಮನಿಸಿದ ಮೇಲೆ ನಿಮ್ಮನ್ನು ಆಘಾತಗೊಳಿಸುವುದು, ಆ ಹುಡುಗಿಯ ಹಣೆಯಲ್ಲಿ ಕಾಣಿಸುವ ಆಳವಾದ ಗಾಯ. ಗಾಯ ಇನ್ನೂ ಪೂರ್ತ ಒಣಗಿ ಕರೆಕಟ್ಟಿಲ್ಲ. ಅದು ಆಕೆಯ ಬಲಗಣ್ಣಿನ ರೆಪ್ಪೆಯಿಂದ ಶುರುವಾಗಿ, ಕಣ್ಣುಗುಡ್ಡೆಯನ್ನು ಸವರಿಕೊಂಡು, ಸ್ವಲ್ಪ ಚಪ್ಪಟೆ ಎನ್ನಿಸುವ ಅವಳ ಮೂಗಿನ ಮೇಲೆ ಸರಿದು, ಎಡಗೆನ್ನೆಯ, ಮರಳು ಕೂತ ಚರ್ಮದವರೆಗೆ ಸಾಗಿತ್ತು. ಅವಳ ಗಾಯಕ್ಕೆ ಹಾಕಿದ ಹೊಲಿಗೆಯಲ್ಲಿ, ತಜ್ಞ ವೈದ್ಯನ ಕಸುಬುಗಾರಿಕೆ ಕಾಣಿಸುತ್ತಿರಲಿಲ್ಲ. ಅದು, ಹುಳ ಹಿಡಿದ ಸರಕಾರೀ ಆಸ್ಪತ್ರೆಯೊಂದರ ಎಮರ್ಜೆನ್ಸಿ ರೂಮಿನಲ್ಲಿ, ಒಮ್ಮೆಗೇ ಜಮೆಯಾದ ಗಾಯಾಳುಗಳ ಜೊತೆ ಏಗಲಾರದೆ ತಲೆ ರೋಸಿದ ಒಬ್ಬ ರೆಸಿಡೆಂಟ್ ಡಾಕ್ಟರನ ಬೇಕಾಬಿಟ್ಟಿ ಕೆಲಸದ ಹಾಗಿತ್ತು. ಗಾಯವನ್ನು ಹೊಲಿದ ಹೆಣಿಗೆಗಳ + ಗುರುತು, ಹುಡುಗಿಯ ಮುಖದ ಮೇಲೆ ಯದ್ವಾತದ್ವ ಮೂಡಿದ್ದವು. ಅದನ್ನು ನೋಡಿದರೆ, ಯಾರೋ, ತಮ್ಮ + ಮತ್ತು 0 ಯ ಅರ್ಥಹೀನ ಆಟವನ್ನು ಅವಸರದಲ್ಲಿ ಮುಗಿಸಿ ಎದ್ದುಹೋದಂತೆ ಭಾಸವಾಗುತ್ತಿತ್ತು. ಹುಡುಗಿಯ ಒಂದು ಕೈ ದಿಂಬಿನ ಮೇಲಿತ್ತು. ದಿಂಬು, ಅವಳ ನೋವಿಗೆ ತುಸುವಾದರೂ ಆಸರೆಯಾದ ಹಾಗೆ ಕಾಣಲಿಲ್ಲ. ಮುಖದ ಬಲಭಾಗ ಮತ್ತು ಗಾಯಗೊಂಡ ಬಲಕಣ್ಣನ್ನು ದಿಂಬಿನ ಅಂಚಿಗೆ ಆನಿಸಿಕೊಂಡು ಅವಳು ಮಲಗಿದ್ದಳು. ತನ್ನ ಎಡಕಣ್ಣಿನಿಂದ ಅವಳು ಕ್ಯಾಮೆರಾವನ್ನು ಮತ್ತು ಜಗತ್ತನ್ನು ನೋಡುತ್ತಿದ್ದಳು. ಆ ನೋಟವನ್ನು ತಪ್ಪಿಸಲು ನಾನು ಎಚ್ಚರವಹಿಸದೆ ಇದ್ದರೆ ಆ ಕಣ್ಣು ನನ್ನನ್ನೂ ನೋಡುತ್ತದೆ.

ಆ ಭೀಕರ ಘಟನೆಯಿಂದ ಜರ್ಜರಿತವಾದ ಅವಳ ಪುಟ್ಟದೇಹ ಮತ್ತು ಆತ್ಮ ತಲುಪಿದ ಆಳ ನನ್ನ ಅಳವಿಗೆ ಮೀರಿದ್ದು. ಅವಳ ಮುಖದಲ್ಲಿ ಭಾವನೆಯೇ ಇರಲಿಲ್ಲ. ಅದೂ ನನ್ನ ಅಳವಿಗೆ ಮೀರಿದ್ದು. ಹುಡುಗಿಯ ಕಣ್ಣುಗಳಿಂದ ನಾನು ಆ ಘಟನೆಯನ್ನು ನೋಡಲು ಯತ್ನಿಸುತ್ತೇನೆ. ತನ್ನ ಮನೆ ಒಳಗೆ ನುಗ್ಗಿಬಂದ ಜನ, ರಾಕ್ಷಸರ ದಂಡಿನ ಹಾಗೆ ಆಕೆಗೆ ಕಂಡಿರಬೇಕು. ಅವರು ತಮ್ಮ ಮುಖದ ಕೆಳ ಅರ್ಧವನ್ನು ಕಪ್ಪುಬಟ್ಟೆಯಿಂದ ಮುಚ್ಚಿಕೊಂಡಿದ್ದರು. ಮನೆಯ ಬಾಗಿಲನ್ನು ಮುರಿದು ಅವರು ಒಳನುಗ್ಗಿದರು. ಅವರಲ್ಲಿ ಒಬ್ಬ ತನ್ನ ಮಚ್ಚಿನಿಂದ, ತನ್ನ ಅಪ್ಪನನ್ನು ಹೊಡೆದು ಬೀಳಿಸಿದ್ದನ್ನು ಅವಳು ನೋಡಿದಳು. ಇನ್ನೇನು ಅವಳ ಅಪ್ಪ ಅಲ್ಲಿಂದ ಓಡಬೇಕು, ಅಷ್ಟರಲ್ಲಿ ಮಚ್ಚು ಅವನ ಮೇಲೆ ಎರಗಿತ್ತು. ಅವನು ಕೆಳಗೆ ಬಿದ್ದ. ಕತ್ತಿ, ಚೂರಿ, ದೊಣ್ಣೆಗಳನ್ನು ಹಿಡಿದ ಜನ ಅವನನ್ನು ಸುತ್ತುವರಿದರು. ಅವಳ ಅಮ್ಮ ಇದನ್ನೆಲ್ಲ ನೋಡುತ್ತ, ಗರಬಡಿದು ನಿಂತಿದ್ದಾಳೆ. ಒಂದು ಚೂಪಾದ ಈಟಿ ಅವಳ ಕತ್ತನ್ನು ಇರಿಯುತ್ತದೆ. ಚೀರಿಕೊಂಡದ್ದೋ ಅಥವಾ ಕೆಮ್ಮಿದ್ದೋ ಎಂದು ಗೊತ್ತಾಗದಂತಹ ಒಂದು ಸದ್ದು ಅವಳ ಗಂಟಲಿನಿಂದ ಹೊರಡುತ್ತದೆ. ಮಗಳು ತಾಯಿಯ ಸಮೀಪ ಹೋಗಲೆಂದು ಹೆಜ್ಜೆ ಇಟ್ಟಿದ್ದಾಳೆ. ಆ ಕ್ಷಣದಲ್ಲಿ ಕತ್ತಿ ಅವಳ ಮುಖದ ಮೇಲೆ ಬೀಸಿ ಬಂದುಬಿದ್ದಿದೆ. ಆ ಗಾಯದ ನೋವು, ಅದರ ಉರಿ ಅವಳ ಅನುಭವಕ್ಕೆ ಮೀರಿದ್ದು. ಗಾಯದಿಂದ ರಕ್ತ ಅವಳ ಕಣ್ಣಿನೊಳಗೆ ಇಳಿಯುತ್ತದೆ.

ಆ ಕ್ಷಣದಲ್ಲಿ, ಅಂದರೆ, ಆ ಹುಡುಗಿ ತನಗೆ ಗೊತ್ತಿರುವ ಎಲ್ಲ ನೆಲೆಗಳನ್ನೂ, ಆಸರೆಗಳನ್ನೂ ಕಳೆದುಕೊಳ್ಳುವ ಪ್ರಜ್ಞೆಯ ಪಾತಾಳದ ಕಡೆ ಮೊದಲ ಹೆಜ್ಜೆ ಇಟ್ಟ ಆ ಕ್ಷಣದಲ್ಲಿ, ಆಕೆಗೆ ಜಗತ್ತು ತನ್ನ ರಹಸ್ಯವನ್ನು ತೋರಿಸಿತು ಎಂದು ನಾನು ಯೋಚಿಸುತ್ತೇನೆ. ಹುಟ್ಟು, ಸಾವು, ದೇಹ, ಕಾಮ, ಕುಟುಂಬ ಮುಂತಾದ ನಾನಾ ಸಂಗತಿಗಳಿಂದ ಈ ಬದುಕಿಗೆ ಒಂದು ಅರ್ಥ ಕಲ್ಪಿಸಲು ನಾವು ಹತಾಶ ಪ್ರಯತ್ನ





ನಡೆಸುತ್ತೇವೆ. ಆದರೆ ಮನುಷ್ಯ ಜೀವ ಎಂದು ನಾವು ಕರೆಯುವ ಈ ಪುಟ್ಟ ಬೆಳಕಿನ ಕಣವನ್ನು, ಅಸೀಮ ಅನಾಸಕ್ತಿ ಸುತ್ತುವರಿದಿದೆ. ಹುಡುಗಿಗೆ ಆ ಕ್ಷಣದಲ್ಲಿ ಅದರ ಅರಿವಾಗಿರಬಹುದು.



ಕುಸನೂ

ಈ ಭ್ರಾಮಕ ಕಲ್ಪನೆಗಳನ್ನು ತಲೆಯಿಂದ ಕೊಡವಿಕೊಂಡು ನಾನು, ಮತ್ತೆ ಆ ಫೋಟೋದತ್ತ ತಿರುಗುತ್ತೇನೆ. ಕಲ್ಲಿನಂತಹ ಮುಖಭಾವದ, ಒಂದು ಕಣ್ಣಿನ ನೋಟ ಕಳೆದುಕೊಂಡ ಆ ಹುಡುಗಿಯ ಫೋಟೋ, ನನ್ನ ಈ ಭ್ರಮಾಲಹರಿ, ಸಹಾನುಭೂತಿಯ ಸೋಲು ಎಂದು ನನಗೆ ಗೊತ್ತಿದೆ. ಆಕೆಯ ಮೇಲೆ ಎಸಗಲಾ ಹಿಂಸೆಯ ಅಗಾಧತೆ ಅಸಹನೀಯ. ಹಾಗಾಗಿ ನನ್ನ ವೃತ್ತಿಯ ಒಂದು ಮುಖ್ಯ ಪರಿಕರವನ್ನು-ಇನ್ನೊ ವ್ಯಕ್ತಿಯ ಮನಸ್ಸಿನ ಒಳಗೆ ಏನು ನಡೆದಿದೆ ಎಂಬುದನ್ನು ಗ್ರಹಿಸಲು ಒಬ್ಬ ಮನೋವಿಜ್ಞಾ ಬಳಸಲೇಬೇಕಾದ ಪರಿಕರವನ್ನು-ನಾನು ಈ ಸಂದರ್ಭದಲ್ಲಿ ಬಳಸಲಾರೆ. ಆ ಹುಡುಗಿ ಆಕ್ರಮಣ ಬಲಿಯಾದ ಅಸಹಾಯ ಜೀವವಾಗಿರುವುದೂ ಇದಕ್ಕೆ ಕಾರಣವಿರಬಹುದು. ಅದೃಷ್ಟ ಅವಳನ್ನು ನ ಕಟ್ಟಿಸಿಬಿಟ್ಟಿದೆ. ಅದೊಂದು ದಟ್ಟದರಿದ್ರ ಸ್ಥಿತಿ. ಸಹಾನುಭೂತಿ ತೋರಿಸಲು ಸಾಧ್ಯವಾಗುವುದು, ತಮ ಮೇಲೆ ತಾವೇ ದುರಂತವನ್ನು ತಂದುಕೊಂಡವರ ಬಗ್ಗೆ ಮಾತ್ರ; ಅಂದರೆ ಅದೃಷ್ಟದ ಸಹವರ್ತಿಗಳಾಗಿ ತಮ್ಮ ಪಾಡನ್ನು ತಾವೇ ಮೈಮೇಲೆ ಎಳೆದುಕೊಂಡವರ ಬಗ್ಗೆ ಮಾತ್ರ. ಆ ಹುಡುಗಿಯಾದರೋ, ಅದೃಷ್ಟ ಸುಮ್ಮನೆ ಬಲಿಯಾದವಳು. ದುರಂತ, ವ್ಯಕ್ತಿ, ಅದೃಷ್ಟದ ಜೊತೆ ಕೈ ಜೋಡಿಸಿದ್ದರ ನೆನಪ ಉಳಿಸಿಕೊಂಡು, ಕೊನೆಗಾದರೂ ಅದರಿಂದ ಪಾರಾಗುವ ಭರವಸೆಯನ್ನು ಇರಿಸಿಕೊಂಡಿರುತ್ತದೆ. ಆದ ಆ ಭರವಸೆಯೇ ಇಲ್ಲದ ನೋವಿನ ಜಡತೆ, ಅದನ್ನು ನೋಡುವವರ ಎದೆಯ ಮೇ ಹೆಣಭಾರವಾಗುತ್ತದೆ. ನಾನು ಆ ಹುಡುಗಿಯ ನೋವಿನ ಬಗ್ಗೆ ಸಹಾನುಭೂತಿ ತೋರಿಸಲಾರ ಯಾಕೆಂದರೆ ಆ ನೋವಿನ ನಿರ್ವಿಣ್ಣತೆಯ ಎದುರು ನನ್ನನ್ನು ನಾನು ರಕ್ಷಿಸಿಕೊಳ್ಳಬೇಕು. ಅವಳ ಬ ಕನಿಕರ ತೋರಿಸುವುದು ಸಹಾನುಭೂತಿಗಿಂತ ಸುಲಭ. ಕನಿಕರ, ಯಾವಾಗಲೂ ನಾವು ದೂರದ ನಿಂತು ವ್ಯಕ್ತಪಡಿಸುವಂತಹದ್ದು. ಹಾಗಾಗಿ ಆ ಹುಡುಗಿಯ ಮುಖ ನನ್ನನ್ನು ಕಾಡುವುದಿಲ್ಲ. ಅದು ಕಿರಿಕಿ ಮಾಡುತ್ತದೆ ಅಷ್ಟೇ. ರಸ್ತೆಯಲ್ಲಿ ನಮ್ಮ ಕಣ್ಣಿಗೆ ಬೀಳುವ ಭಿಕ್ಷೆ ಬೇಡುವ ಮಕ್ಕಳು ಅಥವಾ ರೇಜಿಗೆಯಾಗುವ ಹಾಗೆ ಅಂಗಲಾಚುವ ಕುಷ್ಠರೋಗಿಗಳು ನಮಗೆ ಕಿರಿಕಿರಿ ಮಾಡುವ ಹಾಗೆ. ನಮಗೆ ಅವರನ್ನು ಕಂಡ 'ಪಾಪ' ಅನ್ನಿಸುತ್ತದೆ; ಸಿಟ್ಟೂ ಬರುತ್ತದೆ. ಸಿಟ್ಟು ಯಾಕೆಂದರೆ, 'ಸಾಯಿ, ಆಚೆ ತೊಲಗು, ನನ್ನ ಕಣ್ಣಿ ಬೀಳಬೇಡ' ಎಂದು ನಾವು ಆ ದರಿದ್ರಗಳಿಗೆ ಹೇಳಲು ಸಾಧ್ಯವಾಗದ್ದಕ್ಕೆ.

ಹೈದರಾಬಾದಿನ ಕೋಮುಗಲಭೆಗೆ ಬಲಿಯಾದ ಪುಟ್ಟ ಹುಡುಗಿಯೊಬ್ಬಳು ನನ್ನಲ್ಲಿ ಹುಟ್ಟಿಸಿದ ಭಾವನೆಗಳ ವಿವರಣೆಯೊಂದಿಗೆ ನಾನು ನನ್ನ ಅಧ್ಯಯನವನ್ನು ಪ್ರಾರಂಭಿಸುತ್ತಿರುವುದಕ್ಕೆ ನನ್ನ ಒಂದು ನಂಬಿಕೆ ಕಾರಣ. ನೋಡುವವನ ವ್ಯಕ್ತಿತ್ವ ಮಾತ್ರವಲ್ಲ, ಅವನ ಪ್ರಜ್ಞೆ ಕೂಡ, ಅವನು ನೋಡುವ, ಮತ್ತು ವಿವರಿಸುವ ಸಂಗತಿಯ ಅಂಗವಾಗಿರುತ್ತದೆ ಎಂಬ ನಂಬಿಕೆ ಅದು. ತಂದೆ ತನ್ನ ಹೊಸ ಪೋಲರಾಯಿಡ

ಕ್ಯಾಮೆರಾದಿಂದ, ತನ್ನ ಮಗುವಿನ ಫೋಟೋ ತೆಗೆಯುತ್ತಾನೆ. ಫೋಟೋ ನೋಡಿದ ತಕ್ಷಣ ಮಗುವಿಗೆ ಸಂತೋಷವಾಗುತ್ತದೆ. ನಂತರ ಅದಕ್ಕೆ ಗೊಂದಲವಾಗುತ್ತದೆ. 'ಅಪ್ಪ, ಫೋಟೋದಲ್ಲಿ ನೀನು ಎಲ್ಲಿದ್ದೀಯ?' ಎಂದು ಅದು ಕೇಳುತ್ತದೆ. ತಂದೆ, ಫೋಟೋ ಹೊಡೆಯುವಾಗ, ಕಡೆಯ ಪಕ್ಷ ತನ್ನ ಕಾಲನ್ನು ಮುಂದೆ ಚಾಚಿ, ಫೋಟೋದ ಒಂದು ಮೂಲೆಯಲ್ಲಾದರೂ ಅದು ಕಾಣಿಸುವಂತೆ ಮಾಡಬಹುದಿತ್ತು!

ಕ್ವಾಂಟಮ್ ಭೌತಶಾಸ್ತ್ರಜ್ಞರು, ವಾಸ್ತವದ ಗ್ರಹಿಕೆಯಲ್ಲಿ ವ್ಯಕ್ತಿ ಮತ್ತು ವಸ್ತುವಿನ ನಡುವಣ ಸಂಬಂಧದ ಪ್ರಾಮುಖ್ಯತೆಯನ್ನು ಮನಗಂಡಿದ್ದಾರೆ. 'ನಾವು ಈ ಜಗತ್ತಿನ ಭಾಗ ಅಲ್ಲವೋ ಎಂಬಂತೆ, ಈ ಜಗತ್ತನ್ನು ನಾವು ವಿವರಿಸಲಾರೆವು' ಎಂಬುದು ಈ ಶಾಸ್ತ್ರವನ್ನು ಹುಟ್ಟುಹಾಕಿದ ವಿಜ್ಞಾನಿಗಳ ಗಾಢ ನಂಬಿಕೆಯಾಗಿತ್ತು. ಆದರೆ ಸಮಾಜ ವಿಜ್ಞಾನಿಗಳು ಈ ಸತ್ಯವನ್ನು ಗುರುತಿಸಲಿಲ್ಲ. ಅವರಲ್ಲಿ ಹೆಚ್ಚಿನವರು, ಮನಃಶಾಸ್ತ್ರೀಯ ಮತ್ತು ಸಾಮಾಜಿಕ ಸಂಗತಿಗಳ ತಮ್ಮ ನಿರೂಪಣೆಗಳಲ್ಲಿ, ತಮ್ಮ ಸ್ವಂತ ವ್ಯಕ್ತಿತ್ವವನ್ನು ಈಗಲೂ ಹೊರಗಿಡುತ್ತಾರೆ. ಶಾಸ್ತ್ರದ ತಡಿಕೆಯ ಮೇಲೆ ಸ್ವಾನುಭವ ಮತ್ತು ಕಲ್ಪಕತೆಗಳ ಮಾಂಸವನ್ನು ಹೊಚ್ಚಬೇಕು ಎಂದು ಅವರಿಗೆ ಅನ್ನಿಸಿಲ್ಲ. ವ್ಯಕ್ತಿಗತ ನಿಲುವು ಅವೈಚಾರಿಕ ಎಂದು ಅವರು ತಿಳಿಯುತ್ತಾರೆ. ಆ ನಿಲುವು ವೈಚಾರಿಕತೆಯ ವಿರೋಧಿ ಎಂದು ಅವರು ಭಾವಿಸದೆ ಇದ್ದಾಗ್ಯೂ ಅದು ವೈಚಾರಿಕತೆಯ ಆಚೆಗೆ ನಿಲ್ಲುವಂತಹದ್ದು ಎಂದಂತೂ ಖಂಡಿತ ಭಾವಿಸುತ್ತಾರೆ...

ಮನೋವಿಶ್ಲೇಷಣೆಯ ಶಾಸ್ತ್ರದಲ್ಲಂತೂ, ವಿಶ್ಲೇಷಕನ ವ್ಯಕ್ತಿತ್ವವೇ ರೋಗಿಯ ಕುರಿತ ಮಾಹಿತಿಯ ಒಂದು ಮುಖ್ಯ ಮೂಲವಾಗಿದೆ. ಬೇರೆ ಶಬ್ದಗಳಲ್ಲಿ ಹೇಳುವುದಾದರೆ ರೋಗಿಯನ್ನು ಕಂಡಾಗ, ತನ್ನಲ್ಲಿ ಆಗುವ ಗೊಂದಲವನ್ನು ವಿಶ್ಲೇಷಕನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲನೋ, ಅಷ್ಟರ ಮಟ್ಟಿಗೆ ಆತ ರೋಗಿಯನ್ನೂ ಅರ್ಥಮಾಡಿಕೊಳ್ಳಬಲ್ಲ. ರೋಗಿಯ ವರ್ತನೆ ಮತ್ತು ಅದಕ್ಕೆ ತನ್ನ ಪ್ರತಿಕ್ರಿಯೆ ಎರಡನ್ನೂ ವಿಶ್ಲೇಷಕ ಎಚ್ಚರದಿಂದ ಗಮನಿಸಬೇಕು. ಅಂದರೆ ಅವನು ಏಕಕಾಲಕ್ಕೆ ನೋಡುವವನೂ, ನೋಡಲ್ಪಡುವವನೂ ಆಗಬೇಕು. ಒಬ್ಬ ರೋಗಿಯನ್ನೇ ಆಗಲಿ ಅಥವಾ ಒಂದು ದೊಡ್ಡ ಸಮುದಾಯವನ್ನೇ ಆಗಲಿ, ನಾವು ನೋಡುವುದು ನಮ್ಮ ಅನುಭವದ ಮೂಲಕ, ಹೇಳುವುದು ನಮ್ಮ ನೆನಪಿನ ಮೂಲಕ ಮತ್ತು ಗ್ರಹಿಸುವುದು ನಮ್ಮ ದೇಹದ ಮೂಲಕ. ಧಾರ್ಮಿಕ ಹಿಂಸೆಯ ಈ ನನ್ನ ನಿರೂಪಣೆಯಲ್ಲಿ ನಾನು, ಗಲಭೆಯ ವ್ಯಕ್ತಿಗಳು ಮತ್ತು ಘಟನೆಗಳನ್ನು ವಿಶ್ಲೇಷಿಸಲು, ವಿಭಿನ್ನವಾದ ಆದರೆ ಪರಸ್ಪರ ಸಂಬಂಧ ಬರುವ ಗ್ರಹಿಕೆಯ ವಿಧಾನಗಳನ್ನು ಅನುಸರಿಸಬಯಸುತ್ತೇನೆ. ನನ್ನ ವ್ಯಕ್ತಿತ್ವದ ಯೋಚಿಸುವ ಮತ್ತು ಭಾವಿಸುವ ಕ್ರಿಯೆಗಳ ಕರ್ಷಣೆಯನ್ನು ಜೀವಂತವಾಗಿ ಇರಿಸಿಕೊಳ್ಳುವುದು ಮತ್ತು ಅನುಭವವನ್ನು ಒಂದು ಕ್ರಮದಲ್ಲಿ ಜೋಡಿಸಿ ವಿಶ್ಲೇಷಿಸುವ ಭರದಲ್ಲಿ, ಅನುಭವಿಸುವ ಜೀವ, ಮರೆಯಾಗದ ಹಾಗೆ ನೋಡಿಕೊಳ್ಳುವುದು-ನನ್ನ ಬರವಣಿಗೆಗೆ ಇದು ಕೂಡ ಸಾಧ್ಯವಾಗಬೇಕು... ■

ಸುಧೀರ್ ಕಕರ್ ಅಂತರ್ರಾಷ್ಟ್ರೀಯ ಖ್ಯಾತಿಯ ಮನಃಶಾಸ್ತ್ರಜ್ಞರು. ಹೈದರಾಬಾದಿನ 1990ರ ಕೋಮು ಗಲಭೆ ಕುರಿತ ಅವರ ಅಧ್ಯಯನ, 'The colours of violene" (ಪೆಂಗ್ವಿನ್‌ಬುಕ್ಸ್, ಡೆಲ್ಲಿ-1996)ನ ಮೊದಲ 5 ಪುಟಗಳ ಅನುವಾದ ಇಲ್ಲಿದೆ. ಮನಃಶಾಸ್ತ್ರದ ಶಿಸ್ತಿನ ಜೊತೆ ಕಾವ್ಯದ ಉತ್ಕಟತೆಯನ್ನು ಮೈಗೂಡಿಸಿಕೊಂಡ ಅವರ ಈ ಪುಟಗಳ ಅರ್ಥವನ್ನು ನನಗೆ ನಾನೇ ಸ್ಪಷ್ಟಪಡಿಸಿಕೊಳ್ಳಲು ಈ ಅನುವಾದವನ್ನು ಮಾಡಿದೆ. ಇಲ್ಲಿ ಒಂದು ಕತೆ ಅಥವಾ ಕತೆಯ ಹೊಳಹು ಇದೆ ಎಂದು ನನಗೆ ಅನ್ನಿಸಿದ್ದು ಅನುವಾದಕ್ಕೆ ಇನ್ನೊಂದು ಕಾರಣ.

ಜಿ.ಆರ್.





## ಶಬ್ದ ತೇಲರ



# "Live"

ಪೇಟೆಯಲ್ಲಿ ನೆರೆದ ಜನರೆದುರು, ಇಬ್ಬರು ಅಪರಾಧಿಗಳನ್ನು ಬಹಿರಂಗವಾಗಿ ಗಲ್ಲಿಗೇರಿಸಿದ್ದ "live" ಆಗಿ ತೋರಿಸುವ ಘನಂದಾರೀ ಕೆಲಸವನ್ನು ನಮ್ಮ ಸುದ್ದಿ ಚಾನಲ್‌ಗಳು ಮೊನ್ನೆ ಮಾಡಿದವು.

ಮುಖಕ್ಕೆ ವಸ್ತ್ರಕಟ್ಟಿ, ಕೈಗಳನ್ನು ಹಿಂದೆ ಬಿಗಿದು, ಚಡಪಡಿಸುತ್ತಿದ್ದ ಕತ್ತಿಗೆ ಕುಣಿಕೆ ಹಾಕಿ, ಅದರ ತುದಿಯ ಕ್ರೇನಿಗೆ ಕಟ್ಟಲಾಯಿತು. ಡೊಂಬರಾಟ ನೋಡುವವರಂತೆ ಜನ ಸೇರುತ್ತಿರುವ ಹಾಗೇ, ಮೆಲ್ಲಗೆ ಕ್ರೇನ ಎತ್ತಲಾಯಿತು. ಕಾಲುಗಳನ್ನು ಬಡಿಯುತ್ತಿರುವ ದೇಹದಿಂದ ಪ್ರಾಣವೊಂದು ಹಾರಿಹೋಗುವ ದಾರು ಕ್ಷಣವನ್ನು ಇಡೀ ವಿಶ್ವ, ತನ್ನ ಬೆಚ್ಚನೆ ಮನೆಯಲ್ಲಿ, ಮಕ್ಕಳು ಮೊಮ್ಮಕ್ಕಳೊಂದಿಗೆ ಊಟಗೀಟ ಮಾಡ ನೋಡಿತು.

ಅಫ್ಘಾನಿಸ್ತಾನ್‌ದ ಈ ನಿರ್ದಯ ಶಿಕ್ಷಾ ಸಂಹಿತೆಯ ಮಾತು ಆಚೆಗಿರಲಿ, ಆದರೆ ಅದನ್ನು ಚಪ್ಪರಿಸುವ ಮತ್ತೆ ಮತ್ತೆ ದಿನಕ್ಕೆ ನೂರುಬಾರಿಗೆಂಬಂತೆ, ನಮ್ಮ ಸುದ್ದಿ ಚಾನಲ್‌ಗಳು ಹೆಮ್ಮೆಯಿಂದ ಚಿತ್ರಿಸಿದ ರೀತಿ, ನ ನೈತಿಕತೆ ತಲುಪಿರುವ ಘ್ರಣಾಂಕವನ್ನು ಸೂಚಿಸುತ್ತಿದೆ.

"ಅಪ್ಪಾ, ಅವನ ಕಣ್ಣುಗಳನ್ನೇಕೆ ಮುಚ್ಚಿದ್ದಾರೆ?"

"ಅಪ್ಪಾ, ಅವನು ಕಾಲು ಏಕೆ ಹೊಡೆದುಕೊಳ್ಳುತ್ತಿದ್ದಾನೆ?"

ಎಂಬ ಪ್ರಶ್ನೆಗಳನ್ನು ಮೇಲ್ನೋಟಕ್ಕೆ ಸಹಜವಾಗೇ ಕೇಳುತ್ತಿರುವ ಮಕ್ಕಳ ಮನಸ್ಸಿನಲ್ಲಿ, ಕೆಲ ಸೆಕೆಂಡ್‌ಗಳ ಈ ದೃಶ್ಯ-ನೀವೆಷ್ಟು ಬೇಗ ಚಾನಲ್‌ನ್ನು ಬದಲಿಸಿದ್ದರೂ-ಶಾಶ್ವತವಾಗಿ ಕತ್ತಲ ತುಣುಕೊಂದ ತುರುಕಿಬಿಟ್ಟಿದೆ.

'ತಾರತಮ್ಯವಿಲ್ಲದ ಮಾಹಿತಿ'ಯ ಹೆಸರಿನಲ್ಲಿ ಒಂದು ಸಾವಿನ ಘನತೆಯನ್ನು, ಖಾಸಗೀತನವ ದೋಚಿ, ಹೀಗೆ ಹರಾಜಗಿಡುವ ನಮ್ಮ ಮಾಧ್ಯಮಗಳ ಈ ಹೇಯ, ನಿರ್ಲಜ್ಜ ನಿಲುವು ಅತ್ಯ ಖಂಡನಾರ್ಹವಾಗಿದೆ.

ಪತ್ರಿಕೆಗಳಲ್ಲಿ ಮೃತದೇಹದ ಚಿತ್ರಗಳನ್ನು ಪ್ರಕಟಿಸುವುದೇ 'ತೀರಿಕೊಂಡ ವ್ಯಕ್ತಿಯ ಖಾಸಗೀತನ ಉಲ್ಲಂಘನೆ' ಎಂದು ಪರಿಗಣಿತವಾದ ಕಾಲವಿತ್ತು. ಆಗ ಅಂಥ ದೇಹಗಳ ಕಣ್ಣಿಗೋ, ಮುಖಕ್ಕೋ ಕರಿ ತೇ ಹಚ್ಚಲಾಗುತ್ತಿತ್ತು. ಆದರೆ, ಕ್ರಮೇಣ 'ರಕ್ತದ ರುಚಿ' ಹತ್ತಿದ ಸುದ್ದಿ ಮಾಧ್ಯಮಕ್ಕೆ, 'ಅನಾಮಿಕ' ಶವಗ ಮೃಷ್ಟಾನ್ನ ಒದಗಿಸತೊಡಗಿದವು. ಯುದ್ಧಭೂಮಿ, ಪೊಲೀಸ್ ಕಡ್ಡ, ಅಸ್ವಾಭಾವಿಕ ಮರಣ ಪೋಸ್ಟ್‌ಮಾರ್ಟಂ ಚಿತ್ರಗಳು... ಹೀಗೆ ಮನುಜ ದೇಹ ಅಗ್ಗವಾಗತೊಡಗಿತು. ಹಿಂದಿಲ್ಲದೆ, ಮುಂದಿಲ್ಲ ಸತ್ತವರ ಕುರಿತು ಯಾರಿಗೆ ತಲ್ಲಣವಿದೆ ಹೇಳಿ? ಅದೊಂದು ಮೂರನೆಯವರ ಶವ ಅಷ್ಟೆ. ಅದರ ರುಂ ನೋಡಿ ಹೇಗಿದೆ, ರಕ್ತ ನೋಡಿ ಹೇಗೆ ಹೆಪ್ಪುಗಟ್ಟಿದೆ, ಅರೆ, ಕಣ್ಣು... ಅದು ಎಲ್ಲಿದೆ?

ಎಂಬತ್ತರ ದಶಕದಲ್ಲಿ, ಲಾಸೆಂಜಲೀಸ್ ಪಟ್ಟಣದಲ್ಲಿ, ಬೆಂಕಿಹತ್ತಿ ಉರಿಯುತ್ತಿದ್ದ ಇಪ್ಪತ್ತನೇ ಮಜಲಿನಿಂ ಎರಡು ಮಕ್ಕಳು ಹೊರ ಜಿಗಿದರು. ಹೌಹಾರಿ ನೇರ ಸಾವಿಗೆ ಬೀಳುತ್ತಿರುವ ಅವರನ್ನು ತ್ರಿಶಂಕು ಸ್ಥಿತಿಯ

'ಸೆರೆಹಿಡಿದು' ಚಿತ್ರ ಪ್ರಕಟಿಸಿದ ಪತ್ರಿಕೆಯೊಂದರ ಬಗ್ಗೆ ಭಾರೀ ಚರ್ಚೆ, ವಿವಾದ ನಡೆಯಿತು. ಸಾವು ಬದುಕಿನ ನಡುವಿನ ಅತಿ ಸೂಕ್ಷ್ಮ ವಲಯದಲ್ಲಿ ಪ್ರವೇಶಿಸುವ ಹಕ್ಕು ಅನ್ಯರಿಗಿದೆಯೆ?

'ಅದೊಂದು ಅಪಘಾತದ ವಾರ್ತಾಚಿತ್ರ' ಎಂದು ಅದರ ಸಮರ್ಥಕರು ಕೋರ್ಟಿನಲ್ಲಿ ಚೀರಾಡಿದರು. ಹೀಗೆ ಎಲ್ಲವನ್ನೂ ಗಳಿಕೆಯ ಸರಕನ್ನಾಗಿ ಮಾಡಿಕೊಳ್ಳುತ್ತಿರುವ ಮಾಧ್ಯಮಗಳು ಈಗ ಎಂಥ ಅಧೋಗತಿಯನ್ನು ಮುಟ್ಟಿವೆ ಎಂದರೆ-ನಮ್ಮದೇ ಮನುಜ ಕುಟುಂಬದ ಸದಸ್ಯನೊಬ್ಬನು ಗಲ್ಲಿಗೆ ತೂಗಿ ಸಾಯುತ್ತಿರುವುದನ್ನು "live" ಆಗಿ ತೋರಿಸುವುದಕ್ಕೆ ಮುಂದಾಗಿವೆ.

ವಾರ್ತೆಯ ಖಚಿತತೆಗೆ, 'ಶಿಕ್ಷೆಯ ಬರ್ಬರತೆ'ಯನ್ನು ತೋರಿಸುವುದಕ್ಕೆ-ಎಂದೆಲ್ಲ ಅದನ್ನು ಸಮರ್ಥಿಸುವ ವಕ್ತಾರರು, ಕೈಲಾದರೆ, ಬಲಾತ್ಕಾರಗಳನ್ನು, ಗರ್ಭಪಾತಗಳನ್ನು, ಅಷ್ಟೇ ಯಾಕೆ 'ಹುಟ್ಟಿನ ಪುರಾವೆ' ಅಂತ ಪ್ರಸವವನ್ನು ಸಹ ತೋರಿಸಲೂ ತಯಾರೇ!

ಇದನ್ನು ಬರೆಯುತ್ತಿರುವಾಗಲೇ, ಇಸ್ರೇಲಿ ದಾಳಿಗೆ ತುತ್ತಾದ ಬೀದಿಯಲ್ಲಿ ತನ್ನ ಹನ್ನೆರಡು ವರುಷದ ಮಗನನ್ನು ಗುಂಡಿನ ಸುರಿಮಳೆಯಿಂದ ಉಳಿಸಿಕೊಳ್ಳಲು, "ಶೂಟ್ ಮಾಡ್‌ಬೇಡೀ" ಎಂದು ಎರಡೂ ಕೈಬೀಸಿ ಕೂಗುತ್ತ, ಮಗನನ್ನು ತನ್ನ ತೆಕ್ಕೆಯಲ್ಲಿ ಬಚ್ಚಿಟ್ಟುಕೊಳ್ಳಲು ಹೆಣಗಿದ ತಂದೆಯ 'ನತದೃಷ್ಟ ಮಾನವ ಕ್ಷಣಗಳನ್ನು'- "live" ಆಗಿ ಸೆರೆಹಿಡಿದ ಫ್ರೆಂಚ್ ಪತ್ರಕರ್ತನ ಸುದ್ದಿಚಿತ್ರ ಜಗಜ್ಜಾಹೀರಾಗಿದೆ. ನಾಲ್ಕು ಗುಂಡುಗಳು ತಾಗಿ, ಆ ಕಂದ, ತಂದೆಯ ಕೈಯಲ್ಲೆ ಅಸುನೀಗಿ ಬೀಳುವುದನ್ನು ಆ ಕ್ಯಾಮೆರಾ ಎವೆಯಿಕ್ಕದೆ ನೋಡಿದೆ.

'ನಿರಾಯುಧ ಬಾಲಕನ ಹತ್ಯೆ'ಯ ಈ ಚಿತ್ರವನ್ನು ಪ್ಯಾಲೆಸ್ಟೀನಿಯರು ಈಗ ಇಸ್ರೇಲದ ವಿರುದ್ಧದ ಮೇರು ಕರಪತ್ರವಾಗಿ ಹಾರಿಸುತ್ತಿದ್ದಾರೆ!

ಅಪರಿಚಿತ ಅನ್ಯ ದೇಶದ ವ್ಯಕ್ತಿಗಳು, ಖೈದಿಗಳು, ಮನೆಯವರಿಂದಲೇ ತ್ಯಜಿಸಲ್ಪಟ್ಟ ಅಧೋಲೋಕದ ಪಾಪಿಗಳು... ಹೀಗೆ ನಮಗೆ 'ಸಕ್ರಮವಾಗಿ ಸಂಬಂಧಪಡದ' ವ್ಯಕ್ತಿಗಳೇ ಇಂಥ abuseಗೆ ತುತ್ತಾಗುವುದರ ಹಿಂದೆ ಎಂಥ ಅಮಾನವೀಯ ತರ್ಕವಿದೆ.



ಅಲ್ಲಿ ಚಿತ್ರದಲ್ಲಿ, ಸಾಯುತ್ತಿರುವ, ರೋಧಿಸುತ್ತಿರುವ ಮನುಷ್ಯ ನನ್ನವನಲ್ಲ ಎಂದ ಮಾತ್ರಕ್ಕೇ ನಾವು ಅದನ್ನು ಹೀಗೆ ನೋಡುವ, ಸೆರೆಹಿಡಿಯುವ ಅರ್ಹತೆಯನ್ನು ಪಡೆಯುತ್ತೇವೆಯೆ?

ಆ ಮಗು ನನ್ನದಲ್ಲ ಎಂಬ ಒಂದೇ ಕಾರಣಕ್ಕೆ, ನನ್ನ ಕೈ ಕಿಂಚಿತ್ತೂ ಕಂಪಿಸದೆ ಆ ಕಂದನ ಕೊನೆಯ ಗಳಿಗೆಯನ್ನು ಚಿತ್ರಿಸುತ್ತದೆಯೇ? ಕ್ಯಾಮೆರಾ ಬದಿಗೆಸೆದು, ಜೀವದ ಹಂಗು ತೊರೆದು, ನೆರವಿಗೆ ಧಾವಿಸದಂತೆ ತಡೆದದ್ದು ಪ್ರಾಣಭಯ ಅಂದುಕೊಳ್ಳೋಣ... ಹಾಗಾದರೆ 'ಇದೇ ಸಂಧಿ' ಎಂದು ಅದನ್ನು 'capture' ಮಾಡಲು ಸದ್ದಿಲ್ಲದೆ ತೊಡಗಿಕೊಂಡೆನಲ್ಲ...ಅದನ್ನು 'ತಕ್ಕ ಬೆಲೆ'ಗೆ ಮಾರತೊಡಗಿದೆನಲ್ಲ... ಅದೇನು? ಅದೇನದು?

ಜೀವವೊಂದು ಎದುರು ಕಣ್ಮುಚ್ಚುವಾಗ ಜಗ ಅರೆಕ್ಷಣವಾದರೂ ಕಣ್ಮುಚ್ಚಿ ನಿಲ್ಲಬಾರದೇ?

**ಜಯಂತ ಕಾಯ್ಕಿಣಿ**



# ಕೆಂಪು ಹೂವು

ಕೆಂಪು ಹೂವು ಮತ್ತು ಸೂರ್ಯ ತುಂಬಾ ಸ್ನೇಹಿತರು. ಪ್ರತಿದಿನವೂ ಒಬ್ಬರಿಗೊಬ್ಬರು ತುಂಬಾ ಮಾತನಾಡಿಕೊಳ್ಳುವರು. ಒಂದು ದಿನ ಬೆಳಗಾದೊಡನೆ, ಸೂರ್ಯ ಕೆಂಪು ಹೂವಿಗೆ ಕೇಳಿದ, ''ಹೂವೇ ನನ್ನ ತಂಗಿ ಇರುಳು ನಿನಗೆ ಸುಂದರ ಕನಸುಗಳ ತೋರಿದಳೇ?'' ಕೆಂಪು ಹೂವು ಹೇಳಿತು. ''ಸೂರ್ಯಾ, ನಿನ್ನ ತಂಗಿ ಒಳ್ಳೊಳ್ಳೇ ಕನಸುಗಳನ್ನು ತೋರಿದಳು.'' - ಹೀಗೆ ಸೂರ್ಯ ಮತ್ತು ಕೆಂಪು ಹೂವು ಮಾತಾಡುತ್ತಿದ್ದರು. ಮಾತಾಡುತ್ತಲೇ ಕತ್ತಲಾಯಿತು. ಕತ್ತಲಲ್ಲಿ ಹುಳವೊಂದು ಕೆಂಪು ಹೂವಿನ ಗಂಟಲಲ್ಲಿ ಇಳಿದು, ಕೊರೆಯತೊಡಗಿತು.

ಪ್ರತಿದಿನದಂತೆ ಸೂರ್ಯ ಉದಿಸಿದ. ತಾನು ಉದಿಸಿದಾಗ ನಕ್ಕು ನಲಿಯುತ್ತಿದ್ದ ಕೆಂಪು ಹೂವು ಇಂದು ನಗುತ್ತಿಲ್ಲ. ಬದಲಾಗಿ ನರಳುತ್ತಿದೆ. ಮಾತಾಡುತ್ತಿಲ್ಲ. ಇದರಿಂದ ಸೂರ್ಯನಿಗೆ ತುಂಬಾ ಬೇಸರವಾಯಿತು. ಹೂವು ಮಾತಾಡದಿರುವುದಕ್ಕೆ ಕಾರಣ ಕೇಳಿದಾಗ, ತನ್ನ ಗಂಟಲಲ್ಲಿ ಹುಳ ಹೊಕ್ಕು ಕೊರೆಯುತ್ತಿದೆ ಎಂದಿತು. ಬೇಸರಗೊಂಡ ಸೂರ್ಯ, ಮೋಡಗಳ ಡೇರೆಯಲ್ಲಿ ಮರೆಯಾದ. ಸೂರ್ಯನಿಗೆ ಬೇಸರವಾದಾಗ ಅವನ ಸುತ್ತಲೂ ಆಡುವುದು ಮೋಡಗಳಿಗೆ ಅಭ್ಯಾಸ.

ಬೆಳಗಾದರೂ ಸೂರ್ಯ ಪಳಪಳ ಹೊಳೆಯುವುದನ್ನು ಕಾಣದ ಗಾಳಿಗೆ ಬೇಸರವಾಯಿತು. ''ಸೂರ್ಯಣ್ಣಾ, ನೀನ್ಯಾಕೆ ಇವತ್ತು ಪಳಪಳ ಹೊಳೀತಾ ಇಲ್ಲ?'', ಗಾಳಿ ಕೇಳಿತು. ''ಕೆಂಪು ಹೂವಿಗೆ ಹುಷಾರಿಲ್ಲ. ಗಂಟಲಲ್ಲಿ ಹುಳು ಹೊಕ್ಕು ಕೊರೀತಿದೆಯಂತೆ. ಅದಕ್ಕಾದ ನೋವಿನಿಂದ ನನಗೂ ಪಳಪಳ ಹೊಳೆಯಲು ಬೇಸರವಾಗುತ್ತಿದೆ'', ಸೂರ್ಯ ಹೇಳಿದ.

''ಸೂರ್ಯ ಪಳಪಳ ಹೊಳಿಯಲ್ಲ ಅಂದ್ಮೇಲೆ ನಾವು ಪರಪರ ಬೀಸಲ್ಲ'' ಎಂದು ಗಾಳಿ ಮರದ ಮೇಲೆ ಕೂರುವುದು. ಗಾಳಿ ಬೀಸದೇ ಕೂತಿದ್ದರಿಂದ ಕೋಳಿಗೆ ಕೂಗಲಿಕ್ಕೇ ಆಗುತ್ತಿಲ್ಲ. ಉಸಿರು ಕಟ್ಟತೊಡಗಿತು. ''ಗಾಳಿಯೇ ನೀನೇಕೆ ಬೀಸುತ್ತಿಲ್ಲ?'' ಎಂದು ಕೇಳಿತು. ಆಗ ಗಾಳಿ, ಸೂರ್ಯ ಹೇಳಿದ ಕತೆ ಹೇಳಿ, ತಾನು ಬೀಸದೇ ಇರುವ ಕಾರಣ ತಿಳಿಸಿತು. ''ಹಾಗಾದರೆ ನಾನು ಇವತ್ತು ಕೂಗೋದೇ ಇಲ್ಲ'' ಅಂದ ಕೋಳಿ, ಕೊಳದ ಬಳಿ ಕೂತಿತು.

ಆ ಕೊಳದ ಬಳಿ ಬೆಕ್ಕೊಂದು ಬಂತು. ''ಕೋಳಿರಾಯ, ನಿನ್ನ ಕಾಣದೆ ತುಂಬಾ



ದಿನಗಳಾದವು. ಬಾ. ಚೆನ್ನಿದಾಂಡು ಆಡೋಣ'' ಎಂದು ಕರೆಯಿತು. ''ಇಲ್ಲ ಬೆಕ್ಕೇ, ಮುದ್ದಿನ ಸೊಕ್ಕೇ! ನನಗಿವತ್ತು ಆರಾಮಿಲ್ಲ. ಉಸಿರು ಕಟ್ತಾ ಇದೆ. ಗಂಟಲು ಸರಿ ಇಲ್ಲ. ಕೊಳದ ಬಳಿ ಹಾಯಾಗಿರ್‍ತೇನೆ. ನನ್ನ ಮಾತಾಡಿಸಬೇಡ. ಸುಮ್ಮಿರು'', ಕೋಳಿ ಹೇಳಿತು. ''ನೀನೇಕೆ ಒಂದು ಬಾರಿ ಗಟ್ಟಿಯಾಗಿ ಕೂಗಬಾರದು? ಆಗ ನಿನ್ನ ಗಂಟಲು ಸರಿ ಆಗುತ್ತೆ'', ಬೆಕ್ಕು ಸಲಹೆ ನೀಡಿತು. ಪುನಃ ಕೋಳಿ, ತನಗೆ ಗಾಳಿ ಹೇಳಿದ ಕತೆಯನ್ನು ಹೇಳಿ, ಕಾರಣ ವಿವರಿಸಿತು. ''ಇವತ್ತು ಬೆಳಗಿಂದ ಯಾವುದೂ ಸರಿಹೋಗ್ತಾನೇ ಇಲ್ಲ. ಎಲ್ಲಾ ಸರೀ ಆಗೋವರೆಗೂ ನಾನು ನಿನ್ನ ಜೊತೆ ಇಲ್ಲೇ ಕೂರ್‍ತೇನೆ'' ಎಂದು ಹೇಳಿ, ಕೋಳಿಯ ಪಕ್ಕ ಅಂಡೂರಿತು.

ಅಷ್ಟರಲ್ಲಿ ಯಾರೋ ಇವರನ್ನೇ ನೋಡಿ ಜೋರಾಗಿ ನಕ್ಕರು. ಬೆಕ್ಕು, ಕೋಳಿ ಎರಡಕ್ಕೂ ಆಶ್ಚರ್ಯ, ಕೋಪ. ''ನಾವಿಲ್ಲಿ ಮಂಕಾಗಿರುವಾಗ, ಮಬ್ಬಾಗಿರುವಾಗ ಯಾರಿಲ್ಲಿ ನಮ್ಮನ್ನೋಡಿ ನಗೋರ್?'' ಎಂದು ಗದರಿದವು. ''ನಾನು ಕಪ್ಪೆರಾಯ'' ಎನ್ನುತ್ತ ಕಪ್ಪೆ ಕೊಳದಿಂದ ಹೊರಬಂದಿತು. ''ಸೂರ್ಯನ ಗೆಳತಿ ಕೆಂಪು ಹೂವಿಗೆ ಹುಷಾರಿಲ್ಲ. ಅದಕ್ಕೇ ಸೂರ್ಯ ಹೊಳೀಲಿಲ್ಲ. ಈ ಕಾರಣಕ್ಕೆ ಗಾಳೀನೂ ಬೀಸಲಿಲ್ಲ. ನಿನಗೆ ಗಂಟಲು ಕಟ್ಟಿ ಕೂಗಲೂ ಇಲ್ಲ ಅಲ್ವಾ?'', ಕಪ್ಪೆ ಕೇಳುತ್ತಿದ್ದಂತೆ, ''ಹೌದಪ್ಪಾ, ಅದಕ್ಕೆ ನಿಂದೇನು ಭಾಷಣ?'' ಎಂದು ಕೋಳಿ, ಕಪ್ಪೆ ಇಬ್ಬರೂ ಸೇರಿ ಹೀಯಾಳಿಸಿದವು. ಆಗ ಕಪ್ಪೆ, ''ಇದೆಲ್ಲಾ ಸರೀ ಆಗಬೇಕು ಅಂದ್ರೆ, ಹೀಗೆ ಕೂತುಕೊಂಡ್ರೆ ಆಗಲ್ಲ. ಹೂವಿನ ಗಂಟಲಲ್ಲಿ ಹೊಕ್ಕು ಕೊರೀತಾ ಇರೋ ಹುಳಾನ ನಮ್ಮ ಕೋಳಿರಾಯ ಕೊಕ್ಕು ಹಾಕಿ ತೆಗೀಬಹುದಲ್ಲ?'' ಎಂದು ಸಲಹೆ ನೀಡಿತು. ''ಒಳ್ಳೇ ಉಪಾಯ! ಇಷ್ಟು ಹೊತ್ತೂ ನಮಗ್ಯಾಕೆ ಹೊಳೀಲಿಲ್ಲ?'' ಅಂದುಕೊಳ್ಳುತ್ತಾ, ಹೂವಿನ ಬಳಿ ಹೋಗಿ, ಅದರ ಗಂಟಲಲ್ಲಿ ಹೊಕ್ಕ ಹುಳೂನ, ಕೋಳಿ ತನ್ನ ಕೊಕ್ಕಿನಿಂದ ಹೊರತೆಗೆಯಿತು. ಈ ಚಿಕಿತ್ಸೆಯಿಂದ ಹೂವಿಗೆ ಆರಾಮವಾಯಿತು. ಮೊದಲಿನಂತೆ ನಕ್ಕಿತು. ನಗುವ ಹೂವು ಕಂಡು ಸೂರ್ಯ ಉಲ್ಲಾಸಗೊಂಡ. ಫಳಫಳ ಹೊಳೆಯತೊಡಗಿದ. ಸೂರ್ಯ ಹೊಳೆದದ್ದೇ ಮೋಡಗಳೆಲ್ಲಾ ಚದುರಿತು. ಗಾಳಿ ಪರಪರ ಬೀಸಿತು. ಕೋಳಿ ಕೂಗಿತು. ಎಲ್ಲಾ ಸರಿಯಾಯಿತು. ಆಗ ಎಲ್ಲರೂ ಸೇರಿ ಹಾಡುವರು:

ಎಲ್ಲೋ ಏನೋ ತಪ್ಪಾದಾಗ
ಕೂತು ಕೂಗೋದು
ಬಹಳಾ ಸುಲಭ, ಬಹಳ ಸುಲಭ.
ಏಕೆ ತಪ್ಪು, ಏನು ತಪ್ಪು, ಎಲ್ಲಿ ತಪ್ಪು
ಹುಡುಕಿ ಕೆಲಸ ಮಾಡಿದರೆ
ಎಲ್ಲಾ ಸರಿಯಾಗುವುದು, ಎಲ್ಲಾ ಸರಿಯಾಗುವುದು



☐ ಬಂದಗದ್ದೆ ರಾಧಾಕೃಷ್ಣ

(ಸಫ್ದರ್ ಹಷ್ಮಿ ಅವರ 'ರೆಡ್ ಫ್ಲವರ್' ಮಕ್ಕಳ ನಾಟಕದ ಕತೆ.)



# ಈ ಸಾರಿ

ತಿರುವಾಳದ ಕನ್ನಪ್ಪ ಬಡವ ಅಂದ್ರೆ ಬಡವ. ಅವನಿಗಿರೋದೆ ಅರ್ಧ ಎಕರೆ ಹೊಲ ಮಾತ್ರ. ಇದರಿಂದ ಬಂದ ಉತ್ಪನ್ನ ಸಂಸಾರಕ್ಕ ಸಾಕಾಗುತ್ತಿರಲಿಲ್ಲ. ಬೇರೆಯವರ ಹೊಲದಲ್ಲಿ ಕೆಲಸ ಮಾಡಿ ಸಂಸಾರ ನಡೆಸಲು ಬಹಳ ಶ್ರಮಿಸುತ್ತಿದ್ದ. ಹೆಂಡತಿಯೂ ಕೂಡ ಅವನ ಜೊತೆಗೂಡುತ್ತಿದ್ದಳು.

ಕನ್ನಪ್ಪ, ಪಕ್ಕದ ಹಳ್ಳಿ ಭೀಮನೇರಿಯ ಹೆಣ್ಣನ್ನು ಮದುವೆಯಾಗಿದ್ದ. ಚೊಚ್ಚಲು ಹೆರಿಗೆ. ತೌರು ಮನೆಗೆ ಹೋಗಿದ್ದಾಳೆ ಹೆಂಡತಿ.

ಎರಡು ದಿನ ಕಳೆದ ಮೇಲೆ ಹೆಣ್ಣು ಮಗು ಹುಟ್ಟಿತೆಂದು ವಿಷಯ ತಿಳೀತು. ಬೇಜಾರು ಮಾಡಿಕೊಂಡು ಮನೀಗೆ ಹೋಗದೇ ಹೊಲ್ದಾಗೆ ಕೆಲಸ ಮಾಡ್ತಿದ್ದ. ಮತ್ತೊಮ್ಮೆ ಹೇಳಿ ಕಳಿಸಿದ್ರೂ ಹೆಂಡ್ತಿ ಊರಿಗೆ ಹೋಗಿರಲಿಲ್ಲ. ಅವನವ್ವನೇ ಬಂದು, ''ಏ ಕನ್ನ, ಒಗಿ ಬಾರ್ಲಾ, ಬಾಣಂತೀನ, ಕೂಸ್ನ ನೋಡ್ಕಂಡು ಬಾ'' ಎಂದು ಗದರಿಸಿದಳು.

ಅವ್ವ ಹೇಳಿದ ಮ್ಯಾಕೆ ಕನ್ನಪ್ಪ ಊರಿಗೆ ಹೋಗಿದ್ದ. ಗೌರ ಸಪ್ಪಗಿದ್ದಳು. ಗಂಡನನ್ನು ಕಂಡು, ನಿಧಾನ ದನಿಯಲ್ಲಿ,

''ದ್ಯಾವರು ಈಂಗ ಮಾಡಿಬಿಟ್ಟ. ನಮ್ಮ ಆಸೆ ಈಡೇರ್ಲಿಲ್ಲ. ಮುಂದಿನ ಸಾರಿ ಗಂಡೇ ಅಡೀತೀನಿ'' ಎಂದಳು ದೈನ್ಯತೆಯಿಂದ. ಅವನ ಮನಸ್ಸು ಗಂಡು ಮಗುವಾಗಲಿಲ್ಲ ಎಂದು ಹೆಂಡ್ತಿ ಹತ್ತಿರ ಸರಿಯಾಗಿ ಮಾತನಾಡಲಿಲ್ಲ. ಆ ದಿವ್ಸ ಇದ್ದು, ಮಾರನೇ ದಿನ ತನ್ನೂರಿಗೆ ವಾಪಾಸಾದ. ಅವನ ತಾಯಿ ಮಗನನ್ನು ಕಂಡು-

''ಏನ್ಲಾ ಕನ್ನ, ಸೊಸೆ ಎಂಗವಳೆ, ಕೂಸು ಘನಾಗೈತೇನ್ಲಾ'' ಎಂದು ಕೇಳಿದಳು.

''ವೂ, ಹೆಣ್ಣು ಕೂಸು ಕಣವ್ವಾ'' ಎಂದು ಕೂಗಿದ.

ಮುದುಕಿ ಚಡಪಡಿಸುತ್ತಾ ''ಕೂಸು ಯಾರಂಗೈತ್ಲಾ'' ಎಂದಾಗ ಸುಮ್ಮನಿದ್ದ. ಮತ್ತೆ ಅವನವ್ವ ''ಯಾರಂಗೈತ್ಲಾ'' ಎಂದು ಜೋರಾಗಿ ಕೇಳಿದಳು.

''ವಸಿ ನಿನ್ನಂಗೈತೆ'' ಎಂದು ಸಿಡಿಮಿಡಿಕೊಂಡಿದ್ದ.

ಹಿಂಗೆ ದಿನಾ ಹೊಲಕ್ಕ ಹೋಗ್ತಿದ್ದ ಕನ್ನಪ್ಪ. ಕೆಲಸ ಜೋರಾಗಿದೆ. ಅವನಿಗೆ ಸಾಲಾಗಿ ನಾಲ್ಕು ಹೆಣ್ಣೇ ಆಗಿವೆ. ಗೌರ ಮತ್ತೀಗ ಬಸುರಿ, ದಿನ ತುಂಬಿವೆ. ಮಗಳ ಆರೈಕೆಗೆ, ಬಾಣಂತಿತನಕ್ಕೆ ಅಂತಾ ಅವನ ಅತ್ತೆ ಇಲ್ಲಿಗೆ ಬಂದಿದ್ದಾಳೆ.

ಕನ್ನಪ್ಪ ಅಂದು ಬೆಳಗ್ಗೆ, ಹೊತ್ತೆ ಹೊಲಕ್ಕೆ ಹೋಗಿದ್ದ. ಗೌರಿಗೆ ಹೆರಿಗೆ ನೋವು ಕಾಣಸಿಕೊಂಡಿತ್ತು. ಮನೆಯಲ್ಲಿ ಸೂಲುಗಿತ್ತೇರಲ್ಲ ಸೇರಿದ್ದರು. ಮಧ್ಯಾಹ್ನ ಊಟಕ್ಕೆ ಬರದೇ, ಕನ್ನಪ್ಪ, ರೆಟ್ಟೆ ಮುರಿದು ಹೊಲದಲ್ಲಿ ಕೆಲಸ ಮಾಡುತ್ತಿದ್ದ. ಮಗಳು ಊಟಕ್ಕೆ ಕರೆದ್ರೆ,

"ಬರಲ್ಲಾ ವೋಗು" ಎಂದು ಸಿಟ್ಟು ಮಾಡಿದ್ದ. ಮಗಳು ಪೆಚ್ಚುಮೋರೆ ಹಾಕ್ಕೊಂಡು ಮನೆಗೋಗಿದ್ದಳು. ಆಗಲೆ ಅವರವ್ವಂಗೆ ಹೆರಿಗೆ ನೋವು ಹೆಚ್ಚಾಗಿತ್ತು.

ನರಳಾಟ ಜೋರಾಗಿತ್ತು. ಸುಮಾರು ದೂರ ಕೇಳ್ತಿತ್ತು.

ಅವರವ್ವನ ನರಳಾಟ ಕಂಡು ಹೊರಗಡೆ ಇದ್ದ ಹುಡುಗಿಯರು ಗಾಬರಿಯಾಗಿದ್ದರು.

"ಏ ಅಕ್ಕಾ, ಅವ್ವನ ನರಳಾಟ ನೋಡಿದ್ರೆ ಗಂಡು ಮಗಾನೆ ಆಗೋದು ಕಣೇ" ಎಂದೊಬ್ಬಳು ಹೇಳಿದಾಗ, "ಹೌದು ಕಣೇ, ಈ ಸಾರಿ ಅವ್ವನ ನರಳಾಟ ಜೋರಾಗೈತೆ, ಗಂಡು ಮಗಾನೆ ಆಗೋದು" ಎಂದು ಇನ್ನೊಬ್ಬಳು ಧ್ವನಿಗೂಡಿಸಿದಳು.

ಈ ಹುಡುಗಿಯರು, "ಏನೇ ಆದ್ರೂ, ನಮ್ಮವ್ವನಿಗೆ ಈ ಸಾರಿಯಾದ್ರೂ, ಗಂಡು ಮಗುವಾಗಲೀ" ಎಂದು ಮನದಲ್ಲಿಯೇ ದೇವರನ್ನು ಧ್ಯಾನಿಸುತ್ತಾ, ತಮ್ಮ ತಮ್ಮಲ್ಲಿಯೇ ಮಾತಾಡಿಕೊಳ್ಳುತ್ತಿದ್ದರು.

ಅಷ್ಟರಲ್ಲಿಯೇ ಅಜ್ಜಿ ಹೊರಗೆ ಬಂದ್ಳು. ಆ ಹುಡುಗಿಯರು ಗಾಬರಿಯಿಂದ ಅಜ್ಜೀತವ ಓಡಿ ಬಂದರು. "ಏ! ಏ! ಯಾಕಂಗ ಓಡಿಬರ್ತೀರಿ! ವಸಿ ನಿಲ್ರಿ. ನಿಮ್ಮವ್ವಂಗೆ ಗಂಡು ಮಗು ಉಟ್ಟೈತೆ ಕಣ್ರೇ, ನಿಮ್ಮಪ್ಪಂಗೆ ವೋಗಿ ಏಳ್ರೀ" ಎಂದಳು. ಅಷ್ಟು ಹೇಳಿದ್ದೇ ತಡ, ಆ ಮಕ್ಕಳು ಖುಷಿಯಾಗಿ ಒಂದೇ ಉಸುರಿಗೆ ಹೊಲಕ್ಕೆ ಓಡಿದರು. ಪಾಪ! ಏದುಸಿರುಬಿಡುತ್ತಾ ಅವರ ಅಪ್ಪನ ಮುಂದೆ ನಿಂತ್ಯಾರೆ.

"ಅಪ್ಪಾ..."

"ಏ ಅಪ್ಪಾ..."

"ಅಪ್ಪಾ..."

"ಏ ಅಪ್ಪಾ..." ಎಂದು ಕೂಗೇ ಕೂಗಿದರು. ಏನು ಅಂದ್ರೂ, ಕನ್ನಪ್ಪ ಇವರ ಕಡೆ ಮುಖ ತಿರುಗಿಸದೇ ಬದ ಕಡೀತಾನೆ ಇದ್ದ. ಅದಕ್ಕೆ ಆ ಹುಡುಗಿಯರು ಪುನಹ-

"ಅಪ್ಪಾ..." ಎಂದು ಒಟ್ಟಿಗೆ ಜೋರಾಗಿ ಕೂಗಿದರು. ಅದಕ್ಕೆ ಅವನು ಕಣ್ಣು ಕೆಂಪಗೆ ಮಾಡಿ "ಆ! ಏನ್ರೇ? ಮುಂಡೇರಾ" ಎಂದು ಗದರಿಸಿದ.

ಆ ಮಕ್ಕಳು "ತಮ್ಮಾ ಉಟ್ಯಾನೆ" ಎಂದು ಹೆದರಿಕೆಯಿಂದ ನಿಧಾನವಾಗಿ ಹೇಳಿದರು. ಕಣ್ಣಗಲಿಸಿ, "ಅ! ಅಂಗ!, ನಿಜವೇನ್ರೇ" ಎಂದ.

"ವೂ ಕಣಪ್ಪಾ" ಎಂದಾಕ್ಷಣ ಅವ ಹೊಲದ ಕೆಲಸ ಮಾಡೋದನ್ನೇ ನಿಲ್ಲಿಸಿಬಿಟ್ಟ. ಅವನ ತಲೆಗೆ ಮಿಂಚು ಹೊಡದಂಗಾಗಿ -

"ಇನ್ನು ನಂಗೇನು ಕೆಲ್ಸ. ಈ ಒಲ್ದಾಗೆ, ಬೇಕಾದ್ರೆ ಅವ ಮಾಡ್ಕಂತಾನೆ" ಎಂದು ಗುದ್ದಲಿ, ಪಿಕಾಸಿ ಎಲ್ಲಾ ಬಿಸಾಕಿ, ಮಕ್ಕಳ ಜೊತೆ ಓಡಿದ, ಮನಗೆ.

□ ಪ್ರಕಾಶ್ ಆರ್. ಕಮ್ಮಾರ್

(ಕೇಳಿದ್ದು)





## ಹಲವು ಅರ್ಜುನರ ದ್ರೋಣಾಚಾರ್ಯ

# ಕೆ.ಬಿ. ಕುಲಕರ್ಣಿ

ಏಕಾಕಿತನವೋ, ಪರವಶತೆಯೋ ತಿಳಿಯದಂತೆ, ಹಚ್ಚನೆ ಬಯಲಲ್ಲಿ ಮೈಮನಗಳ ಪರಿವೆಯಿಲ್ಲದಂತೆ ಮಕಾಡೆ ಮಲಗಿರುವ ಅಪ್ರತಿಮ ಸೌಷ್ಠವದ, ಮುಖ ಹೀನ ಸ್ತ್ರೀಯರು... ತೆಳುವಾದ ಬಣ್ಣದ ಲೇಪದಲ್ಲಿ ಕಸೂತಿಯಂತೆ ಮೂಡಿಬರುವ ತೈಲವರ್ಣದ ಸುಂದರಿಯರು...

ಒಂದಿನಿತೂ ಬೇಸರವಿಲ್ಲದ ಆಲಾಪದಂತೆ ಎಡಬಿಡದೆ ಸುರಿಯುವ ಪಾರದರ್ಶಕ ಮಳೆಯಲ್ಲಿ ಒಂದಾಗಿ, 'ಕಲೆಸಿ' ಹೋದಂತಿರುವ ಜಲವರ್ಣದ ನಿಸರ್ಗ...

ಕಲಾವಿದ, ಕೆ.ಬಿ. ಕುಲಕರ್ಣಿಯವರ ಕಲೆಗೆ 'ಪ್ರವೇಶಿಕೆ'ಯಾಗಿ ಈ ಉದ್ದೀಪಿತ ವಾಕ್ಯಗಳನ್ನು ಬರೆದರೆ ಏನೂ ಹೇಳಿದಂತಾಗುವುದಿಲ್ಲ. ''ಅವರ ಬಣ್ಣ ಬೇಸಾಗಿ ಹರಡಿದ ಜಲವರ್ಣಕೃತಿಗಳನ್ನು ನೋಡಿದಾಗ ಉಂಟಾಗುವ ಭಾವನೆಗಳನ್ನು ಶಬ್ದಗಳಲ್ಲಿ ಹೇಳಲಾಗದು'' ಎನ್ನುತ್ತಾರೆ, ಅವರ ಶಿಷ್ಯ, ಸ್ವತಃ ಉತ್ತಮ ಕಲಾವಿದರಾಗಿ ಹೆಸರು ಮಾಡಿರುವ ಜಾರ್ಜ್ ಫರ್ನಾಂಡಿಸ್.

ಅಮೂರ್ತ ಮಾರ್ಗದಲ್ಲೇ ಎಲ್ಲ ಹೊಸ ಕಲಾ ಆವಿಷ್ಕಾರಗಳು, ಪ್ರಯೋಗಗಳು ನಡೆಯುತ್ತಿರುವಾಗ, ಚಿತ್ರಕಲೆಯ ಸುಸಂಗತ ಮೂಲ ಸ್ವರೂಪವೇ ನವನವೋನ್ಮೇಷಶಾಲಿ; ಮೂರ್ತದಲ್ಲೇ ಅಮೂರ್ತವನ್ನು ಹೊಳೆಯಿಸಬಹುದು ಎನ್ನುವ ಸೈದ್ಧಾಂತಿಕ ನಿಲುವು ಹೊಂದಿರುವ ಕೆ.ಬಿ.ಕೆ. ಹಲವು ದಶಕಗಳ ಕಾಲ ಕಲಾಶಿಕ್ಷಕರಾಗಿ, ಹೆಸರು ಮಾಡಿದವರು.



ಸರಳತೆಯಲ್ಲೇ 'ಸೌಂದರ್ಯದ ಸತ್ವ'ವನ್ನು ಮನಗಾಣಿಸುವ ಅವರ ಕ್ರಮ ಅಪರೂಪದ್ದು.

ಕುಲಕರ್ಣಿಯವರ ಕಲಾಕೃತಿಗಳು ದೇಶ-ವಿದೇಶಗಳಲ್ಲಿ, ಕಲಾಸಕ್ತರ ಮನಸೂರೆಗೊಂಡಿವೆ. ಆದರೆ ಅವರು ಹತ್ತಿರದ ಬೆಳಗಾಂನಲ್ಲೇ ಇದ್ದುಕೊಂಡು ಎಲೆಮರೆಯ ಕಾಯಂತೆ, ಇಂದಿಗೂ ನೂರಾರು ಎಳೆಯರಿಗೆ ಮಾರ್ಗದರ್ಶನ ನೀಡುತ್ತಿರುವ ವಿಷಯ



ಪೆನ್ಸಿಲ್ ಸ್ಕೆಚ್

ಅಷ್ಟಾಗಿ ಬೆಳಕಿಗೆ ಬಂದಿಲ್ಲ. ಹಲವು ಅರ್ಜುನರ ದ್ರೋಣಾಚಾರ್ಯನಂತಿರುವ ಈ ಹಿರಿಯ ಕಲಾವಿದನ ಜೀವಿತವೇ ಒಂದು ಕಲೋಪಾಸನೆ ಯಂತಿದೆ.

ಕೆ.ಬಿ.ಕೆ. ಕಲೆಯ ಕುರಿತು ಮಾಡಿರುವ 'ಚಿಂತನೆ' ಯನ್ನು ಅವರ ಮಾತುಗಳಲ್ಲಿ ಕೇಳಿದರೇ ಚೆನ್ನ:

"ನನ್ನ ವಿದ್ಯಾರ್ಥಿ ದಿನಗಳಲ್ಲಿ, 'ಡ್ರಾಯಿಂಗ್ ಕ್ಲಾಸ್'ಗಳೆಂದರೆ ನನಗೆ ತುಂಬಾ ಇಷ್ಟ. ವಾರದಲ್ಲಿ ಎರಡು ದಿವಸ ಇರುತ್ತಿದ್ದ ಅವುಗಳಿಗಾಗಿ ನಾನು ಕಾತರಿಸುತ್ತಿದ್ದೆ. ಕಂಡ, ಆಸಕ್ತಿ ಹುಟ್ಟಿಸಿದ ಎಲ್ಲವನ್ನೂ ರೇಖೆಗಳಿಗಿಳಿಸುವ ನನ್ನ 'ಹುಚ್ಚು' ಅದಾಗಲೇ ಬಲಿತಿತ್ತು. ಕಲೆಯೇ ಉಸಿರಾಗಿದ್ದ ನಾವೊಂದಷ್ಟು ವಿದ್ಯಾರ್ಥಿಗಳು ಬೇರೆ ಯಾವ ಪ್ರಾಪಂಚಿಕ ಚಟುವಟಿಕೆ, ವಿದ್ಯಮಾನಗಳೂ ನಮ್ಮನ್ನು ಅಲ್ಲಾಡಿಸ ದಷ್ಟು, ಅದರೊಳಗೆ ಮುಳುಗಿಹೋಗಿದ್ದೆವು. ಒಂದೊಂದು ಪೆನ್ಸಿಲ್ ಸ್ಕೆಚ್‌ಗಳನ್ನೂ ಒಂದೇ ಸಮನೆ ಐದಾರು ಗಂಟೆ ಗಳತನಕ ಮಾಡುತ್ತಿದ್ದುದು ಈಗಲೂ ನೆನಪಿದೆ.

ಇದೇ ಉತ್ಸಾಹ, ನಂತರ ನಾನು ವಿದ್ಯಾಭ್ಯಾಸ ಮುಗಿಸಿ, ಕಲಾಶಾಲೆಯೊಂದನ್ನು ತೆರೆದು ಹೊಸ ವಿದ್ಯಾರ್ಥಿಗಳಿಗೆ ಕಲಿಸುವ, ಸ್ವತಃ ನಾನೂ ಕಲಿಯುವ ಹಂತದಲ್ಲೂ ತುಂಬಿ ತುಳುಕಾಡುತ್ತಿತ್ತು. ಸುತ್ತಲಿನ ಪ್ರಕೃತಿ, ಜನ ಜೀವನ, ಮಾಡೆಲ್‌ಗಳಾಗಲು ಕಾತರಿ ಸುತ್ತಿದ್ದ ಸಹಶಿಕ್ಷಕರು, ಸಹವಿದ್ಯಾರ್ಥಿಗಳೇ ನಮ್ಮ ಆಸ್ತಿ.

ಎಳೆಯ ಹುಡುಗ ಹುಡುಗಿಯರೆಲ್ಲಾ ಒಂದೆಡೆ ಸೇರಿ, ತೋಚಿದ ವಿಷಯಗಳ ಮೇಲೆಲ್ಲಾ ಚರ್ಚಿಸಿ ಕಲೆಗಾಗೇ ಜೀವ ಮುಡುಪಿಟ್ಟ ವಾತಾವರಣ ಸೃಷ್ಟಿಸಿಕೊಳ್ಳುವಾಗ ಧನ್ಯತೆಯ ಭಾವ ಸುಳಿದಾಡುತ್ತಿತ್ತು. ವಿಶ್ವವಿಖ್ಯಾತ ಕಲಾವಿದರಾದ ಲಿಯೊನಾರ್ಡೊ ಡಾ

## ಕಲಾವಿದ್ಯಾರ್ಥಿಗಳಿ

★ ಕಲೆ, ಯಾವ ಯುಗದಲ್ಲೇ ಆಗಲಿ, ಅಸ್ತಿತ್ವದ ಹುಡುಕಾಟ, ಮೂಲಭೂತ ಚಿಂತನೆ, ಎಂಬುದನ ಮರೆಯದಿರಿ. ವಾಣಿಜ್ಯೀಕರಣಗೊಂಡಿರುವ ಪ್ರಸ್ತುತ ಸಂದರ್ಭದಲ್ಲೂ ಕಲೆ, ಅದರಷ್ಟಕ್ಕೇ ಒಂದು ಗುರಿ ಹೊರತು, ಇನ್ನೇನನ್ನೋ ಸಾಧಿಸಲು ಇರುವ ಮಾರ್ಗವಲ್ಲ ಎಂಬುದನ್ನು ಮನಗಾಣಿರಿ.

★ ಪ್ರಾರಂಭದಲ್ಲಿ ಕಂಡದ್ದೆಲ್ಲಾ, ಕಾಗದಕ್ಕೆ ಗೀಚಿ. ಐದಾರು ಶ್ರೇಣಿಯ ಪೆನ್ಸಿಲ್, ಬೇರೆ ಬೇರೆ ಬಣ್ಣದ, ಮೇಲ್ಮೈಯ ಕಾಗದ ಬಳಸಿ ಚಿತ್ರಿಸುತ್ತಾ ಹೋಗಿ. ಅಂತಿಮವಾಗಿ ಕ್ಯಾನ್ವಾಸ್‌ನಲ್ಲಿ ನೀವೇನು ಚಿತ್ರಿಸಬೇಕೆನ್ನುವುದು ತಂತಾನೇ ನಿರ್ಧಾರವಾಗುತ್ತಾ ಹೋಗುತ್ತದೆ. ಕಲಿಕೆ ಮುಂದುವರೆದಂತೆ ನಿಮ್ಮ ಪ್ರಮಾಣಬದ್ಧತೆ, ಬಣ್ಣ, ನೋಟಗಳ (ಆಯಾಮ)

ಜನನ: ಫೆಬ್ರವರಿ 4, 1920
'ಚಿತ್ರಮಂದಿರ' ಕಲಾ ಶಾಲೆಯ ಪ್ರಾಂಶುಪಾಲರಾಗಿ ಸೇವೆ. (1951-1977ರ ತನಕ)
ಕರ್ನಾಟಕ ರಾಜ್ಯ ಕಲಾಶಿಕ್ಷಣದ ಸಲಹಾ ಸಮಿತಿಯ ಮಾಜಿ ಸದಸ್ಯರು.
ಕರ್ನಾಟಕ ರಾಜ್ಯ ಲಲಿತ ಕಲಾ ಅಕಾಡೆಮಿಯ ಮಾಜಿ ಸದಸ್ಯರು.
ಪ್ರಸ್ತುತ ಶಿನೋಲಿಯ (ಕೊಲ್ಹಾಪುರ) ಜಿ. ಎನ್. ಭಂಡಾರಿ ಕಲಾ ಶಾಲೆಯಲ್ಲಿ ಪ್ರಾಂಶುಪಾಲರು.



## ನನ್ನ ಕಿವಿಮಾತು

ಮೇಲೆ ಹಿಡಿತ ಸಿಗುತ್ತದೆ. ಸಂಗೀತದಂತೇ ಕಲೆಗೂ ಉಗ್ರ ಸ್ವರೂಪದ ರಿಯಾಜ್ ಮುಖ್ಯ!

★ ಕರಾರುವಾಕ್ಕಾಗಿ ಚಿತ್ರೀಕರಿಸುವ (correct representation) ಪ್ರಾಥಮಿಕ ಪಾಠವಾದ ಮೇಲೆ, ಕಲಾಕೃತಿಯೊಂದರಲ್ಲಿ ಏನನ್ನು ಸೇರಿಸಿದರೆ, ಬಿಟ್ಟರೆ ಚೆನ್ನ ಎನ್ನುವ ಅಂಶಗಳೆಲ್ಲಾ ಹೊಳೆಯಲಾರಂಭಿಸುತ್ತವೆ. ನಿಮ್ಮದೇ ಶೈಲಿ ಮೈದಾಳಲು ಆರಂಭವಾಗುತ್ತದೆ. ಸಾಲ್ವದಾರೊ ಡಾಲಿ ಉದ್‌ವಾಸ್ತವಿಕ ಶೈಲಿಯಲ್ಲಿ ಕೆಲವು ಅದ್ಭುತ ಪೇಂಟಿಂಗ್ ಮಾಡಿದ, ವಿರೂಪಗೊಳಿಸುವುದನ್ನೇ ತನ್ನ ಶೈಲಿಯಾಗಿ ಪಿಕಾಸೋ ಮಾಡಿಕೊಂಡ ಎನ್ನುವ ಅಂಶಗಳು ನಿಮ್ಮನ್ನು ದಿಕ್ಕುತಪ್ಪಿಸಬಾರದು.

★ ನಿಮಗೆ ತೀವ್ರವಾಗಿ ಅನಿಸಿದಾಗ ಮಾತ್ರ ರೂಢಿಗತವಲ್ಲದ ಮೇಲಿನ ಶೈಲಿಗಳನ್ನು ಬಳಸಿ. ಎಲ್ಲದಕ್ಕೂ ನಿಮ್ಮ ತೀಕ್ಷ್ಣ ಸಂವೇದನೆ, ಸೂಕ್ಷ್ಮಜ್ಞತೆಗಳೇ ಬಂಡವಾಳ. ಅವುಗಳ ಅಭಾವದಲ್ಲಿ ಕಲೆ ಹುಟ್ಟುವುದಿಲ್ಲ.

★ ಸಂವೇದನೆ, ಸೂಕ್ಷ್ಮತೆಯ ಜೊತೆಗೆ, ನೋಟದ, ಕಾಣ್ಕೆಯ ಪ್ರಾಮಾಣಿಕತೆಯೂ ತುಂಬ ಮುಖ್ಯ. ನೀವು ಸತ್ಯದ ಪಕ್ಷಪಾತಿಗಳಾಗಿದ್ದಾಗ ಮಾತ್ರ ಕಲೆ ನಿಮ್ಮನ್ನು ಒಲಿಯುತ್ತದೆ. ಉತ್ತಮ ಮನುಷ್ಯನಾಗದೆ ಶ್ರೇಷ್ಠ ಕಲಾವಿದನಾಗುವುದು ಎಂದಿಗೂ ಸಾಧ್ಯವಿಲ್ಲ.

★ ನಿಮ್ಮ ವ್ಯಕ್ತಿತ್ವದ ಒಂದು ಅಂಶವೇ ಆಗಿ ಹೊರಹೊಮ್ಮುವ ಕಲೆ, ಸಾಹಿತ್ಯ, ತತ್ವಜ್ಞಾನದ ಬಲದೊಂದಿಗೆ ಮತ್ತೂ ದೈವಿಕವಾಗಬಲ್ಲುದು. ಕಲೆಗೂ-ಸಾಹಿತ್ಯ, ತಾತ್ವಿಕತೆಗೂ ಅವಿನಾಭಾವ ಸಂಬಂಧವಿದೆ. ಕಲೆಯನ್ನು ದೃಶ್ಯಕಾವ್ಯ ಎಂದೂ ಕರೆಯುತ್ತಾರೆ. ನಾನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕಲೆ, ಸಂಗೀತದಂತೆ ಎನ್ನುತ್ತೇನೆ. ಏಕೆಂದರೆ ಸಾಮರಸ್ಯ, ಸಮತೋಲ, ಲಯಜ್ಞಾನ ಇಲ್ಲಿಯೂ ಬೇಕು.

---

ವಿಂಚಿಯ 'ಮೋನಾಲಿಸಾ' ಮತ್ತು ಮೈಕೆಲೇಂಜೆಲೋನ 'ಕ್ರಿಯೇಷನ್ ಆಫ್ ಮ್ಯಾನ್' ಕಲಾಕೃತಿಗಳನ್ನು ಆರಾಧಿಸುತ್ತಿದ್ದೆವು.

ಈಗಿನ ನವ್ಯ, ಉದ್‌ವಾಸ್ತವಿಕ ಶೈಲಿಯ, ಅಮೂರ್ತ ಚಿತ್ರಗಳನ್ನು ನೋಡುವಾಗ, ನನಗೆ ನನ್ನ ಕಲಾಶಾಲೆಯಲ್ಲಿ ಕಳೆದ ಹಿಂದಿನ ದಿನಗಳು ನೆನಪಾಗುತ್ತವೆ. ವಿರೂಪಗೊಳಿಸಿ ಉತ್ಪ್ರೇಕ್ಷೆ ಮಾಡಿ ರೂಢಿಯ ನೋಟ, ಕಾಣ್ಕೆ, ನಿಯಮ, ಪ್ರಮಾಣಗಳನ್ನು ಉಲ್ಲಂಘಿಸುವ ಅಗತ್ಯ ನಮಗೆಂದೂ ಬರಲಿಲ್ಲ. ಹೀಗೆಲ್ಲಾ ಮಾಡುವುದು ಕಲೆಯ ಕುರಿತಾದ ಅರಿವನ್ನು ಹಿಗ್ಗಿಸುತ್ತದೆಯೇ, ಹೊಸ ದಿಕ್ಕಿನೆಡೆ ಕರೆದೊಯ್ಯುತ್ತದೆಯೇ ಎನ್ನುವುದು ಬೇರೆಯದೇ ಆದ ಒಂದು ಚರ್ಚೆ. ನಾನೇನು ಹೇಳಲಿಕ್ಕೆ ಹೊರಟೆನೆಂದರೆ, ಸುತ್ತಲಿನ ಪ್ರಕೃತಿ, ಪರಿಸರ, ಜೀವನ, ನೆಗೆಯುತ್ತಾ ಬಂದು ಕೂತು ರೂಪದರ್ಶಿಗಳಾಗಿ ಸಹಕರಿಸುವ ಗೆಳೆಯರ ನಡುವಲ್ಲಿ, ಚಿತ್ರಕಲೆಯಲ್ಲೇ ಮುಳುಗಿದ್ದ ನಾವು ಅದಷ್ಟರಿಂದಲೇ ಸಂತುಷ್ಟರಾಗಿದ್ದೆವು. ನನಗಂತೂ, ಹಲ್ದಂಕರ್‌ರ ಶಾಲೆಯಲ್ಲಿ ಕೆಲಸಮಯ ಕಲಿತಿದ್ದು ಬಿಟ್ಟರೆ, ಬೇರೆ ಯಾವ ಶಿಸ್ತುಬದ್ಧ, ಪಠ್ಯಕ್ರಮದ



ಪೆನ್ಸಿಲ್ ಸ್ಕೆಚ್



'ಪೇಸ್ಟಲ್ ಆನ್ ಪೇಪರ್'



ತೈಲವರ್ಣಚಿತ್ರ



ತೈಲವರ್ಣಚಿತ್ರ

ಕಲಾಶಿಕ್ಷಣವೂ ದೊರಕಲ್ಲ. ಆದರೆ ವೃತ್ತಪತ್ರಿಕೆ, ನಿಯತಕಾಲಿಕಗಳು, ರಸ್ತೆಬದಿಯ ಅಂಗಡಿಯ ಹಳೇ ಪುಸ್ತಕಗಳು ಈ ಎಲ್ಲವುಗಳಲ್ಲಿ ಲಭ್ಯವಿದ್ದ ಕಲೆಯ ಕುರಿತಾದ ಮಾಹಿತಿ, ಮಾರ್ಗದರ್ಶನ, ಲೇಖನಗಳನ್ನು ಎಚ್ಚರಿಕೆಯಿಂದ ಸಂಗ್ರಹಿಸಿ ಇಟ್ಟುಕೊಳ್ಳುತ್ತಿದ್ದೆ. ಯಾವುದೇ ಕಲಾವಿದನ ಕಲಾಶೈಲಿ, ವಿಶೇಷತೆ, ಆಕರ್ಷಣೆಗಳನ್ನು ಸೈದ್ಧಾಂತಿಕವಾಗಿ ಚರ್ಚಿಸುವುದರ ಬದಲು, ಆತನ ಪೇಂಟಿಂಗ್ಸ್, ಕಲಾಕೃತಿಗಳನ್ನು ಕಲೆಹಾಕುವ ಕಡೆ ನಾವು ಮನಸ್ಸು ಕೊಡುತ್ತಿದ್ದೆವು. ಈ ಬಗೆಯಲ್ಲಿ ಹಳೆಯ ನಿಯತಕಾಲಿಕಗಳಿಂದ ನಾನು ಕಲಿತದ್ದು ಅಪಾರ. ಹಾಗೆ, ನನಗೆ ರೆಂಬ್ರ್ಯಾಂಡ್ಟ್, ಅಗಸ್ಟಸ್ ಜಾನ್, ಸಾರ್ಜೆಂಟ್, ರಸೆಲ್ ಫ್ಲಿಂಟ್ ತುಂಬ ಹಿಡಿಸಿದರು.

ಕಲಾವಿದನನ್ನು ಸೆರೆಹಿಡಿಯುವ ಒಂದು 'ನೋಟ' ಒಂದು ಕಲಾಕೃತಿಯಲ್ಲಿ ಹೇಗೆ, ಯಾವಾಗ, ಯಾಕೆ ಪರ್ಯವಸಾನಗೊಳ್ಳುತ್ತದೆ ಅನ್ನುವುದನ್ನು ಬಿಡಿಸಿ ಹೇಳುವುದು ತುಂಬಾ ಕಷ್ಟ. ನೆರಮನೆಯ ಹುಡುಗಿ ಗೋಡೆಗೊರಗಿ ಪುಸ್ತಕ ಓದುತ್ತಿರುವ ಭಂಗಿ ಆಕರ್ಷಕವಾಗಿದೆ. ಯಾವುದೋ ಭಾವವನ್ನು ಉದ್ದೀಪಿಸುತ್ತದೆ. ಹಾಗೆಯೇ ಬೀದಿಯಲ್ಲಿ ಸಾಗಿಬರುತ್ತಿರುವ ಆ ಭಿಕ್ಷುಕನ ಚಹರೆ. ಇವು ಕಲಾಕೃತಿಗಳಾಗಿ ಮಾರ್ಪಟ್ಟಾಗ ಕಲಾವಿದನಲ್ಲಿ ಸ್ಫುರಿಸಿದ ಭಾವವನ್ನು ಬಿಂಬಿಸುವ ಚೌಕಟ್ಟುಗಳಾಗಿ ಮಾತ್ರ ಉಳಿಯುವುದಿಲ್ಲ. ಇದೆಲ್ಲವನ್ನೂ ಮೀರಿದ 'ಇನ್ನೇನೋ' ಅಲ್ಲಿ ಒಡಮೂಡಬೇಕು. ಪ್ರತಿಯೊಬ್ಬ ಕಲಾವಿದ, ನಿಗೂಢವೆನಿಸುವ ಈ 'ಇನ್ನೇನೋ'ವನ್ನು ಸ್ವತಃ ಶ್ರಮವಹಿಸಿ ಕಂಡುಕೊಳ್ಳಬೇಕಾಗುತ್ತದೆ.



ಜಲವರ್ಣಚಿತ್ರ



ತೈಲವರ್ಣಚಿತ್ರ

ಇಂದಿನ 'ಹೈಟೆಕ್' ಯುಗದಲ್ಲಿ, ಕಲೆಯ ಕಂಪ್ಯೂಟರೀಕರಣ ಆಗುತ್ತಿರುವ ಸಮಯದಲ್ಲಿ, ಚಿತ್ರವಿಚಿತ್ರ 'ಫಾರ್ಮೇಷನ್' 'ಕಾಂಪೋಸಿಷನ್'ಗಳ ಅಬ್ಬರದಲ್ಲಿ 'ರಿಯಲಿಸ್ಟಿಕ್ ಪೇಂಟಿಂಗ್' ಕುರಿತು ತಾತ್ಸಾರ ಹುಟ್ಟಿದೆ. ಬರೆದ ಚಿತ್ರ ಸುಲಭಗ್ರಾಹ್ಯವಾದ ಕತೆಯೊಂದನ್ನು ಹೇಳಿದರೆ, ಅದು ಕಡಿಮೆ ಗುಣ ಮಟ್ಟದ್ದು ಎನ್ನುವ ಆಧಾರರಹಿತ ಮೌಲ್ಯಮಾಪನ ಇದೆ. ನನ್ನ ಪ್ರಕಾರ ಇದೆಲ್ಲ ಬರಿಯ ಅರ್ಥರಹಿತ ಬಡಬಡಿಕೆ. ಅಸಂಖ್ಯ ರೂಪ, ರಂಗು, ವಿನ್ಯಾಸ, ಒಳನೋಟ, ಸಾಂದರ್ಭಿಕ, ಸಾಹಚರ್ಯದ ಅರ್ಥಗಳನ್ನು ಬಚ್ಚಿಟ್ಟುಕೊಂಡಿರುವ ನಿಸರ್ಗವನ್ನು ಕ್ಯಾನ್ವಾಸಿಗಿಳಿಸುವುದು, ಕಗ್ಗಂಟಾಗಿ ರೂಪ ತಳೆಯುವ, ಏನನ್ನೂ ಹೊಳೆಸದ ಫಾರ್ಮುಲೀಕೃತ ಅಮೂರ್ತ ಪೇಂಟಿಂಗ್‌ಗಿಂತ ಎಷ್ಟೋ ಮೇಲು. ಹಾಗೆ ಬಣ್ಣ, ಆಕಾರಗಳ ಕಲಸುಮೇಲೋಗರವಾಗಿ ಮೂಡುವ ಅಮೂರ್ತ ಚಿತ್ರವೇ ಅಮೂರ್ತ ಭಾವನೆಗಳನ್ನು ಹೊಮ್ಮಿಸುತ್ತದೆ, ಹೊಮ್ಮಿಸಲಿ ಎಂಬ ಹಟವೇಕೆ? ನನ್ನ ಪ್ರಕಾರ, ಮೈಕೆಲೇಂಜೆಲೋವಿನ 'ಕ್ರಿಯೇಷನ್ ಆಫ್ ಮ್ಯಾನ್' ಉಕ್ಕಿಸುವ ಅಮೂರ್ತ ಸಂವೇದನೆ, ಕಡಿಮೆಯೇನಲ್ಲ. ಕಲೆಯ ಜಗತ್ತಿನಲ್ಲಿ ಇತ್ತೀಚಿನ ಮನೋಧರ್ಮ ರೂಪದರ್ಶಿಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವತ್ತ ಇಲ್ಲ. ಈ ಕುರಿತೂ ನನ್ನ ವಿರೋಧವಿದೆ. ಸೃಷ್ಟಿಯಲ್ಲಿ ಮನುಷ್ಯ 'ರೂಪ' ದಷ್ಟು ಬೇರಾವುದೂ ನನಗೆ ಆಕರ್ಷಕವಾಗಿ ಕಂಡಿಲ್ಲ.

ಕಲೆಯನ್ನೇ ಉಸಿರಾಡಿ, ಬದುಕಿ, ಬಾಳಿದ ಅದನ್ನು ಇಂದಿನ ದಿನದವರೆಗೂ, ಹಿರಿ-ಕಿರಿಯ ವಿದ್ಯಾರ್ಥಿಗಳಲ್ಲಿ ಹಂಚಿಕೊಂಡ ನನಗೆ ಇಲ್ಲಿಯತನಕ ಕಲೆಯೆಂದರೆ-ಅದೊಂದು ಜೀವಿತದ ಅರಿವನ್ನು ಹಿಗ್ಗಿಸುವ, ಹೊಸ ಕಾಣ್ಕೆ ಹೊಳೆಸುವ, ಬದುಕನ್ನು ಸಹ್ಯ, ಸಮೃದ್ಧ, ಸಾರ್ಥಕವಾಗಿಸುವ ಸೃಜನಶೀಲ, ಸತ್ವಪೂರ್ಣ ಚಟುವಟಿಕೆಯಾಗಷ್ಟೇ ಉಳಿದಿದೆ; ಅದರದ್ದೆಲ್ಲ ನಿಗೂಢತೆ ಕಾಯ್ದುಕೊಂಡು, ಪೌರ್ವಾತ್ಯ, ಪಾಶ್ಚಿಮಾತ್ಯ, ನವ್ಯ, ಹಳೆಯ ಕಲೆಗಳೆಂಬ ವರ್ಗೀಕರಣದ ಕುರಿತು ನಾನು ಅಷ್ಟಾಗಿ ತಲೆಕೆಡಿಸಿಕೊಂಡಿಲ್ಲ.''

ಮಾರ್ಕ್ಸ್‌ವಾದ, 'ಕಾರ್ಮಿಕ ಕಲೆ' ಆವಾಹಿಸಿಕೊಂಡಿರುವ, ಶೋಷಿತರ ವಿರುದ್ಧ ದನಿಯೆತ್ತುವ ಕಲಾಕಾರರು, ಯದ್ವಾತದ್ವಾ ಬೆಲೆಗೆ ತಮ್ಮ 'ಶೋಷಣೆ-ವಿರೋಧಿ'?! ಕಲಾಕೃತಿಗಳನ್ನು ಮಾರುತ್ತಾ, ಅದಕ್ಕಾಗಿ ಬ್ಯೂಟಿಕ್ವೀನ್‌ಗಳು ಮಾಡುವಂತೆ 'ಏಜೆನ್ಸಿ'ಗಳಿಗೆ ಗಂಟುಬೀಳುತ್ತಾ, ಕಲೆ ಮತ್ತು ಅದರ ಬದ್ಧತೆ ಕುರಿತು ಶ್ರೀಸಾಮಾನ್ಯನಲ್ಲಿ ತಿರಸ್ಕಾರ ಪೂರ್ಣ ದಿಗ್ಭ್ರಮೆ ಹುಟ್ಟಿಸುತ್ತಿರುವ ಈ ಗಳಿಗೆಯಲ್ಲಿ, ಈ ಕಲಾಋಷಿಯ ನುಡಿಗಳು ಎಲ್ಲಿಂದಲೋ ಮೊಳಗಿ ಸಾಂತ್ವನ ನೀಡುವಂತೆ ಅನಿಸುವುದು ಸುಳ್ಳಲ್ಲ.

ವರಕವಿ ಬೇಂದ್ರೆ, ಭಾವಿ ಕವಿಗೆ ಹೇಳಿದ ''ಹೃದಯ ದೇಗುಲದಲ್ಲಿ ಒಲವ ಲೆಕ್ಕಣಿಕೆ, ಮಾಡಿ ಬರೆಯೆಲೊ ಹುಡುಗ ನಿನ್ನ ಒಕ್ಕಣಿಕೆ'' ಪಿಸುನುಡಿಯ ತದ್ವತ್ ರೂಪದಂತಿದೆ ಕೆ.ಬಿ.ಕೆಯವರ ಹಿತವಚನ! ■

(ಆಭಾರ: ಮುಂಬಯಿಯ 'ನವನೀತ್ ಪಬ್ಲಿಕೇಷನ್ಸ್' ಮತ್ತು ಶ್ರೀ ಚಂದ್ರಕಾಂತ ಕುಸನೂರ್)



ಸೌಂದರ್ಯ ಮತ್ತು ವೈಚಾರಿಕ ದೃಷ್ಟಿಯಿಂದ ಅತ್ಯಂತ ಪರಿಪೂರ್ಣವಾದಂತಹ 'ಭಾವನಾ' ಮನಸ್ಸಿನಲ್ಲಿ ಇಷ್ಟು ದಿನಗಳವರೆಗಿದ್ದ ರಿಕ್ತಸ್ಥಾನವನ್ನು ಆನಂದದಿಂದ ತುಂಬಿಸಿದೆ.

**ಬೆಳಗಾಂವ ಚಂದ್ರಕಾಂತ ಕುಸನೂರ್**

ಚುಮು ಚುಮು ನಸುಕಿನಲ್ಲಿ, ರೆಂಜೆಮರದ ಕೆಳಗೆ ಬಿದ್ದ ರಾಶಿ ರಾಶಿ ಬಕುಳದ ಹೂಗಳನ್ನು ಕಂಡು ಈ ಮರದಲ್ಲಿ ಇಷ್ಟೊಂದು ಹೂಗಳಿದ್ದವೇ ಎಂದು ಬಾಲ್ಯದಲ್ಲಿ ಉಂಟಾಗುತ್ತಿದ್ದ ಸೋಜಿಗವೇ, 'ಭಾವನಾ'ದಲ್ಲಿನ ಒಳ್ಳೊಳ್ಳೆಯ ಕಥೆಗಳನ್ನು ಕಂಡಾಗಲೂ. ನಿಮ್ಮ 'ಕ್ಯಾನ್‌ವಾಸ್' ಕೂಡ ಕಥೆಯಂತಿದೆ.

**ದೊಡ್ಡತೋಟ ಜಿ.ಎಸ್. ಉಬರಡ್ಕ**

'ಭಾವನಾ'ದ ಕಲಾವಿನ್ಯಾಸ ತುಂಬ ಚೆನ್ನಾಗಿದೆ. ನೀವು ಕತೆಗೋಸ್ಕರ ಚಿತ್ರ ಬರೆಸದೆ, ಚಿತ್ರಕ್ಕೊಂದು 'ಸ್ವಯಮಾಡಳಿತ' ಕೊಡುತ್ತಿರುವುದರಿಂದ ಚಿತ್ರಗಳು ಅರ್ಥಪೂರ್ಣವಾಗುತ್ತವೆ. ಅದೂ ಅಲ್ಲದೆ ಕತೆಯ ಸನ್ನಿವೇಶಗಳನ್ನೇ ಚಿತ್ರೀಕರಿಸಿದ್ದರಿಂದ ಏನು ಬಂದ ಹಾಗಾಯಿತು?

**ಹೈದರಾಬಾದ್ ಕೆ.ವಿ. ತಿರುಮಲೇಶ**

ಕನ್ನಡದಲ್ಲಿ ಆಸಕ್ತಿ ಇರುವ ಎಲ್ಲರಿಗೂ ಇಂಥ ಒಂದು ಒಳ್ಳೆಯ ಪತ್ರಿಕೆ ಬೇಕು. ನಿಮ್ಮ ಪ್ರಯತ್ನ ಯಶಸ್ವಿಯಾಗುವುದು ಅಪೇಕ್ಷಣೀಯವಲ್ಲ, ಅಗತ್ಯ.

**ಮೈಸೂರು ಡಿ.ಎ. ಶಂಕರ್**

ದೂರದ ಹಾಸ್ಟೆಲಿನಲ್ಲಿರುವ ವಿದ್ಯಾರ್ಥಿಗೆ ತಂದೆ ಬರೆದ ಪತ್ರದಂತೆ, ಎದೆಗೆ ಸಮೀಪ ಅಚ್ಚಾಗಿ ಬಂದಂತೆ ಭಾಸವಾಗುತ್ತದೆ 'ಭಾವ[...] ಶಬ್ದತೀರವಂತೂ ನಮ್ಮ ಯೋಚನಾಲ[...] ಇಂಧನ ತುಂಬುತ್ತದೆ.

**ಸಾಗೂರು ಎ. ಗಿರೀಶ್ ಐತ[...]**

ನಿಮ್ಮ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟ[...] 'ದುಸ್ತೀನ್ ಬಾಯಿಯ ಮನೆಮಾರು' ನ[...] ಇತ್ತೀಚಿನ ದಿನಗಳಲ್ಲಿ ಓದಿದ ಅದ್ಭುತ ಕತೆ.

**ಬೆಂಗಳೂರು ಶೂದ್ರ ಶ್ರೀನಿವಾ[...]**

ಕಾಲಘಟ್ಟದ 'ಕ್ಯಾನ್‌ವಾಸ್' ವೆ[...] ಮೂಡಿದ ಬದುಕ ಚಿತ್ರದ ಮಾದರಿ ಕು[...] ಬೇಗ ಗುಣಮುಖನಾಗಲಿ.

**ಸಿಂಧನೂರು ಕನಕ ಹಿರೇ[...]**

ಕತೆಗಳು ಗುಣಮಟ್ಟದ ಭಾರದಿಂದ[...] ಸಹಜವಾಗಿ ಉಸಿರಾಡಲು ಹೆಣಗುತ್ತಿವೆ. ಸ[...] ನೇರ ಕತೆಗಳನ್ನು ಹೆಚ್ಚು ಪ್ರಕಟಿಸಿ.

**ಬೆಂಗಳೂರು ಶ್ರೀನಿವಾಸ್ ಬೀದ[...]**

ಹೊಸಮುಖಗಳಿಗೆ ಪರಿಚಯಿಸಿಕೊ[...] ಸದವಕಾಶ ನೀಡಿದ ನಿಮಗೆ ಇಡೀ ಯ[...] ಸಾಹಿತ್ಯಲೋಕದ ಪರವಾಗಿ ಕೃತಜ್ಞತೆಗಳು.

**ರಾಮದುರ್ಗ ಆರ್. ಶ್ರೀ[...]**

ಎಲ್ವರ್ತ್ ಮೊರಾವಿಯಾ ಅ[...] 'ವಸ್ತುಗಳು', ಜತು ನಿಡ್ಲೆಯವರ ಸುಳಿ, [...] ಡಿಸೋಜರ ಮನ್ನಣೆ ವಿಶೇಷವಾಗಿ ಹಿಡಿಸಿದ[...]

**ಕಿಡದಾಳ ಶೇಖರಗೌಡ ಮಾಲಿಪಾಟೀ[...]**

ಜತುನಿಡ್ಲೆಯವರ 'ಸುಳಿ' ಕತೆಯ ಶೈಲಿ ಸೆ[...]ಸಾಗಿತ್ತು. ಬುಡಕಟ್ಟು ಜನಾಂಗದ ಭಾಷೆ ನುಡಿ[...]ಗಳನ್ನು ಉತ್ತಮವಾಗಿ ಬೆಸೆದು ಕಥೆ ಹೆಣೆದಿದ್ದಾ[...]

**ಇಳಂತಿಲ ಲಿಂಗಪ್ಪ ಎ[...]**

'ತಂದೆಯೇ ಅವರನ್ನು ಕ್ಷಮಿಸು' ಕಥೆ ಜೀವನಕ್ಕೊಂದು ಉತ್ತಮ ಪಾಠದಂತಿದೆ.

**ಶಿವಮೊಗ್ಗ** **ಅನ್ನೀಹಾಳ್ ಈಶ್ವರಪ್ಪ**

ನಾ. ಮೊಗಸಾಲೆಯವರ 'ಸುಂದರಿಯ ಎರಡನೇ ಅವತಾರ' ಸಾಮಾಜಿಕ ಕಳಕಳಿಯ, ನೈಜಚಿತ್ರಣದ ಸುಂದರ ಕಥೆ. ಆದರೆ ಅಂಥ ಸಹಜ ಸುಂದರಿಯರು ಎಲ್ಲಿದ್ದಾರೆ?

**ನಾಗೂರು** **ಎ.ಜಿ. ಐತಾಳ್**

ಯಾಕೋ ಏನೋ ಅಕ್ಟೋಬರ್ ಸಂಚಿಕೆಯ ಕಥೆಗಳಲ್ಲಿ 'ಕಾಮ' ಪ್ರಧಾನವಾಗಿ ಇಣುಕಿದೆ ಅನ್ನಿಸಿತು.

**ಕೋಲಾರ** **ಎಚ್.ಕೆ. ರಾಘವೇಂದ್ರರಾವ್**

ಸವಿತಾ ಅವರ 'ವಿಜೇತೆ' ಕಥೆ ಚೆನ್ನಾಗಿದೆ. ರಾಜು ಹೆಗಡೆ ಕವನಗಳು ಉತ್ತಮವಾಗಿ ಮೂಡಿ ಬಂದಿದೆ.

**ಹಡಿನಬಾಳ** **ವಿಶ್ವನಾಥ್ ಹೆಗಡೆ**

'ಭಯ'ದಲ್ಲಿ ನಾಯಕನ ತೊಳಲಾಟ, ಭಯ, ಆತಂಕದ ಕ್ಷಣಗಳು ಮೈನವಿರೇಳಿಸುತ್ತವೆ.

**ಜಾನೇಕಲ್** **ಚಂ. ಚನ್ನಬಸವಪಾಟೀಲ್**

ಸೂ. ರಮಾಕಾಂತರ 'ಅಧೀನ' ಕತೆಯಲ್ಲಿ 'ಮನಸ್ಸೆಂಬುದು ಗೊತ್ತುಗುರಿಯಿಲ್ಲದೆ ಅಲೆಯುವ ಧೂಮಕೇತು' ಎಂಬ ಮಾತಿದೆ. ಅಂತೆಯೇ ತಮ್ಮ ಪರಿಧಿಯ ಅರಿವಿದ್ದೂ, ಇಲ್ಲದವರಂತೆ ವರ್ತಿಸುತ್ತಲೇ ಪರಸ್ಪರರನ್ನು ಅರ್ಥೈಸಿಕೊಳ್ಳುವ ಪಾತ್ರಗಳ ಚಿತ್ರಣ ಮೆಚ್ಚುಗೆಯಾಯಿತು.

**ಮಂಡ್ಯ** **ನೀಲಿ**

ಎಚ್. ಗಿರಿಜಮ್ಮ ಅವರ 'ಹಳೆಯ ಮಧುರ ಹಾಡು' ಸವಿನೆನಪುಗಳನ್ನು ಮೀಟುವ ಸುಂದರ ಶೈಲಿಯಲ್ಲಿದೆ.

**ಕಲ್ಲುಕೊಪ್ಪ** **ಕೆ. ಶಿಲ್ಪ**

'ಮಲ್ಲಿಗೆ ನಗೆಯ ದೊರೆ' ಒಂದು ಅಪರೂಪದ ಜಾನಪದ ಕತೆ. ಓದಿ ಮನೆ ಮಕ್ಕಳೆಲ್ಲಾ ಖುಷಿಪಟ್ಟೆವು.

**ಗುಂಟೂರು** **ಚಿಂಟಿ, ಟಿಂಕು, ಬುಜ್ಜಿ**

ವಿಚಿತ್ರಲೋಕಗಳನ್ನು ಕಣ್ಣಮುಂದೆ ತೆರೆದಿಡುವ ಕುಂವೀ ಬರೆವಣಿಗೆ ಬಳ್ಳಾರಿಯ ಗಂಡು ಮೆಟ್ಟಿನ ನೆಲದಷ್ಟೇ ಸಶಕ್ತವಾದುದು. ಅಂಕಣ ನಗು ಮತ್ತು ಚಿಂತನೆಯನ್ನು ಒಟ್ಟಿಗೇ ಹುಟ್ಟು ಹಾಕಿತು.

**ರಾಯಚೂರು** **ದಸ್ತಗೀರ ಸಾಬ್ ದಿನ್ನಿ**

ತಮ್ಮ ಅನನ್ಯಶೈಲಿಯಿಂದ ಆಪ್ತರೆನಿಸುವ ಕುಂವೀ ಮಾಸ್ತರು ಪ್ರತಿ ತಿಂಗಳೂ ತಮ್ಮ ಅಂಕಣದೊಂದಿಗೆ 'ಭಾವನಾ'ದಲ್ಲಿ ಕಾಣಿಸಿಕೊಳ್ಳುವುದು ಸಂತಸದ ಸಂಗತಿ. ಭಳಾರೇ ಭಳಾ!

**ಮಳ್ಳಿ** **ವಿಜಯೇಂದ್ರ ಕುಲಕರ್ಣಿ**

ದುಪ್ಟೀ ಕಮೀಷನರು, ಮುನಸೋಬರು, ಪಾರಲಿಮೆಂಟು, ಸುಪರೀಮು ಕೋರುಟು, ರಿಣಾನುಭಂದ... ಯಾಪಾಟಿ ಛಂದ ಬರದಾರಲ್ಲೇ ನಮ್ಮವ್ವಾ...!

**ವಿಜಾಪುರ** **ಸುಮಂಗಲಾ ಬಾದರದಿನ್ನಿ**

ನಕ್ಕೂ ನಕ್ಕೂ ಸುಸ್ತಾಯಿತು.

**ಸಂತೆಬೆನ್ನೂರು** **ಮಳಲಕೆರೆ ಬಸವರಾಜು**

'ಮಧುವನ'ದಲ್ಲಿ ಮೂಡಿಬಂದಿರುವ ಬೆಳ್ಳಕ್ಕಿಗಳು ಲಲಿತ ಪ್ರಬಂಧ ತುಂಬ ಹೃದ್ಯವಾಗಿದೆ.

**ಮೈಸೂರು** **ಎಸ್. ಪ್ರಕಾಶ್**

ಹಾಡು, ನಾಟಕ, ಸಂಭಾಷಣೆ, ಆತ್ಮಕತೆ, ಸಂದರ್ಶನಗಳನ್ನೊಳಗೊಂಡ ಸವಿತ ಅವರ 'ಸ್ತ್ರೀಲೋಕ' ಕಾದಂಬರಿಯ ಉಲ್ಲೇಖ ನಿಮ್ಮ ಸಂಪಾದಕೀಯದಲ್ಲಾಗಲಿ, ವಿವೇಕ ಶಾನಭಾಗರ ಅಂಕಣದಲ್ಲಾಗಲಿ ಇಲ್ಲದಿರುವುದು ಸೋಜಿಗ.

**ಶಂಕರಘಟ್ಟ** **ಸರ್ವಮಂಗಳಾ**

**ಸವಿತಾ ನಾಗಭೂಷಣರ 'ಸ್ತ್ರೈಲೋಕ', ಕೇಶವ ಮಳಗಿಯವರ 'ಕುಂಕುಮ ಭೂಮಿ', ಇನ್ನೂ ಹಲವು ಕಾದಂಬರಿಗಳ ಉಲ್ಲೇಖ ಪ್ರಮಾದವಶಾತ್ ಬಿಟ್ಟು ಹೋಗಿದೆ.**





# ಕೊನೇ-ಸಿಪ್

ಚಂದಮಾ

■ ವೈ ಎಸ್ಕೆ ಒಮ್ಮೆ, ಸುಂದರಿ ಜಾಹಿರಾ 'ಥೂ' ಎಂದರೂ ಜಾಹಿರಾತು ಎಂದಿದ್ದರು. ಈಗ ಟಿವಿ ಮ ಕುಳಿತವರೆಲ್ಲಾ 'ಥೂ' ಎಂದರೂ ಅವುಗಳ ಕಾಟ ತಪ್ಪುತ್ತಿಲ್ಲ. ಜಾಹಿರಾತು ಬಂದ ತಕ್ಷಣ ತಂತಾನೆ ' ಆಗಿ, ಮತ್ತೆ ಕಾರ್ಯಕ್ರಮ ಪುನರಾರಂಭಗೊಂಡ ತಕ್ಷಣ ಆನ್ ಆಗುವ ನವೀನ ತಾಂತ್ರಿಕತೆಯ ಮಾಡೆಲ್ ಒಂದು ಬಂದಿದೆಯೆಂದು ಸುದ್ದಿ.

■ ಸಚಿನ್‌ನನ್ನು ಸೆಂಚುರಿಗೆ ಸೆಂಚುರಿ, ಅರ್ಧಸೆಂಚುರಿಗೆ ಅರ್ಧಸೆಂಚುರಿ, ಡಕ್ಕಿಗೆ ಡಕ್ಕಿನಿಂದ ಮ ಮಾಡುತ್ತಿದ್ದ ಗಂಗೂಲಿ, ಅವನು ಮದುವೆಯಾದಾಗ ತಾನೂ ಮದುವೆಯಾದ. ಸಚಿನ್ ಹ ಗರ್ಭಿಣಿಯಾದಾಗಲೇ ಗಂಗೂಲಿ ಹೆಂಡತಿಯೂ ಗರ್ಭಧರಿಸಿದಳು. ಹೆರಿಗೆಯೂ ಒಂದೇ ಆಯಿತು. ಕ್ರೀಡಾಪ್ರೇಮಿಗಳು ಇಬ್ಬರನ್ನೂ ಕ್ರಮವಾಗಿ ಕೋಲಾ ಮತ್ತು ಪೆಪ್ಸಿ ಬಾಟಲುಗಳೊ ಅಭಿನಂದಿಸಿದರು. ಆದರೆ ತನಗೆ ಒಂದು ಮಗುವಾದರೆ, ಸಚಿನ್‌ಗೆ ಅವಳಿ ಜವಳಿ ಆಗಿದ್ದು ಗಂಗೂ ಅಚ್ಚರಿ. 'ಎಲ್ಲದರಲ್ಲೂ ಜೊತೆಗಿರುತ್ತಿದ್ದ ನೀನು ಇದರಲ್ಲಿ ಮಾತ್ರ ನನ್ನನ್ನು ಮೀರಿಸಿದ್ದರ ಗುಟ್ಟೇನು?' ಎ ಗಂಗೂಲಿ ಕೇಳಿದಾಗ, ಸಚಿನ್ ಸ್ಟೈಲಾಗಿ, 'ಬೂಸ್ಟ್ ಈಸ್ ದ ಸೀಕ್ರೆಟ್ ಆಫ್ ಮೈ ಎನರ್ಜಿ' ಅಂ ತಕ್ಷಣ ಹಿಂದುಗಡೆಯಿಂದಲ್ಲೋ ಬಂದ 'ಪಂಜಾಬೀ ಶೇರ್' ಕಪಿಲ್, 'ಅವರ್ ಎನರ್ಜಿ' ಎ ಬಿಡಬೇಕೆ?

■ ದರದರ ಎಳೆಸಿಕೊಂಡು ಹೋಗುತ್ತಿದ್ದವಳನ್ನು ರೈಲ್ವೆಪ್ಲಾಟ್‌ಫಾರ್ಮಿನಲ್ಲಿ ನಿಂತ ಜನ ನೋಡುತ್ತಲೇ ಇ ಅವಳಿಗೆ ಏನೋ ನೆನಪಾಗಿ ರೇಗಿಹೋಯ್ತು. ತಟ್ಟನೆ ಕೈಕೊಡವಿ ಕಿರಲಿದಳು, "ಮಾತಾಡೋ ಒಂದ್ಕಡೆ ನಿಂತು ಮಾತಾಡು. ನೀನು ಎಳೆದುಕೊಂಡು ಹೋದ ಕಡೆಗೆಲ್ಲಾ ಬರೋಕೆ ನಾನೇನು ಅಜ ದೇವಗನ್, ಅನಿಲ್‌ಕಪೂರ್ ಕೈಲಿ ಪದೇ ಪದೇ ಎಳೆಸಿಕೊಳ್ಳೋ ಐಶ್ವರ್ಯರೈನೇ?"

■ ಆಗಸ್ಟ್ 15ರಂದು ಟಿವಿಯಲ್ಲಿ ರಾಷ್ಟ್ರಗೀತೆ ಬರುತ್ತಿದೆ. ಮಧ್ಯದಲ್ಲಿ ಪ್ರತ್ಯಕ್ಷವಾಯಿತೊಂದು ಬೋ 'ಅಡಚಣೆಗಾಗಿ ಕ್ಷಮಿಸಿ' ಅಂತಲ್ಲ! 'ರಾಷ್ಟ್ರಗೀತೆಯ ಉಳಿದಭಾಗ ಜಾಹೀರಾತಿನ ನಂತರ'! - ಹಿಂದೊಮ್ಮೆ ಪ್ರಕಟವಾದ ಕಾರ್ಟೂನ್.

■ ಜಾಹಿರಾತು ಪ್ರಿಯ ಗೆಳೆಯನೊಬ್ಬ ಕ್ರಿಕೆಟ್ ಅರ್ಥವಾಗದಿದ್ದರೂ ಕ್ರಿಕೆಟಿದ್ದಾಗ ತಪ್ಪದೆ ಟಿವಿ ಮ ಕೂರುತ್ತಿದ್ದ. ಓವರ್‌ಗಳ ಮಧ್ಯೆ ಮೂಡಿಬರುವ ಹೊಸ ಜಾಹಿರಾತುಗಳ ಹೊಸ ಚೆ ಹುಡುಗಿಯವರನ್ನು ನೋಡುವ ತೀರದ ಹುಚ್ಚು ಅವನಿಗೆ. 'ಜಾಹಿರಾತುಗಳ ಉಳಿದ ಭಾಗ ಈ ಓ ನಂತರ' ಎಂದೇಕೆ ತೋರಿಸಬಾರದು ಎಂದವನ ಆಕ್ಷೇಪ.

('ಕೊನೇಸಿಪ್'ನ ಉಳಿದ ಭಾಗ ಜಾಹಿರಾತಿನ ನಂತರ!)

■ **ಕಚಗುಳಿ :** ತೆನಾಲಿರಾಮಕೃಷ್ಣನೋ, ಬೀರಬಲ್ಲನೋ ಕಾಗೆ ಎಣಿಸಿದ ಕಥೆ ಗೊತ್ತಲ್ಲ? ಈಗ ಅಂಥದ್ದೆ ಒ ಪ್ರಶ್ನೆ: 'ಇರುವ ಸಾರ್ವಜನಿಕ ಮೂತ್ರಿಗಳನ್ನು ಹೊರತುಪಡಿಸಿ ರಾಜಧಾನಿಯ ಪ್ರಮುಖ ಬೀದಿ ಕೂತು, ನಿಂತು, ಬಗ್ಗಿ, ಮೂತ್ರ ವಿಸರ್ಜಿಸುವ ಪುರುಷರ ಸರಾಸರಿ ಸಂಖ್ಯೆ ಎಷ್ಟು?'
ಫಟ್ಟನೆ ಉತ್ತರಿಸಿದರೆ ಗುಲಾಬ್‌ಶೌಚಾಲಯಕ್ಕೆ ಒಮ್ಮೆ ಫ್ರೀ ಎಂಟ್ರಿ!

Printed, published and owned by **Vijay Sankeshwar**, Published at 1st Floor, "Giriraj Annexe", P.W.D. Circuit House Road, HUBLI - 580 029 Karnataka Ph: 253656, 253657, 253658. Fax: 0836-25
Printed at Anand Printers & Publishers, 6/127, 5th Cross, KPN Extn., Bangalore - 560 002
Editor: **Jayant Kaikini**

BHAVANA - Monthly November 2000 AFD. CR. 1/2000-01

# D.N.D. Lorven Industries

No. 55, 1st 'A' Main Road, Mahalakshmi Layout
Bangalore - 560 086. Ph. : 3497991










## WANTED DISTRIBUTORS

## ಅಧಿಕೃತ ದಾಸ್ತಾನುಗಾರರು ಬೇಕಾಗಿದ್ದಾರ

ಡಿ.ಎನ್.ಡಿ. ಲಾರ್ವೆನ್ ಇಂಡಸ್ಟ್ರೀಸ್
ರವರಿಂದ
ನವಶೈಲಿಯ 60 ಗೃಹ ಬಳಕೆಯ
ಉತ್ತಮವಾದ ವಸ್ತುಗಳನ್ನು
ಪ್ರಸ್ತುತಗೊಳಿಸಿದೆ.












ನಮ್ಮ ಕುಟುಂಬದ ಸಂಪೂರ್ಣ ಸುರಕ್ಷತೆಗೆ
ಯಾವಾಗಲೂ ನಾನು ಜೈ ಕಿಸಾನ್ ಗೃಹ ಬಳಕೆಗಳನ್ನೇ ಉಪಯೋಗಿಸುತ್ತೇನ